ಮನುಷ್ಯ ಜಾತಿ ತಾನೊಂದೆ ವಲಂ

# ಕನ್ನಡ ನಾಡಿನ ಶಾಸನಕವಿಗಳು

ಮೇವುಂಡಿ ಮಲ್ಲಾರಿ

೭೯ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ, ಬಿಜಾಪುರ

# ಕನ್ನಡನಾಡಿನ ಶಾಸನಕವಿಗಳು

ಮೇವುಂಡಿ ಮಲ್ಲಾರಿ



ಕನ್ನಡ ಸಾಹಿತ್ಯ ಪರಿಷತ್ತು
ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ
ಬೆಂಗಳೂರು- ೫೬೦೦೧೮

ಕನ್ನಡನಾಡಿನ ಶಾಸನಕವಿಗಳು
ಮೇವುಂಡಿ ಮಲ್ಲಾರಿ

ಪ್ರಕಾಶಕರು :
ಕನ್ನಡ ಸಾಹಿತ್ಯ ಪರಿಷತ್ತು
ಪಂಪಮಹಾಕವಿ ರಸ್ತೆ,
ಚಾಮರಾಜಪೇಟೆ
ಬೆಂಗಳೂರು – ೫೬೦ ೦೧೮



ಮುಖಪುಟ ವಿನ್ಯಾಸ : ಫ್ಲವರ್‌ಗ್ರಾಫಿಕ್
ಪುಟಗಳು : ೩೩೦
ಮುದ್ರಣ ಕಾಗದ : ೭೦ ಜಿ.ಎಸ್.ಎಂ.
ಎನ್.ಎಸ್.ಮ್ಯಾಪ್‌ಲಿಥೋ
ಬೆಲೆ : ರೂ.೧೫೦=೦೦
ಪ್ರಥಮ ಮುದ್ರಣ ವರ್ಷ : ೧೯೬೩
ದ್ವಿತೀಯ ಮುದ್ರಣ ವರ್ಷ : ೧೯೭೪
ಪರಿಷತ್ತಿನಿಂದ ಪ್ರಥಮಾವೃತ್ತಿ : ೨೦೧೩
ಪ್ರತಿಗಳು : ೧೦೦೦

ಸ್ಕ್ಯಾನಿಂಗ್
ಲಕ್ಷ್ಮಿ ಮುದ್ರಣಾಲಯ
ಚಾಮರಾಜಪೇಟೆ, ಬೆಂಗಳೂರು – ೧೮
ಮುದ್ರಣ
ಬಿ.ಎಂ.ಶ್ರೀ. ಅಚ್ಚುಕೂಟ ಆಫ್‌ಸೆಟ್
ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ
ಬೆಂಗಳೂರು – ೫೬೦ ೦೧೮

ISBN - 978 - 93 - 82446 - 01 - 9

*KANNADA NAADINA SHAASANA KAVIGALU*
A collection of inscriptions in Kannada by **Mevundi Mallari**
published by :
**Kannada Sahitya Parishattu**
Pampa Mahakavi Road
Chamarajapete
Bengaluru - 560018



Cover Page : Flowergrafic
Pages : 330
Paper : 70 G.S.M. N.S. Maplitho
Rs. **150=00**
First Edition : 1963
Second Edition : 1974
Edition by Parishattu : 2013
Copies : 1000
**Scanned at**
**Lakshmi Printers**
Chamarajapete, Bengaluru - 18
**printed at**
**B.M. Sri Acchukoota Offset**
Kannada Sahitya Parishattu
Chamarajapete, Bengaluru - 560018

# ಅಧ್ಯಕ್ಷರ ನುಡಿ

ಕನ್ನಡ ಪುಸ್ತಕ ಪ್ರಕಾಶನೋದ್ಯಮ ಇಂದು ಹುಲುಸಾಗಿ ಬೆಳೆದಿದೆ. ವರ್ಷಕ್ಕೆ ಪ್ರಥಮಾವೃತ್ತಿಯ ಸುಮಾರು ಮೂರು ಸಾವಿರದಷ್ಟು ಪುಸ್ತಕಗಳು ಪ್ರಕಟವಾಗುತ್ತಿವೆ. ಅವಲ್ಲದೆ ಸಹಸ್ರಾರು ಮರುಮುದ್ರಣಗಳು ಹಾಗೂ ಲೆಕ್ಕಕ್ಕೆ ಬಾರದ ಸಾವಿರಾರು ಪುಸ್ತಕಗಳು ಪ್ರಕಟಣೆಯಾಗುತ್ತಿವೆ. ಈ ಉದ್ಯಮಕ್ಕೆ ಸಾರ್ವಜನಿಕ ಕ್ಷೇತ್ರದ ಕೊಡುಗೆಯೂ ಕಡಿಮೆಯಲ್ಲ. ರಾಜ್ಯದ ವಿವಿಧ ವಿಶ್ವವಿದ್ಯಾನಿಲಯಗಳು, ವಿವಿಧ ಅಕಾಡೆಮಿಗಳು, ಪುಸ್ತಕ ಪ್ರಾಧಿಕಾರ, ಸಾಹಿತ್ಯ ಪರಿಷತ್ತಿನಂಥ ಸಾರ್ವಜನಿಕ ಸಂಸ್ಥೆಗಳು ನಿರಂತರವಾಗಿ ಪುಸ್ತಕಗಳನ್ನು ಪ್ರಕಟಿಸುತ್ತಲಿವೆ. ಖಾಸಗಿ ಪ್ರಕಾಶನ ಸಂಸ್ಥೆಗಳಂತೂ ಪೈಪೋಟಿಯಿಂದಲೇ ಪುಸ್ತಕ ಪ್ರಕಾಶನದಲ್ಲಿ ತೊಡಗಿವೆ.

ಈ ಎಲ್ಲ ಪ್ರಕಾಶನ ಸಂಸ್ಥೆಗಳು ಬಹುಮಟ್ಟಿಗೆ ಸಮಕಾಲೀನ ಕನ್ನಡ ಸಾಹಿತ್ಯ ಹಾಗೂ ವಿವಿಧ ಪ್ರಕಾರದ ಬರವಣಿಗೆಗಳ ಪ್ರಕಟಣೆಗೆ ಒತ್ತುನೀಡುತ್ತಿರುವುದು ಸಹಜವೇ ಆಗಿದೆ. ಆದರೆ ಸಮಕಾಲೀನ 'ಹೊಸ ಚಿಗುರಿ'ಗೆ ಆಗಿಂದಾಗ್ಗೆ 'ಹಳೇ ಬೇರು'ಗಳ ರಸ ಹಾಗೂ ಶಕ್ತಿಯ ಸ್ಪರ್ಶವಾಗಬೇಕಾದುದು ಅತ್ಯಗತ್ಯ. ಈ ದಿಸೆಯಲ್ಲಿ ಪರಿಷತ್ತು, ಕನ್ನಡ ಓದುಗರು ಮತ್ತು ಸಾಹಿತ್ಯಾಸಕ್ತರು ಎಂದಿಗೂ ಮರೆಯಬಾರದ ಲೇಖಕರು ಹಾಗೂ ಕೃತಿಗಳನ್ನು ಮತ್ತೆ ಮರುಮುದ್ರಿಸಿ, ಅವರ ಮುಂದಿರಿಸುವ ಮೂಲಕ, ಒಂದು ನೂತನ ಪರಂಪರೆಯನ್ನು ಪ್ರಾರಂಭಿಸಿರುತ್ತದೆ. ಈ ಕಾರ್ಯಕ್ಕೆ ವಿಜಾಪುರದ ೭೯ನೇ ಅಖಿಲ ಭಾರತ ಸಾಹಿತ್ಯ ಸಮ್ಮೇಳನ ಒಂದು ಸುಸಂದರ್ಭವಾಗಿ ಒದಗಿ ಬಂದಿದೆ.

ಈ ಸರಣಿಯಲ್ಲಿ ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಮಹತ್ತ್ವದ ಸ್ಥಾನವನ್ನು ಪಡೆದಿರುವ ಇಪ್ಪತ್ತೈದು ಕೃತಿಗಳನ್ನು ಆಯ್ದು ಪ್ರಕಟಿಸಲಾಗುತ್ತಿದೆ. ಇದೊಂದು ಪುಟ್ಟ ಪ್ರಯತ್ನವೆಂಬ ನಮ್ರ ಭಾವನೆ ನನಗಿದೆ. ಮರೆಯಬಾರದ ಈ ಇಪ್ಪತ್ತೈದು ಕೃತಿಗಳನ್ನು ಕನ್ನಡ ಓದುಗರು ಹಾಗೂ ಸಾಹಿತ್ಯಾಸಕ್ತರು ವಿಶೇಷ ಪ್ರೀತಿ ಅಭಿಮಾನಗಳಿಂದ ಸ್ವಾಗತಿಸುತ್ತಾರೆಂದು ನಂಬಿದ್ದೇನೆ.

ಈ ಕೃತಿಗಳ ಮರುಮುದ್ರಣಕ್ಕೆ ಒಪ್ಪಿಗೆ ನೀಡಿ ಸಹಕರಿಸಿದ ಸಂಬಂಧಪಟ್ಟ ಎಲ್ಲ ಹಕ್ಕುದಾರರಿಗೆ ಹಾಗೂ ಪ್ರಕಟಣೆ ಕಾರ್ಯದಲ್ಲಿ ನೆರವಾದ ಎಲ್ಲರಿಗೆ ನನ್ನ ಕೃತಜ್ಞತೆಗಳು.

**ಪುಂಡಲೀಕ ಹಾಲಂಬಿ**
ಅಧ್ಯಕ್ಷರು

## ಬರೆದಾತನ ಮಾತು

ಬಾಳಹೋರಾಟದಿಂದ ಬಿಡುವು ದೊರೆತಾಗಲೆಲ್ಲ ಕನ್ನಡನಾಡಿನ ಶಾಸನಗಳನ್ನು ಓದುತ್ತ ಟಿಪ್ಪಣಿ ಮಾಡಿಕೊಳ್ಳುತ್ತ ಬಂದಿದ್ದೆ. ಈ ಟಿಪ್ಪಣಿಗಳನ್ನು ಪರಿವಿಡಿಸಿ ಶಾಸನಕವಿಗಳ ಪರಿಚಯವನ್ನು ಒಂದು ರೂಪಕ್ಕೆ ತಂದು, ಬರೆದು, ಪ್ರಸಿದ್ಧಿಸಿದೆ. ಹಿಂದಿನ ಆವೃತ್ತಿಯಲ್ಲಿ ಪರಿಚಯಿಸಲಾದ ಶಾಸನಕವಿಗಳು ಅಯ್ವತ್ತೊಬ್ಬರು, ನಂತರ, ನಾನು ಮತ್ತೆ ಟಿಪ್ಪಣಿ ಹಾಕಿಕೊಂಡ ಹೆಚ್ಚಿನ ಶಾಸನ ಕವಿಗಳನ್ನೂ ಸೇರಿಸಿ – ಇದೀಗಿನ ವಿಸ್ತೃತ ಆವೃತ್ತಿಯಲ್ಲಿ, ಮತ್ತೆ ನೂರೆಂಟು ಹೊಸ ಕವಿಗಳು ಸೇರ್ಪಡೆ ಹೊಂದಿ ಒಟ್ಟು ನೂರೈವತ್ತೊಂಬತ್ತು ಕವಿಗಳ ಪರಿಚಯ ಮಾಡಿಕೊಡಲು ಸಾಧ್ಯವಾದುದು ನನ್ನ ಭಾಗ್ಯವೇ ಸರಿ.

ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ದೊಡ್ಡ ದೊಡ್ಡ ಮೂರು ಸಂಪುಟಗಳಲ್ಲಿ ಕರ್ಣಾಟಕ ಕವಿಚರಿತೆಗಳನ್ನು ಬೆಳಕಿಗೆ ತಂದ ಅದ್ಭುತ ಕಾರ್ಯದಿಂದ ಕೀರ್ತಿಶೇಷ ಆರ್. ನರಸಿಂಹಾಚಾರ್ಯರು ಪ್ರಾತಃಸ್ಮರಣೀಯರಾಗಿದ್ದಾರೆ. ಅವರಲ್ಲಿ ಶಾಸನಕವಿಗಳೂ ಕೆಲವರಿದ್ದಾರೆ. ನನ್ನೀ ನೂರೈವತ್ತೊಂಬತ್ತು ಕವಿಗಳಲ್ಲಿ ಕೆಲವರು ಮಾತ್ರ ಅಲ್ಲಿ ಕಾಣದೊರೆಯುತ್ತಾರೆಯಾದರೂ ಹಲವರು ಹೊಸಬರು ಇಲ್ಲಿದ್ದಾರೆ. ಆದರೆ, ನಾನು ಕವಿಗಳನ್ನು ಕಂಡರೀತಿಯೇ ಬೇರೆ. ಐತಿಹಾಸಿಕತೆಗೆ ಭಂಗಬಾರದಂತೆ ಭಾವನಾತ್ಮಕ–ಸಾಹಿತ್ಯಿಕ ದೃಷ್ಟಿಪ್ರಧಾನವಾಗಿ ನಾನವರನ್ನು ಕಂಡಿದ್ದೇನೆ.

ಇದನ್ನು ನಾನು ಚರಿತ್ರಗ್ರಂಥ ಎಂದೆನ್ನದೆ ಪರಿಚಯಗ್ರಂಥ ಎಂದು ಎಣಿಸುತ್ತೇನೆ. ನಾನಿಲ್ಲಿ ಕವಿಯ ಕುಲಗೋತ್ರ ಕಾಲಾದಿಗಳ ವಿಚಾರವನ್ನು ಹೆಚ್ಚಾಗಿ ವಿಮರ್ಶಿಸದೆ, ಇದ್ದಷ್ಟನ್ನೇ ಹೇಳಿ, ಆ ಕಾವ್ಯದಲ್ಲಿ ಹೊಳೆಯುವ ಕವಿಯ ಗುಣ, ಸ್ವಭಾವ, ವಿಚಾರ, ಭಾವನೆಗಳನ್ನು ಎತ್ತಿ ತೋರಿಸಲು ಹವಣಿಸಿದ್ದೇನೆ. ಅವನ ಕಾವ್ಯದ ಬಗೆಗೆ ಹೇಳಬೇಕು ಎನಿಸಿದೆಡೆಗಳಲ್ಲಿ ಕಿರಿದರಲ್ಲಿ ಹೇಳಿದ್ದೇನೆ. ಕವಿಯ ಕಾರ್ಯಮಹತಿ ಓದುಗರ ನಿದರ್ಶನಕ್ಕೆ ಬರಲೆಂದು ಶಾಸನದ ವ್ಯಾಪ್ತಿಯನ್ನೂ ಅದರಲ್ಲಿಯ ಪದ್ಯ ಸಂಖ್ಯೆಯನ್ನೂ ಕೊಟ್ಟಿದೆ. ಅಭ್ಯಾಸದ ಅನುಕೂಲಕ್ಕಾಗಿ, ಕವಿಗಳ ಮೂರು ಬಗೆಯ ಪರಿವಿಡಿಗಳನ್ನು ಜೋಡಿಸಿದ್ದೇನೆ. ನಾನೀ ಹೊತ್ತಗೆಯ

ಬರವಣಿಗೆಯಲ್ಲಿ ಅನುಸರಿಸಿದ ರೀತಿಯು, ಮಾಡಿದ ಊಹೆಗಳ, ಪಟ್ಟ ಅಭಿಪ್ರಾಯಗಳ ಸಾಧುತ್ವ ಅಸಾಧುತ್ವಗಳನ್ನೂ ಪರ್ಯಾಲೋಚಿಸುವುದು ಸುಜ್ಞವಾಚಕರ ಅಧಿಕಾರಕ್ಕೊಳಪಟ್ಟುದು. ನನ್ನೀ ಪರಿಶ್ರಮ ಎಷ್ಟರಮಟ್ಟಿಗೆ ಯಶಸ್ವಿಯಾಗಿದೆ ಎಂದು ನೋಡುವುದೂ ಅವರ ಕೆಲಸವೇ.

ಮೊದಲಚ್ಚಿನಂತೆ, ಈ ಹಿಗ್ಗಿಸಿದ ಹೊಸ ಅಚ್ಚಿನ ಹೊರೆ-ಹೊಣೆಯನ್ನೂ ನನ್ನ ಬಾಲ್ಯ ಸ್ನೇಹಿತ ಭಾಲಚಂದ್ರ ಘಾಣೇಕರ ಹಾಗು ಅವರ ಪುತ್ರರು ಮಮತೆಯಿಂದ ಹೊತ್ತಿದ್ದಾರೆ.

ಸಾಹಿತ್ಯಾಭ್ಯಾಸಿ ಜನಕ್ಕೆ ನನ್ನೀ ಕೃತಿ ಕೊಂಚವಾದರೂ ನೆರವಾಗದಿರದೆಂಬ ನಂಬಿಗೆಯ ಸಮಾಧಾನವನ್ನು ನಾನು ತಾಳಿದ್ದೇನೆ.

**– ಮೇವುಂಡಿ ಮಲ್ಲಾರಿ**

* * *

# ಪರಿವಿಡಿ ೧.

## ಕಾಲಾನುಕ್ರಮದಲ್ಲಿ

| ಕಾಲ | ಕವಿ | ಊರು | ಜಿಲ್ಲೆ | ಪುಟ |
|---|---|---|---|---|
| ಶ.೧೧ | ಗುಣವಾ ...ರ್ಯ | ಕುರುವತ್ತಿ | ಬಳ್ಳಾರಿ | ೯೨ |
| ೧೧೦೨ | ಮಲ್ಲಿಕಾರ್ಜುನ | ಶಿಕಾರಿಪುರ | ಶಿವಮೊಗ್ಗೆ | ೯೫ |
| ೧೧೦೨ | ಕಾಳಿದಾಸ | ಹೂಲಿ | ಬೆಳಗಾವಿ | ೯೩ |
| ೧೧೦೪ | ಅಚರಾಜ | ಅಬಲೂರು | ಧಾರವಾಡ | ೯೩ |
| ೧೧೦೪ | ಮಲ್ಲಿನಾಥದೇವ | ಅಬಲೂರು | ಧಾರವಾಡ | ೯೩ |
| ೧೧೦೬ | ಲಕ್ಷ್ಮಣ | ಹೊಸೂರು | ಬೆಳಗಾವಿ | ೯೮ |
| ೧೧೦೯ | ನಾರಣದೇವ | ಹಾವೇರಿ | ಧಾರವಾಡ | ೯೯ |
| ೧೧೧೨ | ಚಟ್ಟಪಾರ್ಯ | ಲಕ್ಷ್ಮೇಶ್ವರ | ಧಾರವಾಡ | ೧೦೧ |
| ೧೧೧೩ | ಅಯ್ಚರಾಜ | ಅಬ್ಬಿಗೇರಿ | ಧಾರವಾಡ | ೧೦೨ |
| ೧೧೧೬ | ನಾಗದೇವ | ಚಾ. ರಾ. ನಗರ | ಮೈಸೂರು | ೧೦೪ |
| ೧೧೨೪ | ಮಾದಿರಾಜ | ದಾವಣಗೆರೆ | ಚಿತ್ರದುರ್ಗ | ೧೦೫ |
| ೧೧೨೫ | ನಾಗಾರ್ಜುನ ಪಂಡಿತ | ಮುಗದ | ಧಾರವಾಡ | ೧೦೬ |
| ೧೧೨೫ | ಚಂದ್ರಭಟ್ಟ | ಬಾಳೂರು | ,, | ೧೧೧ |
| ೧೧೨೬ | ಭಾಸ್ಕರ | ಪಟಂಚೆರು | ಹೈದರಾಬಾದು | ೧೧೩ |
| ೧೧೨೯ | ಮಲ್ಲಿನಾಥ | ಹಂತೂರು | ಚಿಕ್ಕಮಗಳೂರು | ೧೧೫ |
| ೧೧೨೯ | ಮಹಬಳದೇವ | ಬುಕ್ಕಾಂಬುಧಿ | ಹಾಸನ | ೧೧೬ |
| ೧೧೩೪ | ಮೂಕಣಪಂಡಿತ | ಹಾವೇರಿ | ಧಾರವಾಡ | ೧೧೯ |
| ೧೧೩೮ | ಸಾಂತಮಹಂತ | ಲಾಲನಕೆರೆ | ಮೈಸೂರು | ೧೨೧ |
| ೧೧೩೮ | ಬಲದೇವ | ಮಾದನಭಾವಿ | ಧಾರವಾಡ | ೧೨೩ |
| ೧೧೩೯ | ಸೋಮೇಶ್ವರಭಟ್ಟ | ನೌಲೆ | ಹಾಸನ | ೧೨೫ |
| ೧೧೪೧ | ಶಂಕರವಿಬುಧ | ಕೋಡಕಣಿ | ಕಾರವಾರ | ೧೨೬ |
| ೧೧೪೬ | ಮುಖ್ಯಪಂಡಿತ | ಲಕ್ಷ್ಮೇಶ್ವರ | ಧಾರವಾಡ | ೧೨೮ |
| ೧೧೪೬ | ಸರ್ವಜ್ಞಪಟ್ಟವರ್ಧನ | ನರಗುಂದ | ,, | ೧೩೨ |
| ೧೧೪೮ | ಕಲಿದೇವಪಂಡಿತ | ಸಿರಸಂಗಿ | ಬೆಳಗಾವಿ | ೧೩೦ |
| ೧೧೪೮ | ಮಧುಸೂದನದೇವ | ಹರಿಹರ | ಚಿತ್ರದುರ್ಗ | ೧೩೪ |

| ಕಾಲ | ಕವಿ | ಊರು | ಜಿಲ್ಲೆ | ಪುಟ |
|---|---|---|---|---|
| ೧೧೪೮ | ಸೂರಿಲಿಯ ಮುಖ್ಯಪಂಡಿತ | ಹೊಸೂರು | ಧಾರವಾಡ | ೧೩೭ |
| ೧೧೫೬ | ನಾಗರಾಶಿಪಂಡಿತ | ಚಿಕ್ಕಕಡೂರ | ಹಾಸನ | ೧೩೯ |
| ೧೧೫೭ | ಬೀವಣ | ಅಣ್ಣಿಗೇರಿ | ಧಾರವಾಡ | ೧೪೧ |
| ೧೧೬೦ | ಬಿಂದಯ್ಯ | ಕೊಪ್ಪ | ಹಾಸನ | ೧೪೨ |
| ೧೧೬೧ | ದೇವಭದ್ರಮುನಿ | ಹೆಗ್ಗೆರೆ | ತುಮಕೂರು | ೧೪೩ |
| ೧೧೬೧ | ನಾಗಾರ್ಜುನ | ಲಕ್ಷ್ಮೇಶ್ವರ | ಧಾರವಾಡ | ೧೪೬ |
| ೧೧೬೪ | ಶಾಂತಿನಾಥ | ಲಾಲನಕೆರೆ | ಮೈಸೂರು | ೧೪೭ |
| ೧೧೬೭ | ಸುಕರಸುಕವಿ ಕಂಠಾಭರಣ | ಉದ್ರಿ | ಶಿವಮೊಗ್ಗ | ೧೫೦ |
| ೧೧೬೯ | ಮಧುಸೂದನಸೂರಿ | ಹಲಸಿ | ಬೆಳಗಾವಿ | ೧೫೨ |
| ೧೧೭೦ | ಸಜ್ಜನತಿಲಕ | ಕುಕನೂರು | ರಾಯಚೂರು | ೧೫೩ |
| ೧೧೭೦ | ಸೂರ್ಯಣ | ಜಕ್ಕೇನಹಳ್ಳಿ | ಹಾಸನ | ೧೫೫ |
| ೧೧೭೨ | ಬಿಜ್ಜಯನಾಯಕ | ಮಾಡಗಿಹಾಳ | ಜತ್ತ | ೧೫೮ |
| ೧೧೭೨ | ಯಜೇಶ್ವರಸೂರಿ | ಹಲಸಿ | ಬೆಳಗಾವಿ | ೧೬೧ |
| ೧೧೭೩ | ಬೂಚ | ಹಾಸನ | ಹಾಸನ | ೧೬೨ |
| ೧೧೭೪ | ಕಾಳಿದಾಸ | ಚಿಕ್ಕಹಂದಿಗೋಳ | ಧಾರವಾಡ | ೧೬೪ |
| ೧೧೭೪ | ದೇವಪಾರ್ಯ | ಅರಸಿಕೆರೆ | ಹಾಸನ | ೧೬೫ |
| ೧೧೭೪ | ಶಾರದಿನಾಥಪಂಡಿತ | ಅರಸಿಕೆರೆ | ಹಾಸನ | ೧೬೩ |
| ೧೧೭೫ | ಸಿಂಗದೇವ | ಉದ್ರಿ | ಶಿವಮೊಗ್ಗ | ೧೬೭ |
| ೧೧೭೭ | ಕವಿಕಂದರ್ಪ | ಕವಲೂರು | ರಾಯಚೂರು | ೧೬೯ |
| ೧೧೭೭ | ಕಲ್ಯಾಣಶಕ್ತಿ ಪಂಡಿತ | ಗಂಗನರಸಿ | ಚಿತ್ರದುರ್ಗ | ೧೭೨ |
| ೧೧೭೮ | ಗೋಮುಕವಿ | ಕುಕನೂರು | ರಾಯಚೂರು | ೧೭೪ |
| ೧೧೮೦ | ರಾಮನಾಥದೇವ | ಹೊನ್ನಾಳಿ | ಶಿವಮೊಗ್ಗ | ೧೭೯ |
| ೧೧೮೦ | ಬೊಪ್ಪಣಪಂಡಿತ | ಶ್ರವಣಬೆಳ್ಗೊಳ | ಹಾಸನ | ೧೮೦ |
| ೧೧೮೧ | ಉದಯಕಲ್ಪ | ಹರಳಹಳ್ಳಿ | ಧಾರವಾಡ | ೧೯೦ |

| ಕಾಲ | ಕವಿ | ಊರು | ಜಿಲ್ಲೆ | ಪುಟ |
|---|---|---|---|---|
| ೧೨೧೭ | ನಾಗದೇವ | ಮಾದಾಪುರ | ಚಿಕ್ಕಮಗಳೂರು | ೨೪೩ |
| ೧೨೨೦ | ಸವಣಬಲ್ಲರದೇವ | ಆಗಸಿಕೆರೆ | ಹಾಸನ | ೨೪೪ |
| ೧೨೨೧ | ಹಂಸದೇವ | ಚಿಕ್ಕನಾಯಕನಹಳ್ಳಿ | ತುಮಕೂರು | ೨೪೫ |
| ೧೨೨೩ | ನಾಗದೇವ | ಕೆರೆಸಂತೆ | ಚಿಕ್ಕಮಗಳೂರು | ೨೪೭ |
| ೧೨೨೪ | ಪೋಲಾಳ್ವ | ಹರಿಹರ | ಚಿತ್ರದುರ್ಗ | ೨೪೯ |
| ೧೨೨೯ | ಮಾದಿರಾಜ | ಸವದತ್ತಿ | ಬೆಳಗಾವಿ | ೨೫೦ |
| ೧೨೩೪ | ಶ್ರೀವಿಜಯ | ಚೆನ್ನಗಿರಿ | ಚಿತ್ರದುರ್ಗ | ೨೫೪ |
| ೧೨೩೪ | ದಶಕೀರ್ತಿದೇವ | ,, | ,, | ೨೫೪ |
| ೧೨೩೪ | ಸೋಮನಾಥಪಂಡಿತ | ಹಾರನಹಳ್ಳಿ | ಹಾಸನ | ೨೫೬ |
| ೧೨೩೪ | ಚಿದಾನಂದಕವಿ | ಮಂಡ್ಯ | ,, | ೨೫೫ |
| ೧೨೪೦ | ವೈಜನಾಥ | ಕುಂದಗೋಳ | ಧಾರವಾಡ | ೨೫೮ |
| ೧೨೪೪ | ದೇವ | ಕಲ್ಕೆರೆ | ವಿಜಾಪುರ | ೨೫೯ |
| ೧೨೪೯ | ಚೇರೆಯ ಅಲ್ಲಾಳ ಬುಧ | ಚಿಕ್ಕಮಗಳೂರು | ಚಿಕ್ಕಮಗಳೂರು | ೨೬೧ |
| ೧೨೪೯ | ಕಬ್ಬದ ದಾಮೋದರ | ಚಿಕ್ಕಮಗಳೂರು | ಚಿಕ್ಕಮಗಳೂರು | ೨೬೧ |
| ೧೨೫೫ | ನಯಕೀರ್ತಿದೇವ | ಹೆರಗು | ಹಾಸನ | ೨೬೨ |
| ೧೨೬೫ | ಗೋಪಾಳರಾಜ | ಇಂಗಳೇಶ್ವರ | ವಿಜಾಪುರ | ೨೬೩ |
| ೧೨೭೫ | ಕವಿಕಂದನನಂದ | ಕೇವಗೆಗೆರೆ | ಚಿಕ್ಕಮಗಳೂರು | ೨೬೫ |
| ೧೨೭೬ | ಈಶ್ವರಾರ್ಯ | ಭಾನುವಳ್ಳಿ | ಚಿತ್ರದುರ್ಗ | ೨೬೬ |
| ೧೨೯೦ | ಪದ್ಮ | ಹಳೇಬೀಡು | ಹಾಸನ | ೨೬೮ |
| ೧೩೦೩ | ಬೊಮ್ಮಯರಾಯ | ಮತ್ತಿಕೊಪ್ಪ | ಶಿವಮೊಗ್ಗ | ೨೬೯ |
| ೧೩೩೧ | ಸುಧಾಕರದೇವ | ಸಂಪಿಗೆ | ತುಮಕೂರು | ೨೭೧ |
| ೧೩೪೭ | ಮಲ್ಲಣಾರಾಧ್ಯ | ಮುಳುಬಾಗಿಲು | ಕೋಲಾರ | ೨೭೨ |
| ೧೩೭೦ | ಸೋಮ | ಹೊಸೂರು | ಕೋಲಾರ | ೨೭೩ |
| ೧೩೮೨ | ನೃಸಿಂಹ | ಅರುವನಹಳ್ಳಿ | ಮೈಸೂರು | ೨೭೪ |
| ೧೩೯೩ | ವಜ್ರ | ಸೊರಬ | ಶಿವಮೊಗ್ಗ | ೨೭೬ |

| ಕಾಲ | ಕವಿ | ಊರು | ಜಿಲ್ಲೆ | ಪುಟ |
|---|---|---|---|---|
| ೧೪೧೧ | ಮಧುರ | ಹಂಪಿ | ಬಳ್ಳಾರಿ | ೨೭೭ |
| ೧೪೧೧ | ಲಕ್ಷ್ಮೀಧರ | ಹಂಪಿ | ಬಳ್ಳಾರಿ | ೨೮೧ |
| ೧೪೨೪ | ಧರಣೋಜ | ಹರಿಹರ | ಚಿತ್ರದುರ್ಗ | ೨೮೪ |
| ೧೪೩೨ | ಮಂಗರಾಜ | ಶ್ರವಣಬೆಳ್ಗೊಳ | ಹಾಸನ | ೨೮೬ |
| ೧೪೭೪ | ದುಗ್ಗಪ | ಸುಜ್ಜಲೂರು | ಮೈಸೂರು | ೨೮೭ |
| ೧೪೮೪ | ಶಂಕರಾರ್ಯ | ಕೈಕಿಣಿ | ಕಾರವಾರ | ೨೮೮ |
| ೧೫೦೫ | ನರಸಿಂಹಾರ್ಯ | ನಗರಗೆರೆ | ಕೋಲಾರ | ೨೯೦ |
| ೧೫೧೩ | ಸಭಾಪತಿಸ್ವಯಂಭು | ನಂಜನಗೂಡು | ಮೈಸೂರು | ೨೯೧ |
| ೧೫೧೮ | ವಿದ್ಯಾನಂದೋಪಾಧ್ಯಾಯ | ಮಲೆಯೂರು | ಮೈಸೂರು | ೨೯೩ |
| ೧೫೩೮ | ಮಲ್ಲಣಾರಾಧ್ಯ | ಹರಿಹರ | ಚಿತ್ರದುರ್ಗ | ೨೯೪ |
| ೧೫೫೪ | ಬಾಯಣಾಚಾರ್ಯ | ,, | ,, | ೨೯೫ |
| ೧೬೩೯ | ನೃಹರಿ | ಗಜ್ಜಿಗನಹಳ್ಳಿ | ಮೈಸೂರ | ೨೯೬ |
| ೧೬೫೪ | ಸಾಸಲಯ್ಯ | ಯಳಂದೂರು | ಮೈಸೂರು | ೨೯೭ |
| ೧೭೪೮ | ಕೃಷ್ಣದೀಕ್ಷಿತ | ನರಸಿಪುರ | ಮೈಸೂರು | ೩೦೦ |

# ಪರಿವಿಡಿ ೨.

## ಪ್ರದೇಶಾನುಗುಣವಾಗಿ



### ಉತ್ತರ ಕನ್ನಡ ಜಿಲ್ಲೆ

| ಊರು | ಕವಿ | ಕಾಲ | ಪುಟ |
|---|---|---|---|
| ಕೈಕಿಣಿ | ಶಂಕರಾರ್ಯ | ೧೪೮೪ | ೨೮೮ |
| ಕೋಡಕಣಿ | ಶಂಕರವಿಬುಧ | ೧೧೪೧ | ೧೨೭ |
| | **ಕಲಬುರ್ಗಿ ಜಿಲ್ಲೆ** | | |
| ಇಂಗಳಿಗೆ | ನಾಗಾರ್ಜುನ ಪಂಡಿತ | ೧೦೯೪ | ೮೨ |
| | **ಕೋಲಾರ ಜಿಲ್ಲೆ** | | |
| ಕುರುಬೂರು | ಕಬ್ಬದನಾಗಮಯ್ಯ | ೯೬೧ | ೨೧ |
| ನಗರಕೆರೆ | ನರಸಿಂಹಾರ್ಯ | ೧೫೦೫ | ೨೯೦ |
| ಮುಳುಬಾಗಿಲು | ಮಲ್ಲಣಾರಾಧ್ಯ | ೧೩೪೭ | ೨೭೨ |
| ಹೊಸೂರು | ಸೋಮ | ೧೩೭೦ | ೨೭೯ |
| | **ಚಿಕ್ಕಮಗಳೂರ ಜಿಲ್ಲೆ** | | |
| ಕಡೂರು | ಅರ್ಹದ್ಭಕ್ತ | ೯೭೧ | ೨೫ |
| ” | ಕವಿನಾಗದೇವ | ೧೨೨೪ | |
| ಕೆರೆಸಂತೆ | ನಾಗದೇವ | ೧೨೨೩ | ೨೪೭ |
| ಕೇದಗೆಗೆರೆ | ಕವಿಕಂದನನಂದ | ೧೨೭೫ | ೨೬೫ |
| ಕೋಟಿವೂರು | ಪಣ್ಣ ಸ್ವಾಮಿ | ಶ. ೧೦ | ೩೨ |
| ಚಿಕ್ಕಮಗಳೂರು | ಜೇರೆಯ ಅಲ್ಲಾಳಬುಧ | ೧೨೪೯ | ೨೬೧ |

| ಊರು | ಕವಿ | ಕಾಲ | ಪುಟ |
|---|---|---|---|
| ಚಿಕ್ಕಮಗಳೂರು | ಕಬ್ಬದ ದಾಮೋದರ | ೧೨೪೯ | ೨೬೧ |
| ಮಾದಾಪುರ | ನಾಗದೇವ | ೧೨೧೭ | ೨೪೩ |
| ಹೆಂತೂರು | ಮಲ್ಲಿನಾಥ | ೧೧೨೯ | ೧೧೫ |
| | **ಚಿತ್ರದುರ್ಗ ಜಿಲ್ಲೆ** | | |
| ಇಸಾಮುದ್ರ | ಕಾಚಯ್ಯ | ೯೩೭ | ೧೩ |
| ಗಂಗನರಸಿ | ಕಲ್ಯಾಣಶಕ್ತಿಪಂಡಿತ | ೧೧೭೭ | ೧೭೨ |
| ಗಂಜಿಗಟ್ಟೆ | ಕಲ್ಲಯ್ಯ | ೧೨೦೬ | ೨೩೯ |
| ಚನ್ನಗಿರಿ | ಶ್ರೀವಿಜಯ | ೧೭೩೪ | ೨೫೪ |
| ಚನ್ನಗಿರಿ | ದಶಕೀರ್ತಿದೇವ | ೧೨೩೪ | ೨೫೪ |
| ದಾವಣಗೆರೆ | ಮಾದಿರಾಜ | ೧೧೨೪ | ೧೦೫ |
| ಭಾನುವಳ್ಳಿ | ಈಶ್ವರಾರ್ಯ | ೧೨೭೬ | ೨೬೬ |
| ಹರಿಹರ | ಮಧುಸೂದನದೇವ | ೧೧೪೮ | ೧೩೪ |
| ,, | ಪೋಲಾಳ್ವ | ೧೧೨೪ | ೨೪೯ |
| ,, | ಧರಣೋಜ | ೧೪೨೪ | ೨೮೪ |
| ,, | ಮಲ್ಲಣಾರಾಧ್ಯ | ೧೫೩೮ | ೨೯೪ |
| ,, | ಬಾಯಣಾಚಾರ್ಯ | ೧೫೫೪ | ೨೯೫ |
| | **ತುಮಕೂರು ಜಿಲ್ಲೆ** | | |
| ಚಿಕ್ಕನಾಯಕನಹಳ್ಳಿ | ಹಂಸದೇವ | ೧೨೨೧ | ೨೪೫ |
| ಬೂದಿಹಾಳು | ತ್ರಿಭುವನಶಕ್ತಿ | ೧೧೯೦ | ೨೧೧ |
| ಸಂಪಿಗೆ | ಸುಧಾಕರದೇವ | ೧೩೩೧ | ೨೭೧ |
| ಹೆಗ್ಗೆರೆ | ದೇವಭದ್ರಮುನಿ | ೧೧೬೧ | ೧೪೩ |
| | **ದಕ್ಷಿಣಕನ್ನಡ ಜಿಲ್ಲೆ** | | |
| | **ಧಾರವಾಡ ಜಿಲ್ಲೆ** | | |
| ಅಣ್ಣಿಗೆರೆ | ನಾಗಮಯ್ಯ | ೧೦೪೫ | ೩೯ |

| ಊರು | ಕವಿ | ಕಾಲ | ಪುಟ |
|---|---|---|---|
| ಅಣ್ಣಿಗೆರೆ | ಬೀವಣ | ೧೧೫೨ | ೧೪೧ |
| ಅಬಲೂರು | ಕೇಶವರಾಜ ಸರಣ | ೧೩೦೦ | ೩೩೨ |
| ,, | ಅಚರಾಜ | ೧೧೦೪ | ೯೨ |
| ,, | ಮಲ್ಲಿನಾಥದೇವ | ೧೧೦೪ | ೯೭ |
| ಅಬ್ಬಿಗೇರಿ | ಅಯ್ಚ ರಾಜ | ೧೧೧೭ | ೧೦೩ |
| ಅಸುಂಡಿ | ಸುಬ್ಬ | ಶ. ೧೩ | ೩೩೫ |
| ಆಲೂರು | ವೆಣ್ಣೆಯಭಟ್ಟ | ೧೦೧೦ | ೭೪ |
| ಕಳಸ | ಕವಿರಾಜರಾಜ | ೯೭೦ | ೮ |
| ಕಳ್ಳೀಹಾಳು | ಕಂದರ್ಪ | ೧೦೪೯ | ೭೬ |
| ಕುಂದಗೋಳ | ವೈಜನಾಥ | ೧೩೪೦ | ೩೫೮ |
| ಕುರ್ತಕೋಟಿ | ನಾಗದೇವ | ೧೦೮೩ | ೨೧ |
| ಕೊಣ್ಣೂರು | ವತ್ಸರಾಜ | ೮೬೦ | ೨ |
| ಕೋಟುಮಚಗಿ | ಚಂದ್ರಭಟ್ಟ | ೧೦೯೯ | ೯೭ |
| ಕೋಳೂರು | ಮಾಳಪಯ್ಯ | ೧೦೮೫ | ೨೮ |
| ಗದುಗು | ಅಗ್ನಿಶರ್ಮ | ೧೧೯೩ | ೩೧೮ |
| ಚಿಕ್ಕಹಂದಿಗೋಳ | ಮಲ್ಲ | ೧೦೯೯ | ೮೮ |
| ,, | ಕಾಳಿದಾಸ | ೧೧೨೪ | ೧೬೪ |
| ಡಂಬಳ | ನಾಗದೇವಭಟ್ಟ | ೧೧೮೪ | ೧೯೭ |
| ನರಗುಂದ | ರುದ್ರಭಟ್ಟ | ೧೦೨೪ | ೬೧ |
| ,, | ನಾಗದೇವ | ೧೦೨೮ | ೬೬ |
| ,, | ನಾಗವಾರ | ೧೦೮೦ | ೬೮ |
| ,, | ಮಲ್ಲಿಕಾರ್ಜುನ | ೧೦೮೦ | ೨೦ |
| ,, | ಸರ್ವಜ್ಞ ಪಟ್ಟವರ್ಧನ | ೧೧೪೨ | ೧೭೩ |
| ದಂಡಾಪುರ | ರವಿನಾಗಭಟ್ಟ | ೯೧೯ | ೧೧ |
| ನಾಗಾವಿ | ಸಾಮಿಯಣ್ಣ | ೯೬೯ | ೩೭ |

| ಊರು | ಕವಿ | ಕಾಲ | ಪುಟ |
|---|---|---|---|
| ಬಾಳೂರು | ಚಂದ್ರಭಟ್ಟ | ೧೧೨೫ | ೧೧೧ |
| ಮಾದನಭಾವಿ | ಬಲದೇವ | ೧೧೩೮ | ೧೨೩ |
| ಮುಗದ | ನಾಗಾರ್ಜುನಪಂಡಿತ | ೧೧೨೫ | ೧೦೭ |
| ಮುಳುಗುಂದ | ನಯಸೇನ ಸೂರಿ | ೧೦೫೩ | ೪೭ |
| ,, | ಬಸವಣಯ್ಯ | ೧೦೬೨ | ೫೪ |
| ಲಕ್ಷ್ಮೇಶ್ವರ | ಚಟ್ಟಪಾರ್ಯ | ೧೧೧೨ | ೧೦೧ |
| ,, | ಮುಖ್ಯಪಂಡಿತ | ೧೦೪೭ | ೧೨೮ |
| ,, | ನಾಗಾರ್ಜುನ | ೧೧೬೧ | ೧೪೬ |
| ಸೊರಟೂರು | ಕನಪಯ್ಯ | ೧೦೭೨ | ೫೯ |
| ,, | ಮಾಧವಭಟ್ಟ | ೧೦೯೧ | ೮೦ |
| ಹರಳಹಳ್ಳಿ | ಉದಯಕಲ್ಪ | ೧೧೮೧ | ೧೯೦ |
| ಹಾವೇರಿ | ನಾರಣದೇವ | ೧೦೦೯ | ೯೯ |
| ,, | ಮೂಕಣಪಂಡಿತ | ೧೧೩೪ | ೧೧೦ |
| ಹೊಟ್ಟೂರು | ನಾಲ್ವರು ಕವಿಗಳು | ೧೦೬೭ | ೫೬ |
| ಹೊಸೂರು | ಸೂರಿಲಿಯ ಮುಖ್ಯಪಂಡಿತ | ೧೧೪೮ | ೧೩೭ |

## ಬಳ್ಳಾರಿ ಜಿಲ್ಲೆ

| | | | |
|---|---|---|---|
| ಕುರುವತ್ತಿ | ಗುಣಪಾ....ರ್ಯ | ಶ. ೧೧ | ೯೨ |
| ,, | ಶ್ರೀಕಂಠಸೂರಿ | ೧೦೯೯ | ೮೫ |
| ಮೈಲಾರ | ನಾಗವಾರ | ೧೦೪೭ | ೪೧ |
| ಹಂಪೆ | ಮಧುರ | ೧೪೧೧ | ೨೭೭ |
| ,, | ಲಕ್ಷ್ಮೀಧರ | ೧೪೧೧ | ೨೮೧ |
| ಹಿರೇಮಗಳಗೇರೆ | ಬರ್ಮದೇವ | ೧೦೬೧ | ೫೩ |

## ಬೆಳಗಾವಿ ಜಿಲ್ಲೆ

| | | | |
|---|---|---|---|
| ಕಲ್ಲುಹೊಳೆ | ಪಾರ್ಶ್ವ | ೧೨೦೪ | ೨೩೦ |

| ಊರು | ಕವಿ | ಕಾಲ | ಪುಟ |
|---|---|---|---|
| ಬೆಳಗಾವಿ | ಬಾಳಚಂದ್ರ | ೧೨೦೪ | ೨೩೪ |
| ಸವದತ್ತಿ | ರುದ್ರಭಟ್ಟ | ೯೫೦ | ೧೬ |
| ,, | ಮಾದಿರಾಜ | ೧೨೩೯ | ೨೫೦ |
| ಸಿರಸಂಗಿ | ಕಲಿದೇವಪಂಡಿತ | ೧೧೪೮ | ೧೩೦ |
| ,, | ಸಜ್ಜನತಿಲಕ | ೧೧೮೬ | ೧೯೭ |
| ಸೊಗಲ | ಕಮಳಾದಿತ್ಯ | ೯೮೦ | ೨೭ |
| ಹದ್ಲಿ | ಕರ್ಪರಸ | ೧೦೮೪ | ೭೭ |
| ಹಲಸಿ | ಮಧುಸೂದನಸೂರಿ | ೧೧೬೯ | ೧೫೨ |
| ,, | ಯಜ್ಞೇಶ್ವರಸೂರಿ | ೧೧೭೨ | ೧೬೧ |
| ಹೂಲಿ | ಕಾಳಿದಾಸ | ೧೧೦೨ | ೯೩ |
| ಹೊಸೂರು | ಲಕ್ಷ್ಮಣ | ೧೧೦೭ | ೯೮ |
| ಕೂರಟೆನೂರ | ಜಿನವರ್ಮಪಂಡಿತ | ೧೦೫೦ | ೪೪ |

## ಮೈಸೂರು ಜಿಲ್ಲೆ

| | | | |
|---|---|---|---|
| ಅರುವನಹಳ್ಳಿ | ನೃಸಿಂಹ | ೧೩೮೨ | ೨೭೪ |
| ಗಜ್ಜಿಗನಹಳ್ಳಿ | ನೃಹರಿ | ೧೬೩೯ | ೨೯೯ |
| ಚಾಮರಾಜನಗರ | ನಾಗದೇವ | ೧೧೧೭ | ೧೦೪ |
| ನಂಜನಗೂಡು | ಸಭಾಪತಿಸ್ವಯಂಭು | ೧೫೧೩ | ೨೯೧ |
| ನರಸಿಪುರ | ಕೃಷ್ಣದೀಕ್ಷಿತ | ೧೭೪೮ | ೩೦೦ |
| ಬೆಳತೂರು | ಮಲ್ಲ | ೧೦೫೭ | ೫೧ |
| ಮಂಡ್ಯ | ಚಿದಾನಂದಕವಿ | ೧೨೩೪ | ೨೫೫ |
| ಮಲೆಯೂರು | ವಿದ್ಯಾನಂದೋಪಾಧ್ಯಾಯ | ೧೫೧೮ | ೨೯೩ |
| ಯಳಂದೂರು | ನಾಪಲಯ್ಯ | ೧೬೫೪ | ೨೯೭ |
| ಲಕ್ಕಿನಕೆರೆ | ನಾಂತಮಹಂತ | ೧೧೩೮ | ೧೨೧ |
| ,, | ಶಾಂತಿನಾಥ | ೧೧೬೦ | ೧೪೭ |
| ಸುಜ್ಞಲೂರು | ಮುಗ್ನಪ | ೧೪೭೪ | ೨೮೭ |

| ಊರು | ಕವಿ | ಕಾಲ | ಪುಟ |
|---|---|---|---|
| ಶಿಕಾರಿಪುರ | ಮಾಳೆಯ | ೧೧೯೨ | ೨೧೯ |
| ಸೊರಬ | ವಜ್ರ | ೧೬೯೩ | ೨೭೯ |
| ಶಿವಮೊಗ್ಗ | ರಾಮರಾಜ | ೧೦೮೫ | ೭೯ |
| ಹುಂಚ | ಶಿವಮಾರದೇವ | ೮೩೫ | ೬ |
| ,, | ರಾಜಮಲ್ಲ | ೧೦೫೦ | ೪೩ |
| ,, | ದಯಾಪಾಳದೇವ | ೧೦೫೦ | ೪೬ |
| ಹೊನ್ನಾಳಿ | ರಾಮದೇವ | ೧೧೮೦ | ೧೭೯ |

## ಹಾಸನ ಜಿಲ್ಲೆ

| ಊರು | ಕವಿ | ಕಾಲ | ಪುಟ |
|---|---|---|---|
| ಅಂಕನಾಥಪುರ | ಬಲದೇವ | ೯೫೦ | ೧೫ |
| ಅರಸಿಕೆರೆ | ದೇವಪಾರ್ಯ | ೧೧೭೪ | ೧೬೫ |
| ,, | ಸವಣಬಲರದೇವ | ೧೨೨೦ | ೨೪೪ |
| ,, | ಶಾರದಿನಾಥಪಂಡಿತ | ೧೧೭೪ | ೧೬೩ |
| ಆಸಿಕೆರೆ | ಜನ್ನಯ್ಯ | ೧೧೯೨ | ೨೧೬ |
| ಕೊಪ್ಪ | ಬಿಂದಯ್ಯ | ೧೧೬೦ | ೧೪೧ |
| ಚಿಕ್ಕಕಡಲೂರು | ನಾಗರಾಶಿಪಂಡಿತ | ೧೧೫೬ | ೧೩೯ |
| ಚೆನ್ನರಾಯಪಟ್ಟಣ | ಜಾವಣಿಪಂಡಿತ | ೧೧೮೬ | ೨೦೨ |
| ಜಕ್ಕೇನಹಳ್ಳಿ | ಸೂರ್ಯಣ | ೧೧೭೦ | ೧೫೫ |
| ತರೀಕೆರೆ | ಚೊಂಬಣಪಂಡಿತ | ೧೧೮೬ | ೨೦೧ |
| ನೌಲೆ | ಸೋಮೇಶ್ವರಭಟ್ಟ | ೧೧೩೯ | ೧೨೫ |
| ಬಾಣಾವರ | ತ್ರಿವಿಕ್ರಮಾಂಕ | ೧೧೮೯ | ೨೦೬ |
| ಬುಕ್ಕಾಂಬುಧಿ | ಮಹಬಳದೇವ | ೧೧೨೯ | ೧೧೭ |
| ಬೇಲೂರು | ಬಾಚಣ್ಣ | ೧೧೮೮ | ೨೦೫ |
| ಬೊಮ್ಮೇನಹಳ್ಳಿ | ಹರಿಹರಸೂರಿ | ೧೧೯೪ | ೨೨೦ |
| ಮಾರೇನಹಳ್ಳಿ | ಬಾಚಯ್ಯ | ಶ. ೧೨ | ೨೨೨ |
| ಶ್ರವಣಬೆಳ್ಗೊಳ | ಬೊಪ್ಪಣಪಂಡಿತ | ೧೧೮೦ | ೧೮೦ |

| ಊರು | ಕವಿ | ಕಾಲ | ಪುಟ |
|---|---|---|---|
| ಶ್ರವಣಬೆಳ್ಗೊಳ | ಮಂಗರಾಜ | ೧೪೩೨ | ೨೮೬ |
| ಹಳೇಬೀಡು | ಪದ್ಮ | ೧೨೯೦ | ೨೬೮ |
| ,, | ಕವಿವೈಜಣ್ಣ | ಶ. ೧೦ | ೩೩ |
| ಹಾರನಹಳ್ಳಿ | ಸೋಮನಾಥಪಂಡಿತ | ೧೨೩೪ | ೨೫೬ |
| ಹಾಸನ | ಬೂಚ | ೧೧೬೩ | ೧೬೩ |
| ಹೆರಗು | ನಯಕೀರ್ತಿದೇವ | ೧೨೫೫ | ೨೬೨ |

## ಹೊರನಾಡು

| ಊರು | ಕವಿ | ಕಾಲ | ಪುಟ |
|---|---|---|---|
| ಗಂಗಾಧರಂ-ಕರೀಂನಗರ | ಜಿನವಲ್ಲಭ | ಶ. ೧೦ | ೨೯ |
| ನಂದಾವರ-ಕರ್ನೂಲು | ಭಾಸ್ಕರ | ೧೧೮೬ | ೧೯೫ |
| ನಾಗೇನಹಳ್ಳಿ ,, | ಮಾರಮರಸ | ೧೧೯೬ | ೨೨೪ |
| ಪಟಂಚೆರು-ಹೈದರಾಬಾದು | ಭಾಸ್ಕರ | ೧೧೨೬ | ೧೧೩ |
| ಮಾಡಗಿಹಾಳು-ಜತ್ತ | ಬಿಜ್ಜನಾಯಕ | ೧೧೬೨ | ೧೫೮ |

# ಪರಿವಿಡಿ ೩.



## ಅಕ್ಷರಾನುಕ್ರಮದಲ್ಲಿ

| ಕವಿ | ಊರು | ಕಾಲ | ಪುಟ |
|---|---|---|---|
| ಅಗ್ನಿಶರ್ಮ | ಗದುಗು–ಧಾರವಾಡ | ೧೧೯೩ | ೩೧೮ |
| ಅಚರಾಜ | ಅಬಲೂರು–ಧಾರವಾಡ | ೧೧೦೪ | ೯೭ |
| ಆಚಲನ್ | ಪಟ್ಟದಕಲ್ಲು–ವಿಜಾಪುರ | ೭೪೪ | ೪ |
| ಅಯ್ಯಬರಾಜ | ಅಬ್ಬಿಗೆರೆ–ಧಾರವಾಡ | ೧೧೧೨ | ೧೦೩ |
| ಅರ್ಹದ್ಭಕ್ತ | ಕಡೂರು–ಚಿಕ್ಕಮಗಳೂರ | ೯೭೧ | ೩೫ |
| ಆದಿತ್ಯದೇವ | ಇಟಗಿ–ರಾಯಚೂರು | ೧೧೮೨ | ೧೯೩ |
| ಈಶ್ವರಾರ್ಯ | ಭಾನುವಳ್ಳಿ–ಚಿತ್ರದುರ್ಗ | ೧೩೭೬ | ೩೭೬ |
| ಉದಯಕಲ್ಪ | ಹರಳಹಳ್ಳಿ–ಧಾರವಾಡ | ೧೧೮೧ | ೧೯೦ |
| ಕಂದರ್ಪ | ಕಳ್ಳೇಹಾಳು–ಧಾರವಾಡ | ೧೦೧೯ | ೨೬ |
| ಕನ್ನಪಯ್ಯ | ಸೊರಟೂರು–ಧಾರವಾಡ | ೧೦೭೩ | ೫೯ |
| ಕಪ್ಪಣಭಟ್ಟ | ಕುಪ್ಪಗೆಡ್ಡೆ–ಶಿವಮೊಗ್ಗೆ | ೧೦೨೮ | ೨೮ |
| ಕಬ್ಬದದಾಮೋದರ | ಚಿಕ್ಕಮಗಳೂರು | ೧೩೪೯ | ೩೭೧ |
| ಕಬ್ಬದನಾಗಮಯ್ಯ | ಕುರುಬೂರು–ಕೋಲಾರ | ೯೭೧ | ೩೧ |
| ಕಮಳಾದಿತ್ಯ | ಸೊಗಲ–ಬೆಳಗಾವಿ | ೯೮೦ | ೩೭ |
| ಕರ್ಪರಸ | ಹದ್ಲಿ–ಬೆಳಗಾವಿ | ೧೦೮೪ | ೭೭ |
| ಕಲಿದೇವಪಂಡಿತ | ಸಿರಸಂಗಿ–ಬೆಳಗಾವಿ | ೧೧೪೮ | ೧೨೦ |

| ಕವಿ | ಊರು | ಕಾಲ | ಪುಟ |
|---|---|---|---|
| ಕಲ್ಯಾಣಶಕ್ತಿಪಂಡಿತ | ಗಂಗನರಸಿ-ಚಿತ್ರದುರ್ಗ | ೧೧೭೭ | ೧೬೨ |
| ಕಲ್ಲಯ್ಯ | ಗಂಜಿಗಟ್ಟಿ-ಚಿತ್ರದುರ್ಗ | ೧೨೦೬ | ೨೩೯ |
| ಕವಿಕಂದನನಂದ | ಕೇದಗಿಗೆರೆ-ಚಿಕ್ಕಮಗಳೂರು | ೧೨೭೫ | ೨೬೫ |
| ಕವಿಕಂದರ್ಪ | ಕವಲೂರು-ರಾಯಚೂರು | ೧೧೭೭ | ೧೬೯ |
| ಕವಿನಾಗದೇವ | ಕಡೂರು-ಚಿಕ್ಕಮಗಳೂರು | ೧೨೨೩ | ೨೫೭ |
| ಕವಿರಾಜರಾಜ | ಕಳಸ-ಧಾರವಾಡ | ೯೩೦ | ೮ |
| ಕವಿವೈಜಣ್ಣ | ಹಳೇಬೀಡು-ಹಾಸನ | ಶ. ೧೦ | ೩೩ |
| ಕಾಚಯ್ಯ | ಇಸಾಮುದ್ರ-ಚಿತ್ರದುರ್ಗ | ೯೩೭ | ೧೩ |
| ಕಾಳಿದಾಸ | ಹೂಲಿ-ಬೆಳಗಾವಿ | ೧೧೦೨ | ೯೩ |
| ಕಾಳಿದಾಸ | ಚಿಕ್ಕಹಂದಿಗೋಳ-ಧಾರವಾಡ | ೧೧೭೪ | ೧೬೪ |
| ಕುಬ್ಜ | ತಾಳಗುಂದ-ಶಿವಮೊಗ್ಗ | ಶ. ೫ | ೧ |
| ಕೃಷ್ಣದೀಕ್ಷಿತ | ನರಸೀಪುರ-ಮೈಸೂರ | ೧೭೪೮ | ೩೦೦ |
| ಕೇಶವರಾಜ-ಸರಣ | ಅಬಲೂರು-ಧಾರವಾಡ | ೧೨೦೦ | ೨೨೭ |
| ಗುಣಪಾ....ರ್ಯ | ಕುರುವತ್ತಿ-ಬಳ್ಳಾರಿ | ಶ. ೧೧ | ೯೨ |
| ಗೋಪಾಳರಾಜ | ಇಂಗಳೇಶ್ವರ-ವಿಜಾಪುರ | ೧೨೬೫ | ೨೬೩ |
| ಗೋಮುಕವಿ | ಕುಕನೂರು-ರಾಯಚೂರು | ೧೧೭೮ | ೧೭೪ |
| ಚಟ್ಟಪಾರ್ಯ | ಲಕ್ಷ್ಮೇಶ್ವರ-ಧಾರವಾಡ | ೧೧೧೨ | ೧೦೧ |
| ಚಂದ್ರಭಟ್ಟ | ಕೋಟುಮುಚಗಿ-ಧಾರವಾಡ | ೧೦೯೯ | ೧೦೧ |
| ,, | ಬಾಳೂರು-ಧಾರವಾಡ | ೧೧೨೫ | ೯೩ |
| ಚಿದಾನಂದಕವಿ | ಮಂಡ್ಯ | ೧೨೩೪ | ೨೫೬ |
| ಚೀರೆಯ ಅಲ್ಲಾಳಬುಧ | ಚಿಕ್ಕಮಗಳೂರು | ೧೨೪೯ | ೨೬೧ |
| ಚೊಂಬಣ್ಣಪಂಡಿತ | ತರೀಕೆರೆ-ಹಾಸನ | ೧೧೮೬ | ೨೦೧ |
| ಜನ್ನಯ್ಯ | ಆನೆಕೆರೆ-ಹಾಸನ | ೧೧೯೭ | ೨೦೬ |
| ಜಾವಣಿಪಂಡಿತ | ಚೆನ್ನರಾಯಪಟ್ಟಣ-ಹಾಸನ | ೧೧೮೬ | ೨೦೨ |
| ಜಿನವಲ್ಲಭ | ಗಂಗಾಧರಂ-ಕರೀಂನಗರ | ಶ. ೧೦ | ೨೯ |
| ತ್ರಿಭುವನಶಕ್ತಿ | ಬೂದಿಹಾಳು-ತುಮಕೂರು | ೧೧೯೦ | ೨೧೧ |

| ಕವಿ | ಊರು | ಕಾಲ | ಪುಟ |
|---|---|---|---|
| ತ್ರಿವಿಕ್ರಮಾಂಕ | ಬಾಣಾಪುರ-ಹಾಸನ | ೧೧೮೯ | ೨೦೬ |
| ದಯಾಪಾಲದೇವ | ಹುಂಚ-ಶಿವಮೊಗ್ಗೆ | ೧೦೫೦ | ೬ |
| ದಶಕೀರ್ತಿದೇವ | ಚೆನ್ನಗಿರಿ-ಚಿತ್ರದುರ್ಗ | ೧೨೩೪ | ೨೫೪ |
| ದುಗ್ಗಪ | ಸುಜ್ಜಲೂರು-ಮೈಸೂರು | ೧೪೭೪ | ೨೮೭ |
| ದೇವ | ಕಲ್ಕೇರಿ-ವಿಜಾಪುರ | ೧೨೪೪ | ೨೦೩ |
| ದೇವಪಾರ್ಯ | ಅರಸಿಕೆರೆ-ಹಾಸನ | ೧೧೭೪ | ೧೬೫ |
| ದೇವಭದ್ರಮುನಿ | ಹೆಗ್ಗೆರೆ-ತುಮಕೂರು | ೧೧೬೧ | ೧೪೩ |
| ಧರಣೋಜ | ಹರಿಹರ-ಚಿತ್ರದುರ್ಗ | ೧೪೨೪ | ೨೮೪ |
| ನಯಕೀರ್ತಿದೇವ | ಹೆರಗು-ಹಾಸನ | ೧೩೫೫ | ೨೬೭ |
| ನಯಸೇನಸೂರಿ | ಮುಳುಗುಂದ-ಧಾರವಾಡ | ೧೦೫೩ | ೪೭ |
| ನರಸಿಂಹಾರ್ಯ | ನಗರಗೆರೆ-ಕೋಲಾರ | ೧೫೦೫ | ೨೯೦ |
| ನಾಗದೇವ | ನರಗುಂದ-ಧಾರವಾಡ | ೧೦೭೮ | ೬೬ |
| ನಾಗದೇವ | ಕುರ್ತಕೋಟಿ-ಧಾರವಾಡ | ೧೦೮೨ | ೭೧ |
| ನಾಗದೇವ | ಚಾಮರಾಜನಗರ-ಮೈಸೂರು | ೧೧೧೭ | ೧೨೪ |
| ನಾಗದೇವ | ಮೂಡಾಪುರ-ಚಿಕ್ಕಮಗಳೂರು | ೧೨೧೭ | ೨೪೩ |
| ನಾಗದೇವ | ಕೆರೆಸಂತೆ-ಚಿಕ್ಕಮಗಳೂರು | ೧೨೨೩ | ೨೪೩ |
| ನಾಗದೇವಭಟ್ಟ | ಡಂಬಳ-ಧಾರವಾಡ | ೧೨೮೪ | ೧೯೩ |
| ನಾಗಮಯ್ಯ | ಅಣ್ಣಿಗೆರೆ-ಧಾರವಾಡ | ೧೦೪೫ | ೩೯ |
| ನಾಗರಾಶಿಪಂಡಿತ | ಚಿಕ್ಕಕಡಲೂರು-ಹಾಸನ | ೧೧೫೬ | ೧೩೯ |
| ನಾಗವಾರ | ಮೈಲಾರ-ಬಳ್ಳಾರಿ | ೧೦೪೭ | ೪೧ |
| ನಾಗವಾರ | ನರಗುಂದ-ಧಾರವಾಡ | ೧೦೮೦ | ೬೮ |
| ನಾಗಾರ್ಜುನ | ಲಕ್ಷ್ಮೇಶ್ವರ-ಧಾರವಾಡ | ೧೧೬೧ | ೧೪೬ |
| ನಾಗಾರ್ಜುನಪಂಡಿತ | ಇಂಗಳಿಗೆ-ಕಲಬುರ್ಗಿ | ೧೦೯೪ | ೮೨ |
| ನಾಗಾರ್ಜುನಪಂಡಿತ | ಮುಗದ-ಧಾರವಾಡ | ೧೧೨೫ | ೧೦೭ |
| ನಾರಣದೇವ | ಹಾವೇರಿ-ಧಾರವಾಡ | ೧೧೦೯ | ೯೯ |

| ಕವಿ | ಊರು | ಕಾಲ | ಪುಟ |
|---|---|---|---|
| ನಾಲ್ವರುಕಬ್ಬಿಗರು | ಹೊಟ್ಟೂರು-ಧಾರವಾಡ | ೧೦೬೭ | ೫೬ |
| ನೃಸಿಂಹ | ಅರುವನಹಳ್ಳಿ-ಮೈಸೂರು | ೧೩೮೨ | ೨೬೪ |
| ನೃಹರಿ | ಗಜ್ಜಿಗನಹಳ್ಳಿ-ಮೈಸೂರು | ೧೬೩೯ | ೨೯೯ |
| ಪಣ್ಡಸ್ವಾಮಿ | ಕೋಟಿಪೂರು-ಚಿಕ್ಕಮಗಳೂರು | ಶ.೧೦ | ೩೨ |
| ಪದ್ಮ | ಹಳೇಬೀಡು-ಹಾಸನ | ೧೨೯೦ | ೨೬೮ |
| ಪಾರ್ಶ್ವ | ಕಲ್ಲುಹೊಳೆ-ಬೆಳಗಾವಿ | ೧೨೦೪ | ೨೩೦ |
| ಪೋಲಾಳ್ವ | ಹರಿಹರ-ಚಿತ್ರದುರ್ಗ | ೧೨೨೪ | ೨೪೯ |
| ಬಮ್ಮರ ಹರಿಯಣ್ಣ | ಮಲ್ಲಾಪುರ-ಶಿವಮೊಗ್ಗ | ೧೦೭೫ | ೬೪ |
| ಬರ್ಮದೇವ | ಹಿರೇಮುಗಳಗೇರಿ-ಬಳ್ಳಾರಿ | ೧೦೬೧ | ೫೩ |
| ಬಲದೇವ | ಅಂಕನಾಥಪುರ-ಹಾಸನ | ೯೫೦ | ೧೫ |
| ಬಲದೇವ | ಮೂದನಭಾವಿ-ಧಾರವಾಡ | ೧೧೩೮ | ೧೨೩ |
| ಬಸವಣಯ್ಯ | ಮುಳುಗುಂದ-ಧಾರವಾಡ | ೧೦೭೨ | ೫೪ |
| ಬಾಚಯ್ಯ | ಮಾರೇನಹಳ್ಳಿ-ಹಾಸನ | ಶ. ೧೨ | ೨೨೨ |
| ಬಾಚಣ್ಣ | ಬೇಲೂರು-ಹಾಸನ | ೧೧೮೮ | ೨೦೫ |
| ಬಾಯಣಾಚಾರ್ಯ | ಹರಿಹರ-ಚಿತ್ರದುರ್ಗ | ೧೫೫೪ | ೯೫ |
| ಬಾಳಚಂದ್ರ | ಬೆಳಗಾವಿ-ಬೆಳಗಾವಿ | ೧೨೦೪ | ೨೩೪ |
| ಬಿಜ್ಜಯನಾಯಕ | ಮಾಡಗಿಹಾಳ-ಜತ್ತ | ೧೧೬೨ | ೧೫೮ |
| ಬಿಂದಯ್ಯ | ಕೊಪ್ಪ-ಹಾಸನ | ೧೧೬೦ | ೧೪೧ |
| ಬೊಮ್ಮಯರಾಯ | ಮತ್ತಿಕೊಪ್ಪ-ಶಿವಮೊಗ್ಗ | ೧೩೦೩ | ೨೬೯ |
| ಬೊಪ್ಪಣಪಂಡಿತ | ಶ್ರವಣಬೆಳ್ಗೊಳ-ಹಾಸನ | ೧೧೮೦ | ೧೮೦ |
| ಭಾಸ್ಕರ | ಪಟಂಚೆರು-ಹೈದರಾಬಾದು | ೧೧೨೬ | ೧೧೩ |
| ಭಾಸ್ಕರ | ನಂದಾವರ-ಕರ್ನೂಲು | ೧೧೮೬ | ೧೯೫ |
| ಮಂಗರಾಜ | ಶ್ರವಣಬೆಳುಗೊಳ-ಹಾಸನ | ೧೪೩೨ | ೨೮೬ |
| ಮಧುರ | ಹಂಪಿ-ಬಳ್ಳಾರಿ | ೧೪೧೧ | ೨೭೭ |
| ಮಧುಸೂದನದೇವ | ಹರಿಹರ-ಚಿತ್ರದುರ್ಗ | ೧೧೪೮ | ೧೩೪ |

| ಕವಿ | ಊರು | ಕಾಲ | ಪುಟ |
|---|---|---|---|
| ಮಧುಸೂದನಸೂರಿ | ಹಲಸಿ–ಬೆಳಗಾವಿ | ೧೧೬೯ | ೧೫೩ |
| ಮಲ್ಲ | ಬೆಳತೂರು–ಮೈಸೂರು | ೧೦೫೭ | ೫೧ |
| ಮಲ್ಲ | ಚಿಕ್ಕಹಂದಿಗೋಳ–ಧಾರವಾಡ | ೧೧೯೯ | ೮೮ |
| ಮಲ್ಲಣಾರಾಧ್ಯ | ಮುಳಬಾಗಿಲು–ಕೋಲಾರ | ೧೨೪೭ | ೩೭೩ |
| ಮಲ್ಲಣಾರಾಧ್ಯ | ಹರಿಹರ–ಚಿತ್ರದುರ್ಗ | ೧೫೨೮ | ೨೯೪ |
| ಮಲ್ಲಿಕಾರ್ಜುನ | ನರಗುಂದ–ಧಾರವಾಡ | ೧೦೮೦ | ೭೦ |
| ಮಲ್ಲಿಕಾರ್ಜುನ | ಶಿಕಾರಿಪುರ ಶಿವಮೊಗ್ಗೆ | ೧೧೦೩ | ೯೫ |
| ಮಲ್ಲಿನಾಥ | ಹಂತೂರು–ಚಿಕ್ಕಮಗಳೂರು | ೧೧೨೯ | ೧೧೫ |
| ಮಲ್ಲಿನಾಥದೇವ | ಅಬಲೂರು–ಧಾರವಾಡ | ೧೧೦೪ | ೩೨೭ |
| ಮಹಬಳದೇವ | ಬುಕ್ಕಾಂಬುಧಿ–ಹಾಸನ | ೧೧೨೯ | ೧೧೭ |
| ಮಾದಿರಾಜ | ದಾವಣಗೆರೆ–ಚಿತ್ರದುರ್ಗ | ೧೧೩೪ | ೧೦೫ |
| ಮಾದಿರಾಜ | ಸವದತ್ತಿ–ಬೆಳಗಾವಿ | ೧೩೨೯ | ೩೫೦ |
| ಮಾಧವಭಟ್ಟ | ಸೊರಟೂರು–ಧಾರವಾಡ | ೧೦೯೧ | ೫೯ |
| ಮಾರಮರಸ | ನಾಗೇನಹಳ್ಳಿ–ಕರ್ನೂಲ | ೧೧೯೬ | ೩೩೪ |
| ಮಾಳಪಯ್ಯ | ಕೋಳೂರು–ಧಾರವಾಡ | ೧೦೮೫ | ೭೮ |
| ಮಾಳೆಯ | ಶಿಕಾರಿಪುರ–ಶಿವಮೊಗ್ಗೆ | ೧೧೯೩ | ೨೧೯ |
| ಮುಖ್ಯಪಂಡಿತ | ಲಕ್ಷ್ಮೇಶ್ವರ–ಧಾರವಾಡ | ೧೧೪೭ | ೧೨೮ |
| ಮೂಕಣಪಂಡಿತ | ಹಾವೇರಿ–ಧಾರವಾಡ | ೧೧೩೪ | ೧೧೯ |
| ಮೂವರು ಕವಿಗಳು | ಕುಪ್ಪಗೆಡ್ಡೆ–ಶಿವಮೊಗ್ಗೆ | ೧೧೮೯ | ೩೮ |
| ಯಜ್ಞೇಶ್ವರಸೂರಿ | ಹಲಸಿ–ಬೆಳಗಾವಿ | ೧೧೭೩ | ೧೫೩ |
| ರಘು | ತಾಳಗುಂದ–ಶಿವಮೊಗ್ಗೆ | ಶ. ೫ | ೩ |
| ರವಿನಾಗಭಟ್ಟ | ದಂಡಾಪುರ–ಧಾರವಾಡ | ೯೧೯ | ೧೧ |
| ರಾಜಮಲ್ಲ | ಹುಂಚ–ಶಿವಮೊಗ್ಗೆ | ೧೦೫೦ | ೬ |
| ರಾಮದೇವ | ಕಲ್ಕೆರೆ–ವಿಜಾಪುರ | ೧೧೮೭ | ೩೦೨ |
| ರಾಮದೇವ | ಹೊನ್ನಾಳಿ–ಶಿವಮೊಗ್ಗೆ | ೧೧೮೦ | ೧೭೯ |

| ಕವಿ | ಊರು | ಕಾಲ | ಪುಟ |
|---|---|---|---|
| ರುದ್ರಭಟ್ಟ | ಸವದತ್ತಿ–ಬೆಳಗಾವಿ | ೯೫೮ | ೧೬ |
| ರುದ್ರಭಟ್ಟ | ನರಗುಂದ–ಧಾರವಾಡ | ೧೦೭೪ | ೬೧ |
| ಲಕ್ಷ್ಮಣ | ಹೊಸೂರು–ಬೆಳಗಾವಿ | ೧೧೦೭ | ೯೮ |
| ಲಕ್ಷ್ಮೀಧರ | ಹಂಪಿ–ಬಳ್ಳಾರಿ | ೧೪೧೧ | ೨೮೧ |
| ವಜ್ರ | ಸೊರಬ–ಶಿವಮೊಗ್ಗ | ೧೩೯೩ | ೨೭೬ |
| ವತ್ಸರಾಜ | ಕೊಣ್ಣೂರು–ಧಾರವಾಡ | ೮೬೦ | ೭ |
| ವಾಮನ | ಮುಂಕಣಿ–ವಿಜಾಪುರ | ೧೨೦೬ | ೨೪೧ |
| ವಿದ್ಯಾನಂದೋಪಾಧ್ಯಾಯ | ಮಲೆಯೂರು–ಮೈಸೂರು | ೧೫೧೮ | ೨೯೩ |
| ವೆಣ್ಣೆಯಭಟ್ಟ | ಆಲೂರು–ಧಾರವಾಡ | ೧೦೧೦ | ೩೪ |
| ವೈಜನಾಥ | ಕೊಪ್ಪ–ವಿಜಾಪುರ | ೧೦೭೫ | ೬೨ |
| ವೈಜನಾಥ | ಕುಂದಗೋಳ–ಧಾರವಾಡ | ೧೨೪೦ | ೨೫೮ |
| ಶಂಕರವಿಬುಧ | ಕೋಡಕಣಿ–ಉ. ಕ. | ೧೧೪೧ | ೧೨೭ |
| ಶಂಕರಾರ್ಯ | ಕೈಕಿಣಿ–ಉ. ಕ. | ೧೪೮೪ | ೨೮೮ |
| ಶಾಂತಿನಾಥ | ಲಾಲನಕೆರೆ–ಮೈಸೂರು | ೧೧೬೪ | ೧೪೭ |
| ಶಾರದಿನಾಥಪಂಡಿತ | ಆರಸಿಕೆರೆ–ಹಾಸನ | ೧೧೭೪ | ೧೬೭ |
| ಶಿವಮಾರದೇವ | ಹುಂಚ–ಶಿವಮೊಗ್ಗ | ೮೨೫ | ೬ |
| ಶ್ರೀಕಂಠಸೂರಿ | ಕುರುವತ್ತಿ–ಬಳ್ಳಾರಿ | ೧೦೯೯ | ೮೫ |
| ಶ್ರೀವಿಜಯ | ಚೆನ್ನಗಿರಿ–ಚಿತ್ರದುರ್ಗ | ೧೨೩೪ | ೨೫೪ |
| ಸಜ್ಜನತಿಲಕ | ಕುಕನೂರು–ರಾಯಚೂರು | ೧೧೭೦ | ೧೫೩ |
| ,, | ಸಿರಸಂಗಿ–ಬೆಳಗಾವಿ | ೧೧೮೬ | ೧೯೭ |
| ಸಭಾಪತಿಸ್ವಯಂಭು | ನಂಜನಗೂಡು–ಮೈಸೂರು | ೧೫೧೩ | ೨೯೧ |
| ಸರ್ವಜ್ಞಪಟ್ಟವರ್ಧನ | ನರಗುಂದ–ಧಾರವಾಡ | ೧೧೪೭ | ೧೩೨ |
| ಸವಣಬಲ್ಲರದೇವ | ಅರಸಿಕೆರೆ–ಹಾಸನ | ೧೨೨೦ | ೨೪೪ |
| ಸಾಂತಮಹಂತ | ಲಾಲನಕೆರೆ–ಮೈಸೂರು | ೧೧೩೮ | ೧೨೧ |
| ಸಾಮಿಯಣ್ಣ | ನಾಗಾವಿ–ಧಾರವಾಡ | ೯೬೯ | ೨೩ |
| ಸಾಸಲಯ್ಯ | ಯಳಂದೂರು–ಮೈಸೂರು | ೧೬೫೪ | ೨೯೭ |

| ಕವಿ | ಊರು | ಕಾಲ | ಪುಟ |
|---|---|---|---|
| ಸಿಂಗದೇವ | ಉದ್ರಿ–ಶಿವಮೊಗ್ಗೆ | ೧೧೭೫ | ೧೬೭ |
| ಸುಕರಸುಕವಿಕಂಠಾಭರಣ | ,, | ೧೧೬೭ | ೧೫೦ |
| ಸುಧಾಕರದೇವ | ಸಂಪಿಗೆ–ತುಮಕೂರು | ೧೩೩೧ | ೨೭೧ |
| ಸುಬ್ಬ | ಅಸುಂಡಿ–ಧಾರವಾಡ | ಶ. ೧೨ | ೨೨೫ |
| ಸೂರಿಲಿಯ ಮುಖ್ಯಪಂಡಿತ | ಹೊಸೂರು–ಧಾರವಾಡ | ೧೧೪೮ | ೧೩೭ |
| ಸೂರ್ಯಣ | ಜಕ್ಕೇನಹಳ್ಳಿ–ಹಾಸನ | ೧೧೭೦ | ೧೫೫ |
| ಸೋಮ | ಹೊಸೂರು–ಕೋಲಾರ | ೧೩೭೦ | ೨೭೯ |
| ಸೋಮನಾಥಪಂಡಿತ | ಹಿರೇಬೇವಿನೂರು–ವಿಜಾಪುರ | ೧೧೯೦ | ೨೧೩ |
| ಸೋಮನಾಥಪಂಡಿತ | ಹಾರನಹಳ್ಳಿ–ಹಾಸನ | ೧೨೩೪ | ೨೫೬ |
| ಸೋಮೇಶ್ವರಭಟ್ಟ | ನೌಲೆ–ಹಾಸನ | ೧೧೩೯ | ೧೨೫ |
| ಹಂಸದೇವ | ಚಿಕ್ಕನಾಯಕನಹಳ್ಳಿ –ತುಮಕೂರು | ೧೨೨೧ | ೨೪೫ |
| ಹರಿಹರಸೂರಿ | ಬೊಮ್ಮೇನಹಳ್ಳಿ–ಹಾಸನ | ೧೧೯೪ | ೨೨೦ |



# ೧. ಕುಬ್ಜ

(೫ನೆಯ ಶತಮಾನ)

ಈತನೊಬ್ಬ ಸಂಸ್ಕೃತ ಶಾಸನಕವಿ. ಶಿವಮೊಗ್ಗೆ ಜಿಲ್ಲೆಯ ಶಿಕಾರಪುರ ತಾಲೂಕಿಗೆ ಸೇರಿರುವ ತಾಳಗುಂದ ಎಂಬ ಗ್ರಾಮದ ಶಾಸನವೊಂದನ್ನು[1] ಈ ಕುಬ್ಜ ಬರೆದಿದ್ದಾನೆ. ಈತನು ಕದಂಬ ಕಕುತ್ಸ್ಥವರ್ಮನ ಮಗ ಶಾಂತವರ್ಮನ ಆಶ್ರಿತನಾಗಿದ್ದನೆಂದು ತಿಳಿಯುತ್ತದೆ. ತನ್ನಿಂದ ರಚಿತವಾದ ಈ ಕಾವ್ಯಶಾಸನವನ್ನು ಕಲ್ಲಮೇಲೆ ಬರೆದಾತನು ತಾನೇ ಎಂದು ಅವನು ಹೇಳಿದ್ದಾನೆ. ಕವಿಯ ನಾಮನಿರ್ದೇಶವುಳ್ಳ ಆ ಪದ್ಯ ಇದು :

ತಸ್ಯೌರಸಸ್ಯ ತನಯಸ್ಯ ವಿಶಾಲಕೀರ್ತೇಃ
ಪಟ್ಟತ್ರಯಾರ್ಪಣವಿರಾಜಿತಚಾರುಮೂರ್ತೇಃ
ಶ್ರೀಶಾಂತಿವರ್ಮನೃಪತೇರ್ವರಶಾಸನಸ್ಥಃ
ಕುಬ್ಜಃ ಸ್ವಕಾವ್ಯಮಿದಮಶ್ಮತಲೇ ಲಿಲೇಖ ||

ಶಾಸನದ ಆರಂಭದಲ್ಲಿಯ 'ಓಂ ಸಿದ್ಧಂ', 'ನಮಃ ಶಿವಾಯ' ಮತ್ತು ಸಮಾಪ್ತಿಯಲ್ಲಿಯ 'ನಮೋ ಭಗವತೇ ಸ್ಥಾನಕುಂದೂರವಾಸಿನೇ ಮಹಾದೇವಾಯ' 'ನಂದತು ಸರ್ವಸಮಂತಾಗತೋಽಯಮಧಿವಾಸಃ' 'ಸ್ವಸ್ತಿ ಪ್ರಜಾಭ್ಯ ಇತಿ' ಎಂಬ ಮಾತುಗಳನ್ನು ಬಿಟ್ಟರೆ, ಉಳಿದ ಶಾಸನವೆಲ್ಲ ಪದ್ಯಮಯವಾಗಿದೆ. ಇದರಲ್ಲಿ ಒಟ್ಟು ೩೪ ಪದ್ಯಗಳುಂಟು. ಕದಂಬರಾಜರ ಕುಲ ಪರಿಚಯ, ಕಾಕುಸ್ಥವರ್ಮನ ಪ್ರಶಸ್ತಿ ಮೊದಲಾದುವನ್ನು ವಿವರಿಸಿ, ಅವನು ಮಹಾತಟಾಕವೊಂದನ್ನು ಕಟ್ಟಿಸಿದ ವಿಷಯವನ್ನು ಈ ಶಾಸನದಲ್ಲಿ ಹೇಳಿದೆ. ಕಾಕುತ್ಸ್ಥವರ್ಮನ ವರ್ಣನಪದ್ಯಗಳಲ್ಲಿ ಒಂದೆರಡನ್ನು ಮಾದರಿಗಾಗಿ ಇಲ್ಲಿ ಕೊಟ್ಟಿದೆ:

---

1 Ep. Ind. VIII, page 24.
My. Arc. Report, 1936.

ಜ್ಯಾಯೋಽಭಿಸ್ಸಹ ವಿಗ್ರಹೇಽರ್ಥಿಷು ದಯಾ ಸಮ್ಯಕ್ಪ್ರಜಾಪಾಲನಂ
ದೀನಾಭ್ಯುದ್ಧರಣಂ ಪ್ರಧಾನವಸುಭಿರ್ಮುಖ್ಯದ್ವಿಜಾಭ್ಯರ್ಹಣಮ್
ಯಸ್ಯೈ ತತ್ಕುಲಭೂಷಣಸ್ಯ ನೃಪತೇಃ ಪ್ರಜ್ಞೋತ್ತರಂ ಭೂಷಣಂ
ತಂ ಭೂಷಾಃ ಖಲು ಮೇನಿರೇ ಸುರಸಮಂ ಕಾಕುತ್ಸ್ಥಮತ್ರಾಗತಮ್ ||

ನಾನಾವಿಧದ್ರವಿಣಸಾರಸಮುಚ್ಚಯೇಷು
ಮತ್ತದ್ವಿಪೇಂದ್ರಮದವಾಸಿತಗೋಪುರೇಷು
ಸಂಗೀತವಲ್ಗುನಿನದೇಷು ಗೃಹೇಷು ಯಸ್ಯ
ಲಕ್ಷ್ಮ್ಯಂಗನಾಧೃತಿಮತೀ ಸುಚಿರಂ ಚರೇ ಮೇ ||

ಈ ತಾಳಗುಂದ ಶಾಸನವನ್ನು ಪುನಃ ಸಂಪಾದಿಸಿ ವಿಮರ್ಶಿಸಿದ ಎಫ್. ಕೀಲ್ ಹಾರ್ನ್ ಅವರು, ಆ ಲೇಖನಕ್ಕೆ ಬರೆದ ಪೀಠಿಕೆಯ ಕೊನೆಯಲ್ಲಿ ಇದು ೬ನೆಯ ಶತಮಾನದ ಪ್ರಥಮಾರ್ಧದಲ್ಲಿ ಹುಟ್ಟಿದುದೆಂದು ಅಭಿಪ್ರಾಯಪಟ್ಟಿದ್ದಾರೆ. ಆದರೆ, ಇದೇ ಕದಂಬ ಕಾಕುತ್ಸ್ಥವರ್ಮನ ಹಲ್ಮಿಡಿಯ ಕನ್ನಡ ಶಾಸನವು ೫ನೆಯ ಶತಮಾನದ ಮಧ್ಯಕಾಲದ್ದೆಂದು ಹೇಳಲಾಗುತ್ತದೆ.[1] ಆದುದರಿಂದ ಕುಬ್ಜಕವಿಯ ಕಾಲ ಸುಮಾರಾಗಿ ೫ನೆಯ ಶತಮಾನದ ಉತ್ತರಾರ್ಧವೆಂದು ತಿಳಿಯಬಹುದು.

---

1 Mysore Archiological Report for 1936.

# ೨. ರಘು

(೫ನೆಯ ಶತಮಾನ)

ಮೇಲಣ ತಾಳಗುಂದ ಶಾಸನದಲ್ಲಿ ಉಕ್ತವಾದ ಕದಂಬ ರಾಜವಂಶಾವಳಿಯಲ್ಲಿ ರಘು ಎಂಬವನನ್ನು 'ಕವಿ' ಎಂಬುದಾಗಿ ಶಾಸನಕವಿ ಕುಬ್ಜನು ವರ್ಣಿಸಿದ್ದಾನೆ. ಈತನು ಆ ಶಾಸನದ ನಾಯಕನಾದ ಕಾಕುತ್ಸ್ಥವರ್ಮನ ಅಣ್ಣ. ಯಾವ ಭಾಷೆಯಲ್ಲಿ ಕವಿಯಾಗಿದ್ದನೆಂಬ ನಿರ್ದೇಶ ಅದರಲ್ಲಿಲ್ಲ. ಊಹಿಸುವುದಾದರೆ ಸಂಸ್ಕೃತಕವಿ ಎಂದು ಊಹಿಸುವುದು ಸಂದರ್ಭೋಚಿತವಾದೀತು. ಈ ರಘು ಕವಿಯಲ್ಲದೆ, ವಿವಿಧ ಕಲಾಕುಶಲನೂ ಆಗಿದ್ದನು. ಈತನು ಸುಮಾರು ಕುಬ್ಜಕವಿಯ ಸಮಕಾಲೀನನೆಂಬುದು ಸ್ಪಷ್ಟವಿದೆ. ಅವನ ವರ್ಣನಪದ್ಯ ಇದು :

ಪ್ರತಿಭಯಸಮರೇಷ್ವರಾತಿಶಸ್ತ್ರೋಲ್ಲಿಖಿತಮುಖೋಽಭಿಮುಖದ್ವಿಷಾಂ
ಪ್ರಹರ್ತಾ |
ಶ್ರುತಿಪಥನಿಪುಣಃ ಕವಿಃ ಪ್ರದಾತಾ ವಿವಿಧಕಲಾಕುಶಲಃ ಪ್ರಜಾ-
ಪ್ರಿಯಶ್ಚ ||

## ೩. ಅಚಲನ್

(ಸು. ೭೪೪)

ವಿಜಾಪುರ ಜಿಲ್ಲೆಯ ಪಟ್ಟದಕಲ್ಲ ವಿರೂಪಾಕ್ಷದೇವಾಲಯದ ಪೂರ್ವದ ಅರ್ಧಮಂಟಪದ ಎಡಕಂಬದ ಹಿಮ್ಮಗ್ಗುಲಿ ಎರಡು ಸಂಸ್ಕೃತ ಆರ್ಯಾಪದ್ಯಗಳ ಅಡಿಯಲ್ಲಿಯೂ[1] ಅದೇ ಮಂಟಪದ ಪದ್ಮಸಿಧಿಯ ಕೆಳಗೆ ಒಂದು ಉತ್ಪಲಮಾಲಾ ಕನ್ನಡ ಪದ್ಯದ ಅಡಿಯಲ್ಲಿಯೂ[2] ಅಚಲನ್ ಎಂಬವನ ಅಂಕಿತವನ್ನು ಕಾಣುತ್ತೇವೆ. ಕನ್ನಡ ಪದ್ಯದ ಕೆಳಗಣ ಅಂಕಿತದ ಹಿಂದೆ "ದೇವಯ್ಯಗಳಾ ಮಗ" ಎಂಬ ಪರಿಚಯದ ಪದ ಸೇರಿದೆ. ಸಂಸ್ಕೃತ ಹಾಗೂ ಕನ್ನಡ ಪದ್ಯಗಳು ನಾಟ್ಯವಿಶಾರದನಾದ 'ನಟಸೇವ್ಯ'ನೆಂಬವನನ್ನು ಬಣ್ಣಿಸುತ್ತವೆ. ಬಹುಶಃ ಅಚಲನು ಈ ಪದ್ಯಗಳ ಕರ್ತೃವೆಂದೂ[3] ಎರಡೂ ಅಂಕಿತಗಳು ಒಬ್ಬನವೇ ಎಂದೂ, ಆತನ ತಂದೆ ದೇವಯ್ಯನೆಂದೂ ತೋರುತ್ತದೆ. ಈತನು ನಟಸೇವ್ಯನ ಶಿಷ್ಯನೋ ಅವನಲ್ಲಿ ಆದರಾಭಿಮಾನವುಳ್ಳ ಇನ್ನಾವನೋ ಇರಬೇಕೆಂದು ಊಹಿಸಲು ಎಡೆಯಿದೆ.

ಈ ಕೃತಿಗಳಿಗೆ ಕಾಲೋಲ್ಲೇಖವಿಲ್ಲದಿದ್ದರೂ ವಿರೂಪಾಕ್ಷ ದೇವಾಲಯದ ನಿರ್ಮಾಣಕಾಲದಿಂದ ಅಚಲನ್ ಕ್ರಿ. ವ. ಸುಮಾರು ೭೪೪ರೊಳಗೆ ಈ ಪದ್ಯಗಳನ್ನು ರಚಿಸಿರಬಹುದಾಗಿದೆ. ಕ್ರಿ. ವ. ೭೩೩ರಿಂದ ೭೪೪ರ ಅವಧಿಯಲ್ಲಿ ಆಳಿದ ಬಾದಾಮಿ ಚಾಲುಕ್ಯವಂಶದ ೨ನೆಯ ವಿಕ್ರಮಾದಿತ್ಯನು ಕಾಂಚಿ

---

1. ಪಟ್ಟದಕಲ್ಲಗುಡಿಗಳು (ಎ. ಎಂ. ಅಣ್ಣೀಗೇರಿ, ಎಂ. ಎ.) —ಪು. ೮೧, ಶಾ. ೭.
2. ,, ,, —ಪು. ೮೨, ಶಾ. ೧೦
3. 'ಅಚಲನ್' ಎಂಬುದೂ ಪದ್ಯಗಳಲ್ಲಿ ವರ್ಣಿತನಾದ 'ನಟಸೇವ್ಯ'ನ ಹೆಸರೆಂದು ತೋರುವದು — ಎಂದು ಎ. ಎಂ ಅಣ್ಣೀಗೇರಿಯವರು ಪದ್ಯಾರ್ಥದಲ್ಲಿ ಅಭಿಪ್ರಾಯಪಡುತ್ತಾರೆ. ನಟಸೇವ್ಯನೇ ಅಚಲನಾಗಿದ್ದರೂ ಅವನು ಕವಿಯೆಂಬುದು ನಿರ್ವಿವಾದ.

ಯನ್ನು ಮೂರು ಬಾರಿ ಗೆದ್ದುದರ ಸ್ಮರಣಾರ್ಥವಾಗಿ ಆತನ ಮಡದಿ ಈ ವಿರೂಪಾಕ್ಷದೇವಾಲಯವನ್ನು ಕಟ್ಟಿಸಿದಳೆಂದು ಆ ಗುಡಿಯಲ್ಲಿರುವ ಒಂದು ಶಾಸನವು ಹೇಳುತ್ತದೆ. ಆದುದರಿಂದ ಅಚಲನ್ ಕವಿ ಈ ಕಾಲದವನಾಗಿರಬೇಕು. ಆ ಪದ್ಯಗಳು ಇಂತಿವೆ :

**ಸಂಸ್ಕೃತ**

ಭರತನುತವಚನರಚನಾ
ವಿರಚಿತನಟಸೇವ್ಯಸಿಂಘನಾದೇನ
ಪರನಟ ಮದಾಂಧಹಸ್ತೀ
ಪರಿಹೀನಮದೋ ಭವತ್ಯೇವ ||
ನಟಸೇವ್ಯಭರತಮತಯುತ
ಪಟುತರವಚನಾಶನಿಪ್ರಪಾತೇನ
ಕುಟಿಲೋನ್ನತನಟಶೈಲ
ಸ್ಫುಟಿತಾನತಮಸ್ತಕ(ಕಾಃ?)ಬ್ಭವಂತಿ ||

—ಅಚಲನ್

ಇಲ್ಲಿ ಆರ್ಯೆಗೆ ಸಂಸ್ಕೃತದಲ್ಲಿಯೂ ದ್ವಿತೀಯಾಕ್ಷರಪ್ರಾಸವನ್ನು ಅಳವಡಿಸಿದುದು ಗಮನಾರ್ಹವಾಗಿದೆ.

**ಕನ್ನಡ**

ಖ್ಯಾತಮಹಾಪ್ರಭಾವ ಭರತಾಗಮಯುಕ್ತಿ ಬಹುಪ್ರಕಾರದಾ
ಮಾತಿನೊಳೆಲ್ಲ ಮೇಣನಟಸೇವ್ಯನ ಮುನ್ನೆ ಯಥೋಕ್ತಮರ್ಗದಿ
ನ್ದೀ ತೆಱದಿಮ್ದದಗ್ರ ತಲ ಸಞ್ಚರಮೆಮ್ಬುದೆನ್ದು ದೇ(ಪೇ)ೞ್ದೊಡಿ
ನ್ನಾತನೆ ನರ್ತಕಂ ನಟರೊಳಗ್ಗಳಮೀ ಭುವನಾನ್ತರಾ[ಳ]ದೊಳ್ ||

—ದೇವಯ್ಯಗಳಾ ಮಗ ಅಚಲನ್

# ೪. ಶಿವಮಾರದೇವ

( ಸು. ೮೨೫ )

ಶಿವಮಾರದೇವನು ಗಂಗಾರಾಜವಂಶದ ಒಬ್ಬ ದೊರೆ. ಪೆರ್ಮಾನಡಿ ಶ್ರೀಪುರುಷನೆಂಬಾತನ ಮಗನು. ಈತನಿಗೆ ಸೈಗೊಟ್ಟ ಎಂಬ ಇನ್ನೊಂದು ಹೆಸರೂ ಇದ್ದಿತು. ಈತನು ಗಜಶಾಸ್ತ್ರದಲ್ಲಿ ಪ್ರವೀಣನಾಗಿದ್ದು 'ಗಜಾಷ್ಟಕ' ವನ್ನು ರಚಿಸಿದ್ದನೆಂದೂ ಅದು ಶಿವಮಾರಮತವೆಂದು ಪ್ರಸಿದ್ಧಿ ಪಡೆದಿದ್ದಿತಲ್ಲದೆ, ನಾಡಿನಲ್ಲಿ ಒನಕೆವಾಡಾಗಿ ಬಹಳ ಪ್ರಚುರವಾಗಿದ್ದಿತೆಂದೂ ಶಿವಮೊಗ್ಗೆ ಜಿಲ್ಲೆಯ ನಗರ ತಾಲೂಕಿನ ಹುಂಚಗ್ರಾಮದ ಕ್ರಿ. ವ. ೧೦೭೭ರ ಒಂದು ಶಾಸನದಿಂದ[1] ತಿಳಿದುಬರುತ್ತದೆ. ಶಿವಮಾರನಿಗಿಂತ ಹಿಂದಣ ತಲೆಗಳಿಂದ ಈ ಶಾಸನಕಾಲದಲ್ಲಿ ಧರ್ಮಕಾರ್ಯವನ್ನೆಸಗಿದ ಚಟ್ಟಲೆಯವರೆಗೆ ಅವಿಚ್ಛಿನ್ನವಾದ ವಂಶಾವಳಿಯನ್ನು ಈ ಶಾಸನ ಒದಗಿಸುತ್ತದೆ. ಅದರಂತೆ ಲೆಕ್ಕಹಾಕಿ ನೋಡಿದರೆ, ಕವಿ ಶಿವಮಾರದೇವನ ಕಾಲ ಸುಮಾರಾಗಿ ಕ್ರಿ. ವ. ೮೨೫ ಇರಬಹುದೆಂದು ಗೊತ್ತಾಗುತ್ತದೆ. ಈ ಶಾಸನ ಈ ಕವಿಯ ವಿಷಯವಾಗಿ ಹೀಗೆ ಹೇಳುತ್ತದೆ:

ಅಂತು ವೀರಮಾರ್ತ್ತಂಡನೆನಿಸಿದಾತನಮಗಂ ಶಿವಮಾರದೇವಂ ಸೈಗೊಟ್ಟನೆಂಬೆರಡನೆಯ ಪೆಸರಂ ತಾಳ್ದಿ ಶಿವಮಾರಮತವೆಂದು ಗಜಶಾಸ್ತ್ರಮಂ ಮಾಡಿ, ಮತ್ತಂ

ಏವೇಳ್ವುದೊ ಶಿವಮಾರ ಮ-
ಹೀವಳಯಾಧಿಪನ ಸುಭಗಕವಿತಾಗುಣಮಂ
ಭೂವಳಯದೊಳ್ಗಜಾಷ್ಟಕ-
ಮೋವನಿಗೆಯೆವೊನಕೆವಾಡುಮಾಡುದೆ ಪೇಳ್ಗು ||

ಶಿವಮಾರನ ಕವಿತಾಗುಣ ಸುಭಗವಾದುದೆಂದು ಇಲ್ಲಿ ಹೇಳಿದುದು ಅತ್ಯುಕ್ತಿಯ ವರ್ಣನೆಯೇನಲ್ಲ. ಜನಪ್ರಿಯವಾದ ಒನಕೆವಾಡಾಗುವುದಕ್ಕೆ ಕಾರಣ ಆ ಕಾವ್ಯದ ಸುಭಗತೆಯೇ ಸರಿ. ಈ ಒನಕೆವಾಡು ಹನ್ನೊಂದನೆಯ ಶತಮಾನದ ಅಂತ್ಯದ ವರೆಗಂತೂ ಪ್ರಚಾರದಲ್ಲಿದ್ದಿತೆಂಬುದು ನಿಸ್ಸಂದೇಹ.

---

1. Ep. Car. VIII, ನಗರ ( ಹುಂಚ ).

# ೫. ವತ್ಸರಾಜ

( ೮೬೦ )

ಧಾರವಾಡ ಜಿಲ್ಲೆಯೊಳಗೆ, ನವಿಲುಗುಂದ ತಾಲೂಕಿನೊಳಗೆ, ಕೊಣ್ಣೂರೆಂಬ ಗ್ರಾಮದೊಳಗೆ ಕ್ರಿ. ವ. ೧೨ನೆಯ ಶತಮಾನದಲ್ಲಿ ಬರೆಯಲಾದ ಒಂದು ಶಿಲಾಶಾಸನ ಸಿಕ್ಕಿದೆ. ಅದು ತತ್ಕಾಲೀನ ಧರ್ಮ-ದಾನ-ದತ್ತಿಗಳನ್ನು ಉಲ್ಲೇಖಿಸುವ ಶಾಸನವಾಗಿರದೆ ತತ್ಪೂರ್ವದ ತಾಮ್ರಶಾಸನವೊಂದನ್ನು ಕಲ್ಲಮೇಲೆ ಉದ್ಧರಿಸಲಾಯಿತೆಂದು ಆರಂಭದ ಪ್ರಸ್ತಾವನೆಯಿಂದ ತಿಳಿದು ಬರುತ್ತದೆ. ಅದು ಇಂತಿದೆ :

" ಶ್ರೀಮನ್ಮಹಾಸ್ಥಾನಂ ಕೊಳನೂರ ಮಹಾಪ್ರಭು ಪುಲಿಯಮರಸರುಂ ಮೂಱುಪುರ ಪಂಚಮಠಸ್ಥಾನಂಗಳುಂ ತಾಮ್ರಶಾಸನಮಂ ನೋಡಿ ಬರಿಯಿಮೆನಲ್ಕಾ ಶಾಸನದೊಳೆಂತಿರ್ದುದಂತೀ ಶಿಳಾಶಾಸನಮಂ ಶ್ರೀವೀರನಂದಿ ಸೈದ್ಧಾಂತಿಕಚಕ್ರವರ್ತಿಗಳು ಬರೆಯಿಸಿದರು. "

ಇಲ್ಲಿ ಉದ್ಧೃತವಾದ ಈ ತಾಮ್ರಶಾಸನ ರಾಷ್ಟ್ರಕೂಟ ರಾಜನಾದ ಮೊದಲನೆಯ ಅಮೋಘವರ್ಷನದು. ಅದರಲ್ಲಿ ಉಕ್ತವಾಗಿರುವಂತೆ ಆ ಶಾಸನದ ಕಾಲ ಶ. ವ. ೭೮೨. ಇದು ಸಂಸ್ಕೃತಭಾಷೆಯಲ್ಲಿ ಬರೆದುದಾಗಿದೆ; ಪದ್ಯಾತ್ಮಕವಾಗಿದೆ. ಈ ತಾಮ್ರಶಾಸನವನ್ನು ಬರೆದಾತನು ವತ್ಸರಾಜ ಎಂಬ ಕವಿ; ಈತನು ವಾಳಭ ಕಾಯಸ್ಥ ವಂಶದವನಾದ ಶ್ರೀಹರ್ಷ ಎಂಬಾತನ ಮಗನು; ಧರ್ಮಾಧಿಕರಣನಾದ ಸೇನಭೋಗಿಕನು. ಈ ಕೆಳಗಣ ಗದ್ಯದಲ್ಲಿ ಈ ಮಾತನ್ನು ತಿಳಿಯಪಡಿಸಿದೆ :

"ಲಿಖಿತಂ ಚೈತದ್ವಾಳಭಕಾಯಸ್ಥವಂಶಜಾತೇನ ಧರ್ಮಾಧಿಕರಣಸೇನಭೋಗಿಕವತ್ಸರಾಜೇನ ಶ್ರೀಹರ್ಷಸೂನುನಾ ಗ್ರಾಮಪತ್ತ್ರಳಾಧಿಕೃತಲೇಖಕರಣಹಸ್ತಿನಾಗವರ್ಮಪೃಥ್ವೀರಾಮಭೃತ್ಯೇನ. "

# ೬. ಕವಿರಾಜರಾಜ

(೯೩೦)

ಧಾರವಾಡ ಜಿಲ್ಲೆಯೊಳಗೆ ಶಿಗ್ಗಾವಿ ತಾಲೂಕಿನಲ್ಲಿ ಕಳಸ ಎಂಬುದೊಂದು ಗ್ರಾಮ. ಅಲ್ಲಿ ರಾಷ್ಟ್ರಕೂಟ ೪ನೆಯ ಗೋವಿಂದನ ಆಳಿಕೆಯ ಕಾಲದ ಶಾಸನವೊಂದು ನಿಂತಿದೆ.[1] ಅದನ್ನು ಸು. ೯೩೦ನೆಯ ಕ್ರಿಸ್ತಾಬ್ದದ ಶಾಸನವೆಂದು ತಿಳಿಯಲಾಗಿದೆ. ಅದನ್ನು ಕಾವ್ಯಮಯವಾಗಿ ರಚಿಸಿದ ಕವಿ, 'ಕವಿರಾಜರಾಜ' ಎಂಬ ಬಿರುದಾಂಕಿತನೆಂದು ಅದರಲ್ಲಿಯ ಉಲ್ಲೇಖಗಳಿಂದ ಗೊತ್ತಾಗುತ್ತದೆ. ಅವನು ತನ್ನ ಅಂಕಿತನಾಮವನ್ನು ಹೇಳಿಕೊಂಡಿಲ್ಲ. ಶಾಸನಾಂತ್ಯದಲ್ಲಿ ಕವಿ ತನ್ನ ಹಾಗೂ ತನ್ನ ಕಾವ್ಯದ ಬಗೆಗೆ ಒಂದು ಕಂದಪದ್ಯವನ್ನು ಬರೆದಿದ್ದಾನೆ. ಅದರಿಂದ ಆತನು ಬ್ರಾಹ್ಮಣನೆಂದು ತಿಳಿಯುತ್ತದೆ. ಕಾಡಿಯೂರನ್ನೂ ಅಲ್ಲಿಯ ಬ್ರಾಹ್ಮಣರನ್ನೂ ವರ್ಣಿಸುವ ತನ್ನ ಬಗೆ ಹೊಸತೆಂದು ಕವಿ ಹೇಳಿಕೊಂಡಿದ್ದಾನೆ. ಆ ಕಂದಪದ್ಯವಿದು :

ಕವಿರಾಜರಾಜ ವಿಬುಧ-
ಪ್ರವರಂ ಶ್ರೀಕಾಡಿಯೂರನಲ್ಲಿಯ ಕಮಳೋ-
ದ್ಭವವಂಶಪ್ರೋತ್ತಮರಂ
ನವೀನವರ್ಣನೆಯಿನೆಸೆಯಲಭಿವರ್ಣಿಸುವೆಂ ||

ಈ ಶಾಸನಕವಿ 'ಕವಿರಾಜರಾಜ' ಎಂಬ ಬಿರುದನ್ನು ಸಾಮಾನ್ಯವಾಗಿ ಇಟ್ಟುಕೊಂಡಿರಬಹುದಾದರೂ, ಸೂಚಕವಾಗಿ, ಕವಿರಾಜ ಎಂಬವನಿಗಿಂತ ತಾನು ಶ್ರೇಷ್ಠನೆಂದು ಪ್ರಶಂಸಿಕೊಂಡಿರುವ ಸಂಭವವೂ ಹೆಚ್ಚಾಗಿದೆ. ಹಾಗಿದ್ದರೆ ಈತನ ಸಮಕಾಲೀನನಾಗಿ, ಶಾಸನಕವಿಯೆಂದೇ ಆಗಲಿ, ಪ್ರಸಿದ್ಧನಾದ ಕವಿರಾಜನೆಂಬವನಿದ್ದನೆಂದೆನ್ನಬೇಕು. ಆದರೆ, ಹಾಗೆ ನಿಶ್ಚಿತವಾಗಿ ತಿಳಿಯುವಂತಿಲ್ಲ.

---

1 Ep. In. XIII—329.

ಕವಿರಾಜರಾಜನು ತನ್ನೀ ಶಾಸನಕಾವ್ಯದಲ್ಲಿ ತನ್ನನ್ನು ತಾನು ವಿಶೇಷ ವಾಗಿ, ನೇರವಾಗಿ ಬಣ್ಣಿಸಿಕೊಳ್ಳದೆ, ಪ್ರಸಂಗಾಂತರದಲ್ಲಿ—ಕಾಡಿಯೂರ ಜನ ಗಳನ್ನು ಶ್ಲೇಷೆಯಿಂದ ಬಣ್ಣಿಸುವ ಸಂದರ್ಭದಲ್ಲಿ—ತನ್ನ ಕಾವ್ಯ ಅಲಂಕಾರ ಯುಕ್ತವಾದುದೆಂದು ಸವಿನಯ ಅಭಿಮಾನದಿಂದ ವ್ಯಕ್ತಗೊಳಿಸಿರುವುದು ಒಪ್ಪುವಂತಹ ಮಾತಾಗಿದೆ. ಇಲ್ಲಿ, ಆ ಶಾಸನದಿಂದ ಅವತರಿಸಿಕೊಂಡಿರುವ ಗದ್ಯಭಾಗದಲ್ಲಿ ಅದನ್ನು ಕಾಣಬಹುದು.

ಈ ಶಾಸನದ ಕಲ್ಬರೆಹವು ೩.೯'×೫' ಕ್ಷೇತ್ರದಲ್ಲಿ, ೭೬ ಪಙ್ಕ್ತಿಗಳಲ್ಲಿ ಹಬ್ಬಿದೆ. ಈ ಸುಂದರವಾದ ಕಾವ್ಯದಲ್ಲಿ ೪೦ ಪದ್ಯಗಳಿವೆ. ಪುಲಿಗೆರೆಯ ನೆರೆಯ ಕಾಡಿಯೂರು ( ಈಗಿನ ಕಳಸ ), ಅಲ್ಲಿರುವ ಕೊಂಡಲಿಗೆರೆ, ಅಲ್ಲಿಯ ಜನಗಳು ವಿಶದವಾಗಿ, ಸೊಗಸಾಗಿ ವರ್ಣಿತರಾಗಿದ್ದಾರೆ. ರಾಜರು ಸಾಮಂ-ತರು, ಧರ್ಮಿಗಳು-ದಾನಿಗಳು, ಆಚಾರ್ಯರು-ಮಹಾಜನಗಳು ಇವರು ಗಳನ್ನೇ ವರ್ಣಿಸುವುದು ಶಾಸನಗಳಲ್ಲಿ ಸಾಮಾನ್ಯವಾಗಿರುವಾಗ, ಊರ ಸಾಮಾನ್ಯ ನಿವಾಸಿಗಳ ಗುಣ-ಸ್ವಭಾವ, ರೀತಿ-ನಡತೆಗಳನ್ನು ಕುರಿತು—ಸಹಜವಾದ ರೀತಿಯಲ್ಲಿಯೇ ಆಗಲಿ—ವರ್ಣಿಸಿ, ತನ್ನ ಸ್ವಾಭಿಮಾನದ ವೈಶಾಲ್ಯವನ್ನು ತೋರಿದ ಈ ಕವಿರಾಜರಾಜ ತನ್ನ ವಿಶಿಷ್ಟ ದೃಷ್ಟಿಕೋನ ದತ್ತ ನಮ್ಮ ಗಮನವನ್ನು ಸೆಳೆಯುತ್ತಾನೆ. ಕಾಡಿಯೂರ ಅಗ್ರಹಾರದಲ್ಲಿ ವ್ಯಾಕರಣ, ಅರ್ಥಶಾಸ್ತ್ರ, ಸಾಹಿತ್ಯವಿದ್ಯೆ, ಇತಿಹಾಸ, ಏಕಾಕ್ಷರ—ಇವೆಲ್ಲ ವನ್ನು ಅವುಗಳಿಗೆ ಟೀಕೆ ಬರೆಯಬಲ್ಲವರಾಗುವಷ್ಟು ಕಲಿಸಲಾಗುತ್ತಿತ್ತೆಂಬ ವಾಸ್ತವ ವರ್ಣನೆಯನ್ನೂ ಅವನು ಮಾಡಿದ್ದಾನೆ. ಈ ದೃಷ್ಟಿಯಿಂದ 'ನವೀನ ವರ್ಣನೆ' ಎಂಬುದು ಸಾರ್ಥಕವೆನಿಸಿದೆ.

ಆ ಶಾಸನದಿಂದ ಆಯ್ದ ಸ್ವಲ್ಪ ಭಾಗ :

ಭರತಮಹೀಮಂಡಳಕಾ-
ಭರಣಂ ಕುಂತಳಧರಾತಳಂ ತದ್ವಿಷಯ-
ಕ್ಕೆರಡಱುನೂಱು ಲಲಾಮಂ
ಪುರಿಕರ ಜನಪದಮದಕ್ಕೆ ನವನವಮಹಿಮಂ ||

ಪೊಱವೊಳಲೊಳ್ಪೊದಳ್ದ ನಸುನಾಡಲ್ಪುಂದದಬನೊಳ್ಪಿನುದ್ದ ಪೆ-
ರ್ಗೆಱೆಗಳಿನೊಂದೆ ಗಾವುಸುತಿರ್ಪ ಮಹಾಲಯನರ್ದ್ದ ಪ್ಪುದ ಕಿ-

ಕ್ಕೆಱಿ ನಿಮಿರ್ದಿರ್ದ ಪಾದರಿಯಿನೂಡುವ ತೆಂಬೆಲರಿಂ ಬೆಡಂಗುವೆ-
ತ್ತೆಱೆಯನ ಕಾಡಿಯೂರ್ವಯಸಿ ನೋೞ್ಪರ ಕಣ್ಗೆ ಸೆದೊಪ್ಪಿ ತೋಱುಗುಂ ||

ವ|| ಮತ್ತಮಲ್ಲಿ ಬಡಿವುದುಂ ಬಿಡುವುದುಂ ಚಾಪವಿದ್ಯೆಯೊಳ್, ಕೃತ್ರಿಮ
ಮುಮನಿತ್ಯಮುಮಿಂದ್ರಜಾಲದೊಳ್, ಕಡಂಗುವು.......... ಸುವುದುಮಭ್ರ
ಪಟಲದೊಳ್, ಸರಳತೆಯುಂ ಬಡತನಮುಮಬಳಾಮಧ್ಯದೊಳ್, ನಡುಕ
ಮುಮಾಱಿಡಿಯುಂ ಚೂತಮಂಜರಿಯೊಳ್, ಕುಂದುಂ ಕಳಂಕಮುಂ ಹರಿಣಾಂ
ಕನೊಳ್, ಉರ್ಕುಂ ಕಂಪಮುಂ ಮಂಡಳಾಗ್ರದೊಳ್, ಸೆಱೆಯುಮೇಱುಂ
ನೆತ್ತಮಾಡುವರೊಳ್, ಲೋಭಮುಮೆಳಿಕೊನೆ[ಯೊ]ಳ್ಪಿನೊಳ್, ನಿರೋ
ಧಮುಂ ನಿಷ್ಪರಿಗ್ರಹಮುಂ ತಪೋವೃತ್ತಿಯೊಳ್, ಪೆಱತೊಂದೆಡೆಯೊಳಿಲ್ಲೆನಿ
ಸಿದ ತಾರ್ಕ್ಷ್ಯಪಕ್ಷದಂತೈಕ್ಯಪಕ್ಷಪ್ರತಿಪಾಳನೆಯುಮಂ, ಮಕರಕೇತದಂತೆ
ಮರ್ಯಾದೆಯುಮಂ, ಪರ್ವತರಾಜನಂತೆ ಪ್ರತಿಪನ್ನತೆಯುಮನುರ್ವರೆ
ಯಂತೆ ಕ್ಷಾಂತಿಯುಮಂ ಕವಿರಾಜರಾಜವಚಃಪ್ರಭಾವದಂತಳಂಕಾರಮುಮ
ನೊಳಕೊಂಡ ಜನಂಗಳಿಂ ಮನಂಗೊಳಿಸುತ್ತಮಿರ್ಪುದು.

# ೭. ರವಿನಾಗಭಟ್ಟ

( ೯೧೫ )

ನರಗುಂದ ತಾಲೂಕಿನ ದಂಡಾಪುರದ ಶಾಸನವನ್ನು ಬರೆದಿದ್ದಾನೆ.[1] ಮೂರನೆಯ ಪ್ರಭೂತವರ್ಷನ ಕಾಲದಲ್ಲಿ ಶಕ ೮೪೦ರ ಪ್ರಮಾಥಿ ಸಂವತ್ಸರದಲ್ಲಿ ಬರೆದುದು. ಕೊನೆಯ ಪದ್ಯದಲ್ಲಿ ಕವಿ ತನ್ನ ಹೆಸರನ್ನು ಹೇಳಿಕೊಂಡಿದ್ದಾನೆ:

ಬರೆದನಿದೊಂ ಶ್ರೀವಿಜಯಂ
ನೆರೆದಿನ್ನೂರಿರ್ಪದಿಂಬರುಂ ಪೇೞ್ೞನೆ ತಾಂ
ಪರಿಣತನೀ ಕಬ್ಬಂಗಳ
ನೊರೆದಂ ರವಿನಾಗಭಟ್ಟನತ್ಯಾದರದಿಂ ||

ಎರಡುನೂರಾ ಇಪ್ಪತ್ತು ಜನ ಮಹಾಜನರ ಅಪ್ಪಣೆಯ ಮೇರೆಗೆ ರವಿನಾಗಭಟ್ಟನೆಂಬ ಪರಿಣತನು ಈ ಶಾಸನವನ್ನು ಹೇಳಿದನು. ಶ್ರೀವಿಜಯನು ಬರೆದನು. ಅರಸರ ಆಳಿಕೆ, ಕಾಲ, ದತ್ತಿ-ದಾನ, ಕವಿ ಇತ್ಯಾದಿಗಳನ್ನೆಲ್ಲ ಪದ್ಯದಲ್ಲಿಯೆ ಚಿಕ್ಕದಾಗಿ ಚೊಕ್ಕವಾಗಿ ಹೇಳಿರುವುದು ಈ ಶಾಸನದ ವಿಶೇಷ.

ಸ್ವಸ್ತಿ ಶ್ರೀಪ್ರಭೂತವರ್ಷಂ
ವಿಸ್ತೃತಕುವಳಯವನುತ್ತರೋತ್ತರ ವಿಭವ-
ಪ್ರಸ್ತುತ್ಯತೆಯಿಂ ರಕ್ಷಿಪ
ವಿಸ್ತರಘಂದೆಂಟುನೂಱು ನಾಲ್ವತ್ತವು ತಾಂ || ೧ ||

ಶಕಕಾಲಂಗಳ್ ವರ್ಷಂ
ಪ್ರಕಟಂ ಪೆಸರಿಂ ಪ್ರಮಾಥಿ ವರ್ತಿಸೆ ದಿನಪಂ
ಮಕರಕ್ಕೆ ವರ್ಪ ಸಂಕ್ರಮ-
ಣಕಾಲದೊಳ್ ಕೂಡೆ ಬಂದ ಪೌಷದ ತಿಥಿಯೊಳ್ || ೨ ||

---

1 Ind. Ant. XII 223 ( ೩೩೮ ೧ ).

ಪನ್ನಿರ್ಮತ್ತರ್ ಕೆಯ್ಯಂ
ಪಶಾನ್ಯಂಗುಡುಗೆಂದು ಪೇಱೆ ದೋಱನ ಮತದೊಳ್
ನನ್ನಿವೆಡಂಗಂ [ತಪ್ಪದೆ*]
ತನ್ನಱ್ತಿಯೆ ಕೊಟ್ಟ ಕೆಱೆಗೆ ಯಶಮಂ ಪಡೆದಂ ॥ ೩ ॥

ವಿಪ್ರರ ವಿವಾಹಗಳುಮಾ-
ಗಪ್ಪನಿತರೊಳೊಲ್ಲವೊಸಗೆ ದ್ರಮ್ಮಂ ಮೂಱಂ
ತಪ್ಪದೆ ಮಾಣಿಯೊಳೆರಡಂ
ಕೆಪ್ಪದರೀ ಶೂದ್ರಗಣದ ಮದುವೆಯೊಳೊಂದಂ ॥ ೪ ॥

ಪ್ರಾಯಶ್ಚಿತ್ತನಿಮಿತ್ತದೊ-
ಮಾಯದ ಪಣಮೆನಿತನಿತ್ತು ಮೂರೊಳ್ಸಹಿರ-
ಣ್ಯಾಯದ ಸಣಮಂ ಪೆರ್ಗೆಱೆ-
ಗಾಯುಮಿದೆಂದೊಸೆದು ಕೊಟ್ಟರೀ ದ್ವಿಜಮುಖ್ಯರ್ ॥ ೫ ॥

ನೆಱೆಯೆ ಗುಣಾಢ್ಯಕರ್ಣ್ಣಮ-
ಗೆಱೆಗೆನಿತುಂ ದ್ರವ್ಯದಾಯಮಂ ಕೊಟ್ಟವರ್ಗಳ್
ತಱಿಸಂದೀ ಶಾಸನಮಂ
ನಿಱಿಸಿದರಾಚಂದ್ರತಾರಕಾಂತಂ ಬರೆಗಂ ॥ ೬ ॥

ಮಾತಿನೊಳೇನೀ ಸ್ಥಿತಿಯಂ
ಘಾತಿಸಿ ಕಿಡಿಸಿದ ನರಂ ಚಿರಂ ಪಂಚಮಹಾ
ಪಾತಕನ ಪೋದ ಲೋಕ-
ಕ್ಕಾತಂ ತಾಂ ಪೋಕುಮೆಂದೊಡದುವೇಂ ಪಿರಿದೇ ॥ ೭ ॥

ನೊಱಡಿಯ ಮೊದಲೊಳ್ಕೊಟ್ಟೊ-
ರ್ತ್ತೆಱೆವರಿಯರ ಮಾಳ್ಪುದೆಂದು ಕೇರಿ ಸಮಸ್ತಂ
ಕೆಱೆಗೆ ಪತಿನೇೞು ಮತ್ತರ್
ತೆಱುವುದು ಕೇಸಬ್ಬೆಯಿತ್ತ ಕೆಯಿರ್ಮತ್ತರ್ ॥ ೮ ॥

# ೮. ಕಾಚಯ್ಯ

( ೯೩೭ )

ಚಿತ್ರದುರ್ಗ ತಾಲೂಕಿನ ಇಸಾಮುದ್ರ ಎಂಬಲ್ಲಿ ಒಂದು ಶಾಸನವಿದೆ.[1] ಅದರ ಕಾಲ ಕ್ರಿ. ವ. ೯೩೭. ಅದರ ಕೊನೆಯ

" ಕನ್ನರನಭಿಮತದೊಳೆ ಶಾಸನಮಂ ಬರೆದೊಂ ಸೇನಬೋವಂ ಕಾಚಯ್ಯಂ;
ಈ ಶಾಸನಮಾಚಂದ್ರಾರ್ಕತಾರಂಬರಂ ಸಲ್ಗೆ. "

ಎಂಬ ಮಾತಿದೆ. ' ಕನ್ನರನಭಿಮತದೊಳೆ ಬರೆದೊಂ ' ಎಂದಿರುವುದರಿಂದ ಸೇನಬೋವ ಕಾಚಯ್ಯನು ಕೇವಲ ಲಿಪಿಕಾರನಾಗಿರದೆ ಶಾಸನವನ್ನು ರಚಿಸಿದವನಾಗಿರಬೇಕೆಂಬ ಅಭಿಪ್ರಾಯ ಧ್ವನಿತವಾಗುತ್ತದೆ. ಮೊದಲು ಗದ್ಯದಲ್ಲಿ ಅಮೋಘವರ್ಷನ ಆಳಿಕೆಯನ್ನು ಸೂಚಿಸಿ, ಶಾಸನದ ಕಾಲವನ್ನು ಹೇಳಿ, ಪದ್ಯಗಳಲ್ಲಿ ರಟ್ಟವಂಶಾವಳಿಯನ್ನು ಕೊಡುತ್ತಾನೆ. ವಂಶಾವಳಿಯ ಅಂತ್ಯದಲ್ಲಿ ಕನ್ನರನ ವರ್ಣನಾವೃತ್ತವಿದೆ. ಶಾಸನದ ಕೊನೆಯಲ್ಲಿ ರಾಷ್ಟ್ರಕೂಟಾನ್ವಯದ ಪ್ರಮುಖರಾಜರ ಪರಾಕ್ರಮವರ್ಣನೆಯ ವೃತ್ತವಿದೆ. ' ಅಜಸುತನತ್ರಿ ' ಎಂದು ಆರಂಭವಾಗುವ ಸೋಮವಂಶದ ವಿವರಣಪದ್ಯಗಳು ಇತರತ್ರ ಶಾಸನಗಳಲ್ಲಿಯೂ ಕಂಡುಬರುತ್ತಿದ್ದು ಇದಕ್ಕಿಂತ ಪೂರ್ವದ ಶಾಸನದಲ್ಲಿ ಸಿಕ್ಕುವವರೆಗೆ ಕಾಚಯ್ಯಕೃತಗಳೆಂದೇ ತಿಳಿಯಬೇಕಾಗುವುದು. ಧರ್ಮದತ್ತಿಗಳನ್ನು ವಿವರಿಸುವಲ್ಲಿಯೂ ಫಲಶ್ರುತಿಯನ್ನು ಹೇಳುವಲ್ಲಿಯೂ ಕವಿ ಗದ್ಯದಲ್ಲಿ ವಿಶಿಷ್ಟವಾದ ತನ್ನತನವನ್ನು ತೋರಿದ್ದಾನೆ :

"....ಕಾಕಂಬಾಟ ಪಞ್ಚಮಠಸ್ಥಾನಮುಂ ಗಾವುಣ್ಡಂ ಕಂಭಯ್ಯನುಂ ಪಂಪಯ್ಯನುಂ ಕಳ್ಳಬುಣುಸೆಯ ಪೊನ್ನವಾರಗಾವುಣ್ಡನುಮಿನ್ತಿನಿಬರು ಮಧ್ಯಕ್ಷದೋಳ್ ಗೊಗ್ಗಿಯ ದೇಗುಲದ ಧರ್ಮ್ಮರಾಶಿಭಟಾರರ ಕಾಲಂ ಕರ್ಚ್ಚಿ ಕೊಟ್ಟ ಸ್ಥಿತಿಯಾವುದೆಂದೊಡೆ—ಹೆದರಿಗಟ್ಟವುಂ ಕಾರಿಂಗೆಱೆಯುಂ ಸಿರಿಗೆಱೆಯುಮಿಟ್ಟಗೆಯುಮನ್ತು ನಾಲ್ಕುಂ ಬಾಡವುಮಂ ಸರ್ವ್ವಬಾಧಾ

---

1 Ec. XI, cd. 76,

ಪರಿಹಾರಂ ; ಕ್ಷುದ್ರೋಪದ್ರವ ಬಾಧೆಗಳೊಂದುವಂ ಗೆಯ್ಯಸಲ್ಲ ; ಅಕ್ಷತ ಮಾತ್ರಮನಪ್ಪೊಡಂ ಕೊಳಸಲ್ಲ. ಈ ಮರ್ಯ್ಯಾದೆಯನ್ತಪ್ಪದೆ ನಡೆಯಿಸಿದಾತಂ ಶ್ರೀಪರ್ಬ್ಬ[ತ]ದೊಳ್ತಪಂ ಗೆಯ್ದೋಂ, ವಾರಣಾಸಿಯೊಳ್ತುಳಾಪುರುಷಮಿಟ್ಟೋಂ, ಕುರುಕ್ಷೇತ್ರದೊಳ್ದಾನಂ ಗೆಯ್ದೋಂ, ಗಯೆಯೊಳ್ಪಿಣ್ಡಮನಿಟ್ಟೋಂ, ಈ ಲೋಕದೊಳುಳ್ಳ ಧರ್ಮ್ಮವೆಲ್ಲಮುಂ ಗೆಯ್ದೋಂ. ಈ ಮರ್ಯಾದೆಯನೞಿದು ಕೊಣ್ಡಾತಂ ಶ್ರೀಪರ್ಬ್ಬತದೊಳ್ತಪೋಧನರಂ ಪ್ರಯಾಗೆಯೊಳ್ ಬ್ರಾಹ್ಮಣರಂ ಕುರುಕ್ಷೇತ್ರದೊಳ್ಕವಿಲೆಯನನ್ತಿನಿತುಮನೞಿದ ಪಾತಕನೀ ಲೋಕದೊಳುಳ್ಳ ಬ್ರಹ್ಮಾತಿಯೆಲ್ಲಮುಂ ಗೆಯ್ದೋ(ಂ). ಮನ್ನೆಯಮೆನ್ದು ಪೊಕ್ಕಾತಂಗವಿೂ ಸ್ಥಿತಿಯೆ.”

# ೯. ಬಲದೇವ

( ಸು. ೯೫೦ )

ಹೊಳೆನರಸೀಪುರ ತಾಲೂಕಿನ ಅಂಕನಾಥಪುರದ ಸುಬ್ರಹ್ಮಣ್ಯ ದೇವಸ್ಥಾನದ ಮಧ್ಯದ ತೊಲೆಯು ಮೇಲೆ ಒಂದು ಪದ್ಯ ಹೀಗಿದೆ :[1]

ತೊಱೆದುೞಿ ಮೋಹಪಾಶಮನಸುಂಗೊಳೆಯೊತ್ತಿದರುತ್ತಮಾಥಮಿ
ನ್ನುಱುಗುೞಿ ಬಾಟಲೀಯದಿದು ನಿಕ್ಕುವಮೆಂಬುದನೊಪ್ಪೆ ನಂಬಿತಾಂ
ನೆಱೆದ ಕದಂಬನಗ್ಗಳದ ಬಾಸಬೆಗಾದಮೆ ಪುತ್ರನುತ್ತಮ
ನ್ನೆಱೆದಿಕೆ ನೋಂತು ಮೂಱು ದಿನಮಂ ಸುರನಾಗಿದನಿಂತು
ರಾಚಯಂ ||

ಬಲದೇವಂ ಬರೆದಂ.

ಪಟ್ಟದಕಲ್ಲಲ್ಲಿ ಈ ಬಗೆಯು ಒಂದೊಂದು ಪದ್ಯದ ಕೆಳಗೆ ' ಅಚಲನ್ ' ಇತ್ಯಾದಿ ಹೆಸರುಗಳಿದ್ದುದನ್ನು ಕಾಣುತ್ತೇವೆ. ಅದು ಆಯಾ ಪದ್ಯದ ಕರ್ತೃವಿನದೆಂದು ಪಂಡಿತರು ಅಭಿಪ್ರಾಯ ಪಟ್ಟದ್ದಾರೆ. ಹಾಗೆಯೆ ಇಲ್ಲಿ ಹೆಸರ ಮುಂದೆ 'ಬರೆದಂ' ಎಂದು ಸೇರಿದ್ದರೂ ಅದು 'ಪೇೞ್ದಂ' ಎಂಬರ್ಥದಲ್ಲಿರುವುದೆಂದು ತೋರುತ್ತದೆ. ಎಂದರೆ ಬಲದೇವನು ಈ ಪದ್ಯದ ಕವಿ.

---

1 EC. XV. Hn. Sup., HN. 66

# ೧೦. ರುದ್ರಭಟ್ಟ(ಟ)

( ಸು. ೯೫೦ )

ಈತನು ವಿಜಾಪುರ ಜಿಲ್ಲೆಯ ಜಮಖಿಂಡಿ ತಾಲೂಕಿನವನು; ಬನಹಟ್ಟಿ ಎಂಬಲ್ಲಿ ಬಾಳಿದವನು. ಅತ್ರಿಗೋತ್ರದ ಸಾಮಾಸಿಗ ವಂಶದ ಬ್ರಾಹ್ಮಣ. ಸಾಮಾಸಿಗ ಎಂಬುದು ಸೋಮವಂಶಿಕ ಎಂಬುದರ ತದ್ಭವ ರೂಪಗಳಲ್ಲಿ ಒಂದು. ಈ ರುದ್ರಭಟ್ಟನು ರಾಷ್ಟ್ರಕೂಟ ಕನ್ನರನಿಂದ ಪಡೆದ ೧೮ ಗ್ರಾಮ ಗಳ ಪ್ರಭುವಾಗಿದ್ದನು. ಕ್ರಿ. ಶ. ೧೨೨೯ರ ಸವದತ್ತಿ ಶಾಸನವನ್ನು[1] ಬರೆದ ಮಾದಿರಾಜಕವಿ ಈತನನ್ನು ತನ್ನ ವಂಶದ ಮೂಲಪುರುಷನೆಂದು ಹೇಳಿಕೊಂಡಿದ್ದಾನೆ; ನಾಲ್ಕು ಪದ್ಯಗಳಲ್ಲಿ ಈತನ ಪರಿಚಯವನ್ನು ಮಾಡಿ ಕೊಟ್ಟಿದ್ದಾನೆ. ಅವುಗಳಿಂದ ರುದ್ರಭಟ್ಟನು ವರಕವಿಯೆಂದೂ ಕನ್ನರನಿಂದ ಮರ್ಯಾದೆಹೊಂದಿ ಬನಹಟ್ಟಿ ಮೊದಲಾದ ೧೮ ಊರುಗಳನ್ನು ಪಡೆದಿದ್ದನೆಂದೂ ತಿಳಿಯುತ್ತದೆ. ಇಂತಹ ಮಹಾಪುರಸ್ಕಾರವನ್ನು ಹೊಂದಿದ ಈತನು ಒಳ್ಳೆಯ ಕವಿಯಾಗಿದ್ದನೆಂಬಲ್ಲಿ ಸಂದೇಹವಿಲ್ಲ. ಈ ಮಾತಿಗೆ ಸವದತ್ತಿ ಶಾಸನದಲ್ಲಿಯ ಪ್ರಮಾಣಪದ್ಯವಿದು :

ತನ್ನಯ ವಂಶಜರ್ಕಳಱುದಿಂಗಳೊಳುದ್ಧ್ಯಕವೀಶರಪ್ಪ ವಾ-
ಕ್ಯೋನ್ನತಿಯುಂ ಸರಸ್ವತಿಯಿನೂರ್ಪದಿನೆಂಟಱೊಳಂ ಪ್ರಭುತ್ವಮುಂ
ಕನ್ನರನಿಂದವಂದು ಪಡೆದಂ ದೊರೆಯಾರ್ಕವಿತಾವಿಳಾಸದೊಂ-
ದುನ್ನತಿಯೊಳ್ ಪ್ರಭುತ್ವದ ನೆಗರ್ತೆಯೊಳಾವಿಭು ರುದ್ರಭಟ್ಟನೊಳ್ ||

ಆದರೆ ಪ್ರಭುತ್ವದಲ್ಲಿಯೂ ಉನ್ನತಿಯನ್ನು ಪಡೆದ ಈ ರುದ್ರಭಟ್ಟನ ನಿರ್ದಿಷ್ಟವಾದ ಕಾಲವಾವುದೆಂಬುದು ನಿಚ್ಚಳವಾದ ಪ್ರಮಾಣಗಳಿಂದ ಗೊತ್ತಾಗಿಲ್ಲ. ಉಪರ್ಯುಕ್ತ ಸವದತ್ತಿ ಶಾಸನದಲ್ಲಿಯ ಅಂಶಗಳಿಂದ ಕಾಲವನ್ನು ಸರಿಯಾಗಿ ಊಹಿಸಿ ನಿರ್ಧರಿಸಬಹುದು. ಮೇಲಣ ಪದ್ಯದಲ್ಲಿ 'ಕನ್ನರ'

---

1 Bom. Branch Royal Asiatic Society Journal, Vol. X.

ಎಂಬ ರಾಜನ ಹೆಸರಿನ ಉಲ್ಲೇಖ ಈ ವಿಷಯದಲ್ಲಿ ಮುಖ್ಯವಾದ ಪ್ರಮಾಣವೆನಿಸಿದೆ. 'ಪೊನ್ನನ ಆಶ್ರಯದಾತನಾಗಿದ್ದ ರಾಷ್ಟ್ರಕೂಟ ಕನ್ನರನೇ (ಕ್ರಿ.ವ. ೯೪೫ ರಿಂದ ೯೫೬) ಈ ರುದ್ರಭಟ್ಟನ ಪುರಸ್ಕರ್ತನಾಗಿದ್ದನೆ'ಂದು ಕವಿಚರಿತಕಾರರು ಅಭಿಪ್ರಾಯಪಟ್ಟಿದ್ದಾರೆ.[1] ಅಲ್ಲದೆ ಸಂಸ್ಕೃತ 'ಕಾವ್ಯಾಲಂಕಾರ' ಎಂಬ ಗ್ರಂಥದ ಕರ್ತೃವಾದ ರುದ್ರಟನು ಈತನೇ ಇರಬಹುದು ಎಂದೂ ಆ ಗ್ರಂಥದಲ್ಲಿ ಒಂದು ಚಕ್ರಬಂಧಪದ್ಯದಲ್ಲಿ ಸೂಚಿತವಾಗುವ 'ಸಾಮಾಜಾ' ಎಂಬುದು ಸಾಮಾಸಿಗ ಎಂಬುದರ ಪರ್ಯಾಯರೂಪವಾಗಿರಬಹುದೋ ಏನೋ ಎಂದೂ ಅವರು ಅನುಮಾನಿಸಿದ್ದಾರೆ.[2]

ಉಪರ್ಯುಕ್ತ ಸವದತ್ತಿ ಶಾಸನದಲ್ಲಿ ಕವಿ ತನ್ನ ಸಾಮಾಸಿಗ ಮನೆತನದ ವಂಶಾವಳಿಯನ್ನು ರುದ್ರಭಟ್ಟ ಮೊದಲಾಗಿ ತಾನು ಕಡೆಯಾಗಿ ಕೊಟ್ಟಿದ್ದಾನೆ (ಮುಂದಿನ ಪುಟ ನೋಡಿರಿ). ಮೂಲಪುರುಷನ ತರುವಾಯದ ೨-೩ ಹೆಸರುಗಳು ಮಾತ್ರ ಅವನಿಗೆ ಗೊತ್ತಿಲ್ಲದೆ ಉಳಿದಿರಬಹುದು ಅಷ್ಟೇ. ಆ ಸಂತಾನಪರಂಪರೆಯಿಂದಲೂ ರುದ್ರಭಟ್ಟನ ಕಾಲವನ್ನು ಅನುಮಾನದಿಂದ ತಿಳಿದುಕೊಳ್ಳಲು ನೆರವಾಗುವಂತಿದೆ.

ಸರಾಸರಿಯಾಗಿ ಒಂದು ತಲೆಗೆ ೨೫ ವರುಷ ಎಂದು ತಿಳಿದು ಲೆಕ್ಕ ಹಾಕಿದರೆ, ಶಾಸನಕವಿ ಮಾದಿರಾಜನಿಗಿಂತ ಮೂಲಪುರುಷ ರುದ್ರಭಟ್ಟನು ಸುಮಾರಾಗಿ ೨೭೫ ಅಥವಾ ೩೦೦ ವರ್ಷಗಳಷ್ಟು ಹಿಂದಿನವನಾಗುತ್ತಾನೆ. ಹೇಗೆಂದರೆ, ರುದ್ರಭಟ್ಟ ಹಾಗೂ ಕಲಿದೇವರ ನಡುವೆ 'ಕೆಲವರಾದ ಬಳಿಕ' ಎಂದಿರುವಲ್ಲಿ ಮೂರೋ ನಾಲ್ಕೋ ತಲೆಗಳು ಕಳೆದಿವೆ ಎಂಬುದಾಗಿ ತಿಳಿಯಬೇಕಷ್ಟೆ? ಹಾಗೆ ಎಣಿಸುತ್ತ ಮಾದಿರಾಜ (೧೨೨೯) ನಿಂದ ಹಿಂದಕ್ಕೆ ಹೋದರೆ ರುದ್ರಭಟ್ಟನ ಕಾಲ ಕ್ರಿ. ವ. ೯೨೯ ಅಥವಾ ೯೫೪ ಆಗುತ್ತದೆ. ಎಂದರೆ ಈ ರುದ್ರಭಟ್ಟನು ಪೊನ್ನನ ಹಾಗೂ ರಾಷ್ಟ್ರಕೂಟ ಕನ್ನರನ ಸಮಕಾಲೀನನೇ ಎಂದು ಕಂಡುಬರುತ್ತದೆ; ಅದರಿಂದ ಶಾಸನಕವಿ ಹೇಳಿದ, ಕನ್ನರನು ರುದ್ರಭಟ್ಟನನ್ನು ಪುರಸ್ಕರಿಸಿದನೆಂಬ ಮಾತು ಕೇವಲ ಅಭಿಮಾನದ ಮಾತಲ್ಲವೆಂಬುದು ದೃಢಪಡುತ್ತದೆ.

---

1 ಕರ್ಣಾಟಕ ಕವಿಚರಿತೆ ಸಂ. [illegible], ಪು. ೪೪

2 ,, ,, ,, ಪು. ೨೭ ಅಡಿಟಿಪ್ಪಣಿ

# ಬನಿಹಟ್ಟಿ ಸಾಮಾಸಿಗರ ವಂಶ




ಈ ರುದ್ರಭಟ್ಟನು ಯಾವ ಕಾವ್ಯವನ್ನು ಬರೆದನೆಂಬುದು ಸ್ಪಷ್ಟ ಪ್ರಮಾಣದಿಂದ ಗೊತ್ತಾಗದಿದ್ದರೂ ಸಂಸ್ಕೃತ ಕಾವ್ಯಾಲಂಕಾರದ ಕರ್ತೃ

ಈತನೇ ಎಂಬುದರ ಸುಳಿವು ಶಾಸನದಲ್ಲಿಯ ಒಂದು ಪದ್ಯದಲ್ಲಿ ಕಂಡುಬರುತ್ತದೆ. 'ರುದ್ರಟ' ಎಂಬುದು ರುದ್ರಭಟ್ಟನು ಜನರಲ್ಲಿ ಪಡೆದ ಪಡೆಮಾತೆಂದು ಒಂದು ದಂತಕಥೆಯ ಉಲ್ಲೇಖದ ಮೂಲಕ ಸೂಚ್ಯವಾಗಿ ಕವಿ ತಿಳಿಯಪಡಿಸಿದ್ದಾನೆ ಆ ಪದ್ಯದಲ್ಲಿ. ಹುಸಿಯದ ಮಾತಿನವನೆಂದು ಹೆಸರುಹೊಂದಿದ ರುದ್ರಭಟ್ಟನ ಪತ್ತು ಎಂತಹದಿತ್ತೆಂಬ ಬಗೆಗೆ ಈ ದಂತಕಥೆ ಪ್ರಚುರವಾಗಿತ್ತೋ ಏನೋ ಆ ಕಾಲಧಲ್ಲಿ, ತಿಳಿಯದು. ಅದು ಕವಿಯ ಸುಂದರ ಕಲ್ಪನೆಯ ದ್ಯೋತಕವೆಂದೇ ಬಹುಮಟ್ಟಿಗೆ ತೋರುತ್ತದೆ. 'ಒಮ್ಮೆ ರುದ್ರಭಟ್ಟನಿಗೆ ಎಡರು—ಹಣದ ತೊಂದರೆ—ಉಂಟಾಗಿತ್ತು; ಒಂದು ಸಾವಿರ ಹೊನ್ನುಗಳು ಬೇಕಾಗಿದ್ದುವು. ಅದಕ್ಕಾಗಿ ಅವನು ತನ್ನ ಹೆಸರಿನ ಒಂದಕ್ಷರವನ್ನು ಅಡವಿಟ್ಟು ಸಾಲ ಪಡೆದಿದ್ದ. ಅದನ್ನು ತೀರಿಸುವವರೆಗೂ ಒತ್ತೆಬಿದ್ದ ಅಕ್ಷರವನ್ನು ಬಿಟ್ಟೇ—'ರುದ್ರಟ' ಎಂದೇ—ಆತ ಜನರಿಂದ ಕರೆಯಿಸಿಕೊಂಡ.' ಇದಾ ಕಥೆ. ದೊಡ್ಡವರಿಗೆ ಸಾಲವೆಂಬುದೊಂದು ಕುಂದು, ಅದನ್ನು ಮುಟ್ಟಿಸುವ ತನಕ ತನ್ನ ಹೆಸರು ಕರೆಯಬೇಡಿ ಎಂಬ ಛಲ ಅವನದು.

ಇದನ್ನು ಚುಟುಕದಲ್ಲಿ ಹೇಳುವ ಕಂದಪದ್ಯವಿದು.

[1]ಎಡಱೊಳ್ನಿಜನಾಮಾಕ್ಷರ-
ವಿಡೆ ಸಾಸಿರ ಪೊಂಗೆ ಕೊಟ್ಟದಂ ಬಿಡಿಪನಿತುದಿನಂ |
ಪಡೆದಂ ರುದ್ರಟನೆಂಬೀ
ಪಡೆಮಾತಂ ರುದ್ರಭಟ್ಟನುರ್ವೀತಳದೊಳ್ ||

ಇಲ್ಲಿ ಶಾಸನಕವಿ ಮಾದಿರಾಜ ಈ ಕತೆಯನ್ನು ಸುಮ್ಮನೆ ಹೇಳಿರಲಾರ

---

1 ಡಾ. ಜೆ. ಎಫ್. ಫ್ಲೀಟರು ಇದನ್ನು 'ಅದಱೊಳ್' ಎಂದು ಓದಿ, ಅಡಿಟಿಪ್ಪಣಿಯಲ್ಲಿ ಪ್ರಾಸ ತಪ್ಪಿದೆ ಎಂದು ಸೂಚಿಸಿದ್ದಾರೆ. (Journal of B. B. R. A. S. Vol. X p. 260) ಪ್ರಾಸವನ್ನು ಎಲ್ಲಿಯೂ ಬಿಟ್ಟಿರದ ಈ ಕವಿ ಇಲ್ಲಿ ಹೇಗೆ ಬಿಟ್ಟನೆಂದೂ ಹಿಂದಣ ಪದ್ಯಕ್ಕಾಗಲಿ ಈ ಪದ್ಯದ ಮಾತಿಗಾಗಲಿ ಸಂಬಂಧಹೊಂದದ 'ಅದಱೊಳ್' ಎಂಬುದನ್ನೇಕೆ ಇಟ್ಟನೆಂದೂ ನಾನು ಪೇಚಾಡುತ್ತಿರುವಾಗ ಕನ್ನಡ ಸಂಶೋಧನ ಸಂಸ್ಥೆಯಲ್ಲಿ ಈ ಶಾಸನದ ಕಲ್ಲೂ ಅದರ ಕಲ್ಲಚ್ಚೂ ನೋಡಲು ಸಿಕ್ಕವು. ಅವೆರಡನ್ನೂ ಸೂಕ್ಷ್ಮವಾಗಿ ಪರಿಶೀಲಿಸಿದಾಗ ನನ್ನ ಸಂದೇಹಕ್ಕೆ ಸಮಾಧಾನ ದೊರೆಯಿತು—ಅಲ್ಲಿ 'ಅದಱೊಳ್' ಇಲ್ಲ, 'ಎಡಱೊಳ್' ಇದೆ.

ಎಂದೇ ಎನಿಸುತ್ತದೆ. ೧೨ ಊರುಗಳ ಒಡೆತನವುಳ್ಳ—ಸಜ್ಜನನೂ ಹೌದು—ರುದ್ರಭಟ್ಟನಿಗೆ ಬಾಯಿಮಾತಿನಿಂದ ಸಾವಿರ ಹೊನ್ನುಗಳ ಕಡ ಹುಟ್ಟಿದುದು ಅಷ್ಟೇನು ಹೇಳಿಕೊಳ್ಳುವ ಮಾತಲ್ಲವೆಂದು ತೋರುತ್ತದೆ. 'ರುದ್ರಭಟ್ಟನೇ ರುದ್ರಟ' ಎಂಬುದನ್ನು, ತನಗೆ ಗೊತ್ತಿದ್ದಂತೆ—ಸಂಭವತಃ ಆಗಿನ ಕಾಲದಲ್ಲಿಯ ಜನರ ತಿಳಿವಳಿಕೆಯಂತೆ—ಕಾವ್ಯಾಲಂಕಾರದ ಕರ್ತೃ ಈತನೇ ಎಂಬುದನ್ನು ಪರ್ಯಾಯವಾಗಿ ಪ್ರಸ್ತಾಪಿಸುವುದು ಕವಿಯ ಮುಖ್ಯ ಉದ್ದೇಶವೆಂದು ಸ್ಪಷ್ಟವಾಗಿ ಊಹಿಸಬಹುದು.

# ೧೦. ಕಬ್ಬದ ನಾಗಮಯ್ಯ

ಕೋಲಾರ ಜಿಲ್ಲೆಯ ಚಿಂತಾಮಣಿ ತಾಲೂಕಿನ ಕುರುಬೂರಲ್ಲಿ ಈ ಕೆಳಗಣ ಸಾಮಾನ್ಯ ಗದ್ಯಶಾಸನವೊಂದಿದೆ.[1]

"ಸ್ವಸ್ತಿ. ಶಕನೃಪಕಾಳಾತೀತ ಸಂವತ್ಸರ ಶತಂಗಳೆಂಟುನೂಱ ಅಯ್ವತ್ತಮೂಱನೆಯ ರೌದ್ರಿಯೆಂಬ ಸಂವತ್ಸರಂ[2] ಪ್ರವರ್ತಿಸುತ್ತಿರೆ—

"ಸ್ವಸ್ತಿ. ಸಮಧಿಗತ ಪಂಚಮಾಶಬ್ದ ಪಲ್ಲವಾನ್ವಯ ಶ್ರೀಪೃಥ್ವೀವಲ್ಲಭ ಪಲ್ಲವಕುಲತಿಲಕ ಶ್ರೀಮತ್ವೀರನೊಳಂಬಾಧಿರಾಜರ್ ಸುಖಾನುರಾಗದಿಂ ದುಷ್ಟನಿಗ್ರಹ ವಿಶಿಷ್ಟಪರಿಪಾಲನಂಗೆಯ್ದು ಪೃಥಿವೀರಾಜ್ಯಂಗೆಯ್ಯುತ್ತಿರೆ—

"ಕಾಣ್ವಾಯನಗೋತ್ರ ಕೊಮಾರಮಂಗಳವೊಡೆಯ ನಾಗಮಯ್ಯನ ಮಗಂ ಕಣ್ಣಯ್ಯನುಂ ಶಂಕರಯ್ಯನುಂ ಕುಱುಂಬೂರ ಮಹಾಜನಂ ನೂಱಿ‍ಪ್ಪರ್ಗ್ಗಂ ಪದಿನೈದು ಗದ್ಯಾಣ ಪೊನ್ನ ಕೊಟ್ಟರ್; ನಿತ್ಯಸ್ಥಿತಿ ಒಂದು ಪರಿವಡಿ ಕುಱುಂಬೂರ ಗುಟ್ಟಿಯೊಳಾರಿಟ್ಟೊಡಂ ಚಂದ್ರಾದಿತ್ಯರ್ಕಳುಳ್ಳಿನಂ ಸಲ್ವುದಾರಿತ್ತೋರಿದುವಿದಕ್ಕೆ ಸಾಕ್ಷಿ, ನರಶಾಸನಂ ನೂಱಿ‍ಪ್ಪರೆ. ಇವರ್ಗ್ಗಳ ಉಭಯ ಸಮ್ಮತದೆ ಬರೆದೊಂ ಕಬ್ಬದ ನಾಗಮಯ್ಯ. ಈ ಧರ್ಮ್ಮಮನ ಱಿದೊಂ ವಾರಣಾಸಿಯುನಱಿದೊಂ."—

'ಕಬ್ಬದ ನಾಗಮಯ್ಯಂ ಬರೆದೊಂ' ಎಂದಿದ್ದ ಇನ್ನೊಂದು ಶಾಸನ[3] ಇಲ್ಲಿಯೇ ಇದ್ದು ಅಲ್ಪ ವ್ಯತ್ಯಾಸದೊಡನೆ ಅದು ಇದರ ಪ್ರತಿಕೃತಿಯೇ ಆಗಿದೆ. ಅಲ್ಲಿ ಕಾಲನಿರ್ದೇಶ ಆರಂಭದಲ್ಲಿಯೆ ಬಂದಿದ್ದು ಮಿತಿ ವಾರ

---

1 Ep. Car. X, ಚಿಂತಾ ೪೩.

2 Ep Car.ದ ಸಂಪಾದಕರು ರೌದ್ರಿಸಂವತ್ಸರವು ಶ. ವ. ೮೫೩ಕ್ಕಿರದೆ ೮೫೨ಕ್ಕಿರುವುದೆಂದೂ ಆ ಪ್ರಕಾರ ೯೩೧ನೆಯ ಕ್ರಿಸ್ತವರ್ಷ ನಡೆಯುತ್ತಿರುವುದೆಂದೂ ಶೋಧಿಸಿ ಅಡಿಟಿಪ್ಪಣಿಯಲ್ಲಿ ಕೊಟ್ಟಿದ್ದಾರೆ. ಅದನ್ನೇ ಸ್ವೀಕರಿಸಿದೆ.

3 Ep. Car. X, ಚಿಂತಾ ೪೪.

ನಕ್ಷತ್ರಗಳನ್ನೂ ಕೊಟ್ಟಿದೆ. ಇಲ್ಲಿಯ ಶಾಸನಸ್ಥ ನಾಗಮಯ್ಯನ ಇಬ್ಬರು ಮಕ್ಕಳ ಹೆಸರುಗಳು ಬೇರೆಯಾಗಿವೆ.

ಈ ಶಾಸನದಲ್ಲಿ ಪದ್ಯಗಳಿಲ್ಲದೆ ಗದ್ಯವೂ ಕಾವ್ಯಗಂಧಿಯಲ್ಲದೆ ಇದ್ದರೂ ನಾಗಮಯ್ಯನು ಪದ್ಯಗಳನ್ನು ಕಟ್ಟಬಲ್ಲವನಾಗಿದ್ದನೆಂಬುದು ನಿಸ್ಸಂದೇಹ. ಅಂತೆಯೇ ಅವನನ್ನು ಆ ಭಾಗದಲ್ಲಿಯಾದರೂ 'ಕಬ್ಬದ ನಾಗಮಯ್ಯ' ಎಂದು ಜನ ಕರೆಯುತ್ತಿರಬೇಕು. ಆದರೆ ಅವನ ಬೇರೆ ಶಾಸನ ಸಿಕ್ಕಿಲ್ಲ.

# ೧೧. ಸಾಮಿಯಣ್ಣ

( ಸು. ೯೬೯ )

ಧಾರವಾಡ ಜಿಲ್ಲೆಯ ಗದಗ ತಾಲೂಕಿನಲ್ಲಿ ನಾಗಾವಿ ಎಂಬುದೊಂದು ಗ್ರಾಮ. ಅಲ್ಲಿ ದೊರಕಿದ ಒಂದು ಶಿಲಾಶಾಸನವನ್ನು ಸಾಮಿಯಣ್ಣ ಎಂಬಾತನು ರಚಿಸಿದ್ದಾನೆ. ರಾಷ್ಟ್ರಕೂಟ ನಿತ್ಯವರ್ಷ ಕೊಟ್ಟಿಗದೇವನ ಆಳಿಕೆಯ ಸಮಯದಲ್ಲಿ, ಕ್ರಿ. ವ. ೯೬೯ರಲ್ಲಿ ಹುಟ್ಟಿದ ಶಾಸನವದು. ನಾಗವಾವಿ (ನಾಗಾವಿ)ಯ ರಾಮೇಶ್ವರದ ಸತ್ರಕ್ಕೆ, ವಿದ್ಯಾದಾನಕ್ಕೆ ಬೋಳುಗ ಎಂಬಾತನು ಭೂಮಿಯನ್ನು ಬಿಟ್ಟ ಸಂಗತಿಯನ್ನು ಅದು ಹೇಳುತ್ತದೆ. ಶಾಸನದ ಬರೆಹ ಅಲ್ಲಲ್ಲಿ ಬಹಳವಾಗಿ ನಷ್ಟವಾಗಿದೆ.[1] ಶಾಸನಕವಿ ತನ್ನ ಹೆಸರನ್ನು ತಿಳಿಯಪಡಿಸಿದ ಕೊನೆಯ ಪದ್ಯದಲ್ಲಿ—ಪೂರ್ಣವಾಗಿ ಓದಲು ಬರುವಂತುಳಿದುದು ಅದೊಂದೇ ಪದ್ಯ—ಮಾಧುರ್ಯವನ್ನು, ಚಾತುರ್ಯವನ್ನು, ಹಾಗೆಯೇ ಸಾರಲ್ಯವನ್ನೂ ತನ್ನಂತೆ ಕಾವ್ಯದಲ್ಲಿ ಸಾಧಿಸಿದವರು ಇನ್ನೂ ಆಗಲಿಲ್ಲವೆಂದು ಆತ್ಮಾಭಿಮಾನದಿಂದ ಕವಿ ಹೇಳಿಕೊಂಡಿದ್ದಾನೆ :

ಮುನ್ನೀರ್ಬಳಸಿರೆ ಧರಣಿಯೊ-
ಳ್[ನ್ನುಂ]ಮಾಧುರ್ಯಸುಕರಚಾತುರ್ಯಗುಣ-
ಪ್ರೋನ್ನತರಿಲ್ಲೆನೆ ಸಾಸನ-
ಮನ್ನಿದೆ ಚೆಲ್ವಾಗೆ ಸಾಮಿಯಣ್ಣಂ ಬರೆದೊಂ ||

ಕಲ್ಬರೆಹದಲ್ಲಿ ೫೮ ಸಾಲುಗಳುಳ್ಳ ಈ ಶಾಸನ ಕಾವ್ಯದಲ್ಲಿ ೧೪-೧೫ ಆದರೂ ಪದ್ಯಗಳಿರಬೇಕೆಂದು, ಅಲ್ಲಿಗಲ್ಲಿಗೆ ಕಂಡುಬರುವ 'ಕನ್ದಂ' ಎಂಬ ಶಬ್ದದಿಂದಲೂ ಅಲ್ಲಲ್ಲಿ ಗೋಚರಿಸುವ ಛಂದೋಬದ್ಧ ಪದಾವಳಿಗಳಿಂದಲೂ ತಿಳಿದುಬರುತ್ತದೆ. ಎಲ್ಲ ಪದ್ಯಗಳು ಮುಕ್ಕಾಗಿಹೋಗಿವೆ. ಅವುಗಳಲ್ಲಿ ಹೆಚ್ಚು ಮಟ್ಟಿನ ಭಾಗ ಚೆನ್ನಾಗಿ ತಿಳಿದ ಮೂರು ಪದ್ಯಗಳನ್ನು ಇಲ್ಲಿ ಮಾದರಿಗಾಗಿ ಎತ್ತಿಕೊಟ್ಟಿದೆ.

---

1 Bom. Kar. Ins. Vol. I. Page 25.

....ನುಡಿ ಹಿಮಾಚಳ
ಭೂತಾಧಿಪಹಸನ ಶಾರದೋಜ್ಜ್ವಳ ತಚ್ಚಂ-
ದ್ರಾತಪ ದಿಗಂಗನಾಸಂ-
ಗೀತಯಶೋರೋಚಿರಾಜನನುಪಮತೇಜಂ ||

ಘುರದೊಳ್ತುಳ್ತಿಜ[ದೊ]ರ್ದ್ದಗುರ್ಬಿನಳವಂ ಮಾಜ಼ಾಂತವಂ ಕಂಡುಮೆ-
ಯ್ಗ. ಯಲ್ಕುಪ್ಪುಯದೋನೆಮಲ್ತು ಭಯದಿಂದಾವೊಬ್ದ....ಂಚಿ ಸಂ-
ಗರಮಂ ನಾ....ರಾದೆನ್ದೊ[ಡೆ]ಹಿಪಾಸೀಕಕ್ಕೆ ಪುಲ್ಲಯ್ಕೆ ತುಂ-
ಟರ ಮುಂಬರ್ಪವ . ನಿಸೆರ್ವ . . . ಟ್ಸಂಗ್ರಾಮ ಕೌಂತೇಯನಂ ||

ಭಂಗಿಯೊಳರಾತಿ ಬಳಚತು-
[ರಂಗ]ವಮುಲ್ಲಸಿತನಿಸಿತ[ವರ] ಧಾರಾ.
ಸಂಗಮಜಲದೊಳ್ಮುಳುಗಿಸು-
ವಂಗಂ ಕೊಟ್ಟಿಗನುದಗ್ರಸುಗ್ರಾಜಿಗಳೊಳ್ ||

ಈ ಪದ್ಯದಲ್ಲಿ ತಪ್ಪುಗಳು ಬಹಳವಾಗಿವೆ. ಶಾಸನದ ಬರೆಹಗಾರನ ಲೇಖನಸ್ಖಾಲಿತ್ಯಗಳಿಗೆ, ಬರೆಹ ನಷ್ಟಪ್ರಾಯವಾಗಿರುವುದರಿಂದ ಕಲ್ಲಚ್ಚಿನ ಪ್ರತಿಯಲ್ಲಿ ಉಂಟಾಗಿರಬಹುದಾದ ಸಂದಿಗ್ಧತೆಯಿಂದಾಗಿ ವಾಚನದೋಷಗಳೂ ಸೇರಿ ಹೀಗಾಗಿರಬಹುದು.

# ೧೩. ಅರ್ಹದ್ಭಕ್ತ

( ೯೭೧ )

ಪಡಿಯರ ದೋರಪಯ್ಯನ ಸತಿ ಪಾಂಬಬ್ಬೆ ಎಂಬವಳು ಮೂವತ್ತು ವರುಷ ತಪಸ್ಸು ಮಾಡಿ, ಐದು ನೋಂಪಿಗಳನ್ನು ನೋಂತು ಉಚ್ಚ ಮಶ್ರಾಣ ವನ್ನೇರಿದ ಆ ಒಂದೇ ಮಾತಿನಲ್ಲಿ ಒಂದೇ ಕಲ್ಲಿನಲ್ಲಿ ತ್ರಿವಾರ ಹೇಳುವ ನಿಷಿದಿ ಕಲ್ಲು ಕಡೂರಿನಲ್ಲಿದೆ.[1] ಈ ಮೂರನ್ನು ಬೇರೆ ಬೇರೆ ಮೂವರು ಬರೆದಿರು ವಂತೆ ಸೂಚನೆ ತೋರುತ್ತದೆ. ಮೂವರೂ ದೋರಪಯ್ಯ ಪಾಂಬಬ್ಬೆಯರ ಮಕ್ಕಳು. ಅಕ್ಷರಗಳು ಅಳಿದಿರುವುದರಿಂದ ಮೊದಲಿನವನ ಮತ್ತು ಮೂರನೆ ಯವನ ಹೆಸರುಗಳು ಗೊತ್ತಾಗುವಂತಿಲ್ಲ. ನಡುವಣವನ ಹೆಸರಲ್ಲದಿದ್ದರೂ 'ಅರ್ಹದ್ಭಕ್ತ'ನೆಂಬ ವಿಶೇಷಣವು ಸ್ಪಷ್ಟವಿದೆ. ಆ ನಿಷಿದಿ ಶಾಸನವು ಇಂತಿದೆ :

" ಅಭಯಣನ್ದಿ ಪಣ್ಡಿತದೇವರ ನಾಣಬ್ಬೆ ಕನ್ತಿಯರ ಶಿಷ್ಯಿನ್ತಿಯರ್ ಪಡಿಯಱ ದೊರಪಯ್ಯನ ಪಿರಿಯರಸಿ ಪಾಮ್ಬಬ್ಬೆ ತಲೆವಱಿದು ಮೂವತ್ತು ವರಿಸಂ ತಪಂಗೆಯ್ದುಯ್ದಂ ನೋನ್ತುಚ್ಚಮಶ್ರಾಣಮೇಱಿದರ್. ಬರೆದೊನವರ ಮಗಂ ವಿಧಿ....

" ಪರಸೆ ಮಹಾಪ್ರಸಾದದೊಳೆ ರೇವಕನಿಮ್ಮಡಿ ದೋರನೊಲ್ದು ತ-
ನ್ನರಸುಮಮೌಲ್ಯವಸ್ತುಗಳುಮಂ ಕೊಡೆ ಬೂತುಗನಕ್ಕನೆನ್ದು ವಿ-
ಸ್ತರಿಸೆ ಧರಿತ್ರಿ ಜೀಯ ಬೆಸನೇನೆನೆ ನನ್ದಿವು ಸನ್ದುನಲ್ಲುವಿ-
ನ್ದರ ಸುಡಲೆನ್ದು ಪಾಮ್ಬಬೆಗಳನ್ತು ತಪೋನಿಯಮಸ್ಥ-

ರಾದೊರಾರ್ ||೧||

ಸ್ವಸ್ತಿ. ಯಮನಿಯಮಸ್ವಾಧ್ಯಾಯಧ್ಯಾನಮೌನಾನುಷ್ಠಾನ ಪರಾಯಣೆ ಯರಪ್ಪ ಶ್ರೀಪಾಮ್ಬಬ್ಬೆ ಕನ್ತಿಯರಯ್ದು ನೋನ್ತುಚ್ಚಮಶ್ರಾಣಮೇಱಿದರ್. ಬರೆದೊನವರ ಮಗನರ್ಹದ್ಭಕ್ತಂ.

---

1 Ep. Car. VI, ಕಡೂರು ೨.

( ಇಲ್ಲಿ ಮತ್ತೆ ಮೇಲಿನದೇ ಪದ್ಯ )

" ಶತಕಾಲ ೮೯೩ನೆಯ ಪ್ರಜಾಪತಿ ಸಂವತ್ಸರದನ್ತರ್ಗತ ಮಾರ್ಗಶಿರ ಮಾಸದ ಶುದ್ಧ ತ್ರಯೋದಶಿಯುಂ ಗುರುವಾರದನ್ದು ಆಯ್ದ ನೋನ್ತುಚ್ಚ ಮತ್ತಾಣಮೇಱಿದರ್. ಬರೆದೊನವರ ಮಗಂ ಬಿ........ "

ಈ ಶಾಸನದ ಸ್ವರೂಪವನ್ನು ನೋಡಿದರೆ, ಪಾಂಬಬ್ಬೆಯ ಮೂವರು ಮಕ್ಕಳೂ ಮಾತೃಭಕ್ತಿಪ್ರೇರಣೆಯಿಂದ ಆಕೆಯ ಉಚ್ಚಮತ್ತಾರೋಹಣದ ವಿಷಯವನ್ನು ತ್ರಿವಾರ ಹೇಳಿದರೆಂದು ತೋರುತ್ತದೆ. ನಡುವಣವನಾದ ಅರ್ಹದ್ಭಕ್ತನೇ ಶಾಸನಸ್ಥ ಪದ್ಯದ ಕರ್ತೃವೆಂದೂ ಕೊನೆಯವನು ಆ ಪದ್ಯದ ಪುನರುಕ್ತಿಕಾರಮಾತ್ರನೆಂದೂ ಸ್ಪಷ್ಟವಾಗುತ್ತದೆ.

# ೧೪. ಕಮುಳಾದಿತ್ಯ

( ೯೮೦ )

ಶಾಸನಕವಿ ಕಮುಳಾದಿತ್ಯ ಎಂಬುದಿದು ಕವಿಯ ಹೆಸರಾಗಿರದೆ ಪ್ರಶಸ್ತಿ ಎಂದು ತೋರುತ್ತದೆ. ಕ್ರಿ. ವ. ೯೮೦ರಲ್ಲಿ—ಚಾಳುಕ್ಯ ಇಮ್ಮಡಿ ತೈಲಪನ ಕಾಲದಲ್ಲಿ ಸೊಗಲ ಗ್ರಾಮದ ಶಾಸನವನ್ನು ಈ ಕವಿ ರಚಿಸಿದ್ದಾನೆ.[1] ಸೊಗಲ ಎಂಬುದು ಬೆಳಗಾವಿ ಜಿಲ್ಲೆಯ ಸವದತ್ತಿ ತಾಲೂಕಿನಲ್ಲಿರುವ ಒಂದು ಹಳ್ಳಿ. ಈ ಶಾಸನದಲ್ಲಿ ಕಬ್ಬರೆಹದ ೬೮ ಸಾಲುಗಳಿವೆ; ೩೨ ಪದ್ಯಗಳಿವೆ. ಊರಿನ ಪ್ರಾಚೀನತೆಯನ್ನು ಕುರಿತು ಇರುವ ಸ್ಥಳಪುರಾಣದ ಆಖ್ಯಾಯಿಕೆ ಮೊದಲುಗೊಂಡು ಪ್ರಕೃತ ಶಾಸನಕಾಲದ ಸೋಲ(ಸೊಗಲ) ಕ್ಷೇತ್ರವರ್ಣನೆ, ಅಲ್ಲಿಯ ತಪೋವನದ ವರ್ಣನೆ, ಬೆಳವಾಡಿಯ ಧನಗರ ಕರಿಯ ಕೇತಿಮಯ್ಯನ (ಹೆಂಡತಿ) ಕಂಚಿಕಬ್ಬೆಯ ವ್ಯಕ್ತಿತ್ವವರ್ಣನೆ, ಆಕೆ ಸುವರ್ಣಾಕ್ಷಿ ದೇವರಿಗೆ ದಾನಕೊಟ್ಟ ವಿಷಯ—ಈ ಶಾಸನದಲ್ಲಿ ಸಮಾವೇಶಗೊಂಡಿವೆ.

ಕವಿ ತನ್ನ ಹೆಸರನ್ನು ಒಂದು ಪದ್ಯದಲ್ಲಿ ಹೀಗೆ ಹೇಳಿಕೊಂಡಿದ್ದಾನೆ:

ಭುವನಂ ವನನಿಧಿ ಸುರಗಿರಿ
ದಿವಕುಳಮಿನಚಂದ್ರರುಳ್ಳಿನಂ ಧರ್ಮಮಿದು-
ದ್ಧ್ರುವಮಾಗಿ ನಡೆಗೆ ಶಾಸನ-
ಕವಿಕಮುಳಾದಿತ್ಯರಚಿತಕಾವ್ಯಾದೇಶಂ ||

ಈ ಶಾಸನಕವಿ ಕಮುಳಾದಿತ್ಯ ಇದೇ ಶಾಸನದಲ್ಲಿ ಒಂದು ಕಡೆ ಒಂದು ಪದ್ಯದಲ್ಲಿ ತನ್ನನ್ನು 'ಕವಿತೇಶಮದಪ್ರಭಂಜನ' ಎಂಬ ಬಿರುದಿನಿಂದ ಕರೆದುಕೊಂಡಿದ್ದಾನೆ. ಇದರಿಂದ ಒಂದು ಸಂಗತಿ ವ್ಯಕ್ತವಾಗುತ್ತದೆ. ಈತನ ಸಮಕಾಲೀನನಾಗಿ, ಸ್ವಲ್ಪಮಾತ್ರ ಮುಂಚೆ ಪ್ರಸಿದ್ಧಿಯನ್ನು ಹೊಂದಿದ, **'ಕವಿತೇಶ'** ನೆಂದು ಹೇಳಿಕೊಳ್ಳುತ್ತಿದ್ದ ಕವಿಯೊಬ್ಬನಿದ್ದನು; ಆತನನ್ನು ಈ ಕಮುಳಾದಿತ್ಯನು ಹತಪ್ರಭನನ್ನಾಗಿ ಮಾಡಿದನು. ಬಹುಶಃ ಕವಿತೇಶನೂ ಶಾಸನಕವಿಯೆ ಎಂದು ಊಹಿಸಿದರೆ ತಪ್ಪಾಗಲಿಕ್ಕಿಲ್ಲ. ಇದ್ದರೆ, ಸೊಗಲದ

---

1 Epi. Ind. Vol. XVI p. 3.

ನೆರೆಹೊರೆಯಲ್ಲಿ, ಬಹಳ ದೂರವಲ್ಲದ ಪ್ರದೇಶದಲ್ಲಿ ಇದ್ದಿರಬೇಕಷ್ಟೆ. ಆದರೆ, ಇದುವರೆಗೆ ಕವಿತೇಶನೆಂಬ ಹೆಸರು ಯಾವ ಶಾಸನದಲ್ಲಿಯೂ ಕಂಡುಬಂದಿಲ್ಲ.

ಕವಿಕಮಲಾದಿತ್ಯನ ಶಾಸನದ ಕೆಲವು ಪದ್ಯಗಳು ಹಾಗೂ ಗದ್ಯಾಂಶ:

ಬಳವಚ್ಚೋಳಮಹೀಧರೇಂದ್ರಕುಳಿಶಂ ಲಾಳೇಭಪಂಚಾನನಂ
ಜಳಭೂಭೃದ್ವನದುರ್ಗಮಾರ್ಗಜಳಧಿವ್ರಾತಕ್ಕೆಲೇ ಬಾಡವಾ-
ನಳರೂಪಂ ರಣಕಂಭ ಕಕ್ಕಲಶಿರಚ್ಛೇದಂ ರಿಪೂಗ್ರಾವನೀ-
ವಿಳಯೋತ್ಪಾಟವಿಕೇತು ಚಕ್ರಿತಿಲಕಂ ಶ್ರೀತ್ಯೆಲರಾಜಾಧಿಪಂ||

ತತ್ಪಾದಪದ್ಮೋಪಜೀವಿಗಳ್,

ಜನಪತಿ ಚಕ್ರವರ್ತಿಪರಿರಕ್ಷಣದಕ್ಷಭುಜಾಸಿ ನ್ಯೆರಿಸಾ-
ಧನಲಯಕಾರಿ ರಟ್ಟಕುಳಭೂಷಣನನ್ಯನರೇಂದ್ರದರ್ಪಭಂ-
ಜನನವದಾತಕೀರ್ತಿ ವಿಭು ಕಂಠೆಯ ಭಾರದ ನನ್ನಪಯ್ಯರಾ-
ಣನ ತನೆಯಂ ವಿವೇಕನಿಧಿ ಕತ್ತಮಹೇಭುಜನೆಂಬ ಪೆರ್ಮಗಂ||

........ಸೂರ್ಯಗ್ರಹಣನಿಮಿತ್ತದೊಳ್ಕನ್ನೆಯರುಂ ಸೋಲಮೂವದಿಂ ಬರ್ಗಂ ಧನಗರ ಕಂಚಿಯುಬ್ಬೆ ಸ್ಥಾನಭೂಮಿಯಂ ಕೊಟ್ಟು ಸುವರ್ಣಾಕ್ಷಿದೇವ ತೀರ್ಥದಲ್ತಪಂಗೆಯ್ವ ತಪೋಧನರಾಹಾರದಾನಕ್ಕೆ ತ್ರಿಭುವನಸಿಂಗಿಪಂ[ಡಿ]ತರ ಕಾಲಂ ಕರ್ಚಿ ಬಿಟ್ಟ ಕಮ್ಮ ೫೦೦.

ಅವಜಿಗೊಳಗೆ ಚಂದ್ರಧರನಂ-
ಗವಿಭೋಗಕ್ಕೆಯ್ದ ನೂಱು ಕಮ್ಮಂ. ಲಮು-
ದ್ಭವಮಾಗಿ ನಡೆವುದಾಚಂ-
ದ್ರವಾರ್ಧಿತಾರಾಗಣಂ ದಿವಂ ನಿಲ್ವಿನೆಗಂ ||

ಪರಮಮುನೀಶರ್ಪನ್ನಿರ್
[ವರ*] [ಮು] ಕ್ತಿಗೆ ಸಲ್ವ ಫಳಮದಯ್ದೂರ್ಕಮ್ಮಂ
ನಿರುತಮೆನೆ ಸರ್ವಬಾಧಾ-
ಪರಿಹಾರಮದೊಂದು ಮನೆನಿವೇಶನಸಹಿತಂ ||

ನಾವಿದರ್ಗೆ ತೆಂಕಲಾ ಕ-
ಗ್ಗಾವುಂಡರ ಬಳಕೆ ಮೂಡ ತೇಗೂರ ಪೊಲ-
ಕ್ಕಾವ ಗದೆ [೯*] ಬಡಗ ಪಾಲ್ವಳ
ಬೂವ. ಪಶ್ಚಿಮದೊಳಿರ್ದ ಸತ್ರದ ವೃತ್ತಿ ||

# ೧೫. ಜಿನವಲ್ಲಭ

( ೧೦ನೆಯ ಶ. )

ಆಂಧ್ರರಾಜ್ಯದ ಕರೀಂನಗರ ಜಿಲ್ಲೆಯ ಗಂಗಾಧರಂ ಗ್ರಾಮದ ಬಳಿಯ ಬೊಮ್ಮಲಗುಟ್ಟ ಬೆಟ್ಟದಲ್ಲಿ ಇತ್ತೀಚೆಗೆ ಒಂದು ಶಿಲಾಶಾಸನ ದೊರೆತಿದೆ.[1] ಅದು ೧೦ನೆಯ ಶತಮಾನದ್ದೆಂದು ಸಂಶೋಧಕರು ಗುರುತಿಸಿದ್ದಾರೆ. ಆರಂಭದಲ್ಲಿ ಉಪೋದ್ಘಾತರೂಪವಾದ ಕನ್ನಡ ಗದ್ಯವೂ, ಬಳಿಕ ಆದಿ ಮಹಾ ಕವಿ ಪಂಪನಿಗೆ ಅರಿಕೇಸರಿಯ ದತ್ತಿಯಾದ ಧರ್ಮಪುರದ, ಪಂಪನ ಮತ್ತು ತನ್ನ ಪ್ರಶಸ್ತಿಯ ಸಂಸ್ಕೃತ ೩, ಕನ್ನಡ ೬, ತೆಲುಗು ೩ ಪದ್ಯಗಳನ್ನೂ ಕವಿ ಕೊಟ್ಟಿದ್ದಾನೆ. ಕೊನೆಯಲ್ಲಿ ಕಂಡರಣೆಕಾರನ ಹೆಸರನ್ನು ಗದ್ಯದಲ್ಲಿ ತಿಳಿಸಿದೆ.

ಈ ಶಾಸನದ ಕರ್ತೃ ಪಂಪಮಹಾಕವಿಯ ತಮ್ಮನೇ. ಆತನ ಹೆಸರು ಜಿನವಲ್ಲಭ. ಆರಂಭದ ಗದ್ಯದಲ್ಲಿ ಕವಿ ತನ್ನ ಆಶುಪರಿಚಯವನ್ನೂ ತನ್ನ ಧರ್ಮಕಾರ್ಯಗಳನ್ನೂ ತಿಳಿಸಿದ್ದಾನೆ. ಆ ಪ್ರಕಾರ, ಸಮಸ್ತಕಳಾಳಾಪ ಪ್ರವೀಣನೂ ಭವ್ಯರತ್ನಾಕರ ಪಕ್ಷಪಾತಿಯೂ ಬೆಂಗಿನಾಡ ಸಪ್ತಗ್ರಾಮಗಳಲ್ಲೊಂದಾದ ವೆಂಗಿಪೞು ಕಮ್ಮೆ ಬ್ರಾಹ್ಮಣನೂ ಜಮದಗ್ನಿ ಪಂಚಾರ್ಷೇಯದ ಶ್ರೀವತ್ಸ ಗೋತ್ರದವನೂ ಆದ ಗುಣ್ಡಿಕೞ ನಿಡುಂಗೊಣ್ಡೆಯ ಅಭಿಮಾನಚಂದ್ರನ ಮೊಮ್ಮಗನಾದ ಭೀಮಪಯ್ಯನ ಮತ್ತು

---

1 ಪ್ರಥಮ ಪ್ರಕಟನೆ: ಡಾ. ಎನ್. ವೆಂಕಟರಮಣಯ್ಯ: ಸಂಶೋಧನ ವಿಮರ್ಶೆಯೊಡನೆ: 'ಭಾರತಿ' ತೆಲುಗು ಪತ್ರಿಕೆ ೧೯೬೬ ಮಾರ್ಚ. ಮರು ಪ್ರಕಟನೆ : ಡಾ. ಆರ್. ಸಿ. ಹಿರೇಮಠ : ವಿಶೇಷ ವಿಮೋಚನೆಯೊಡನೆ: The Karnatak University Journal: Humanities— Vol· XI, 1967.

ಅವೇಲೆ : ಪ್ರೊ. ವಿ. ಜಿ. ಕುಲಕರ್ಣಿ, ಡಾ. ಪಿ. ಬಿ. ದೇಸಾಯಿ, ಡಾ. ಎಂ. ಎಂ. ಕಲಬುರ್ಗಿ ಮೊದಲಾದವರು ಬೇರೆ ಬೇರೆ ಪತ್ರಿಕೆಗಳಲ್ಲಿ ಈ ಶಾಸನವನ್ನು ಕುರಿತು ಚರ್ಚಿಸಿದ್ದಾರೆ.

ಬೆಳ್ವೊಲದ ಅಣ್ಣಿಗೆಱೆಯ ಜೋಯಿಸ ಸಿಂಘನ ಪೊಮ್ಮಗಳಾದ[2] ಪಬ್ಬಬ್ಬೆಯ ಮಗನು ಈ ಜಿನವಲ್ಲಭನು ; ಕೊಣ್ಡಕುನ್ದೇಯ ದೇಸಿಗಗಣದ ಪುಸ್ತಕ ಗಚ್ಛದ ಪಣ್ಡರಂಗವಲ್ಲಿಯ ಜಯ[ಂ]ಗೊಣ್ಡ ಸಿದ್ಧಾ[ನ್ತ]ಭಟಾರರ ಶಿಷ್ಯನು. ಈತನು ಸಬ್ಬಿನಾಡ ನಟ್ಟನಡುವಣ ಧರ್ಮಪುರದ ಉತ್ತರದಿಗ್ಭಾಗದ ವೃಷಭಗಿರಿಯೆಂಬ ಅನಾದಿಸಂಸಿದ್ಧ ತೀರ್ಥದ ದಕ್ಷಿಣ ದಿಶಾಭಾಗದ ಸಿದ್ಧಶಿಲೆಯಲ್ಲಿ ತಮ್ಮ ಕುಲದೈವದ ಆದ್ಯನ್ತ ಜಿನಬಿಂಬಗಳನ್ನೂ[3] ಚಕ್ರೇಶ್ವರಿಯನ್ನೂ ಬೇರೆ ಕೆಲ ಜಿನಬಿಂಬ ಜಿನಪ್ರತಿಮೆಗಳನ್ನೂ ತ್ರಿಭುವನತಿಲಕವೆಂಬ ಬಸದಿಯನ್ನೂ 'ಕವಿತಾಗುಣಾರ್ಣವ'ವೆಂಬ[4] ಕೆರೆಯನ್ನೂ ಮದನವಿಳಾಸವೆಂಬ ಉದ್ಯಾನವನ್ನೂ ಮಾಡಿಸಿದನು. ಜಿನವಲ್ಲಭನ ಈ ಎಲ್ಲ ಧರ್ಮಕಾರ್ಯಗಳು ತನ್ನ ಅಣ್ಣನಾದ ಪಂಪನ 'ಕೀರ್ತಿಸ್ಮಾರಕವಾಗಿ' ಜರುಗಿದವೆಂದು ತೋರುತ್ತದೆ.[5] ಅಲ್ಲಿಯೇ ಈ ಶಾಸನವನ್ನು ನಿಲ್ಲಿಸಿದನು.

ವೆಂಗಿಪಳು ಅಗ್ರಹಾರದ ಮೂಲನಿವಾಸಿಯಾದ ಇವರ ಮನೆತನವು ಅಭಿಮಾನಚಂದ್ರನ ಕಾಲದಲ್ಲಿ ಆ ಸಪ್ತಗ್ರಾಮಗಳಲ್ಲಿಯೆ ಒಂದಾದ ಗುಂಡಿ ನದೀ ತೀರದ ನಿಡುಗುಂದಿಗೆ ಬಂದು ನೆಲಸಿತು. ಈ ವೆಂಗಿಪಳು ನಿಡುಗುಂದಿಗಳು ಈಗಿನ ಗುಂಟೂರು ಜಿಲ್ಲೆಯ ಬಾಪಟ್ಲ ತಾಲೂಕಿನಲ್ಲಿವೆ.[6] ತಂದೆ ಭೀಮಪಯ್ಯನು ಬೆಳ್ವಲದ ಅಧಿಕಾರಿಯಾಗಿ ಅಣ್ಣಿಗೆರೆಯಲ್ಲಿ ವಾಸವಾಗಿದ್ದಂತೆ

---

2 ಡಾ. ಎನ್. ವೆಂಕಟರಮಣಯ್ಯನವರು 'ಪೆರ್ಮ್ಮ[ಂ]' ಎಂದು ಅನುಮಾನಿಸಿ ಕೊಟ್ಟ '[ಂ]' ಬಿಂದುವನ್ನು (ಭಾರತಿ) ಡಾ. ಎಂ. ಎಂ. ಕಲಬುರ್ಗಿಯವರು ಮೂಲ ಕಲ್ಲಚ್ಚಿನ ಪ್ರತಿಯಲ್ಲಿ 'ಳ' ಎಂದು ಗುರುತಿಸಿದ್ದಾರೆ (ಕನ್ನಡನುಡಿ). ಈ ಪಾಠವು ಶಾಸನದ ಹೇಳಿಕೆಯ ಕ್ರಮದಲ್ಲಿ ಹೆಚ್ಚು ಸಾಂಗತ್ಯವನ್ನು ಪಡೆಯುವದು.

3 ಎಲ್ಲಾ ೨೪ ತೀರ್ಥಂಕರರ ಪ್ರತಿಮೆಗಳು ?

4 ಇದು ಪಂಪನ ಬಿರುದು.

5 ಈ ಶಾಸನದ ೫ನೆಯ ಪದ್ಯ.

6 ಡಾ. ವೆಂಕಟರಮಣಯ್ಯನವರು ಅಭಿಪ್ರಾಯಪಟ್ಟಿದ್ದಾರೆ (ಭಾರತಿ).

ತೋರುತ್ತದೆ.[7] ಅಂತೆಯೇ ಪಂಪನಿಗೆ ಬನವಾಸಿ ನಾಡಿನ ಅತ್ಯಂತ ನಿಕಟ ಸಂಬಂಧವು ಬೆಳೆದು ಯಾರು ಅಂಕುಶವಿಟ್ಟರೂ ನೆನೆಯುವಂತಹ ಅಭಿಮಾನವನ್ನು ಹುಟ್ಟಿಸಿರಬೇಕು. ಈ ಜಿನವಲ್ಲಭನು ವೃಷಭಗಿರಿಯಲ್ಲಿಯೆ ಧರ್ಮಕಾರ್ಯಗಳನ್ನು ಎಸಗುತ್ತ ನಿಂತಿರಬೇಕು.[8] ಇವನು ಸಂಸ್ಕೃತ-ಕನ್ನಡ-ತೆಲುಗು ಮೂರು ಭಾಷೆಗಳಲ್ಲಿ ಕಾವ್ಯರಚನಾನೈಪುಣ್ಯವನ್ನು ಪಡೆದವನಾಗಿದ್ದನಲ್ಲದೆ ಹಾಡುಗಾರಿಕೆಯಲ್ಲಿಯೂ ವಾದ್ಯವಾದನಕಲೆಯಲ್ಲಿಯೂ ಕಾವ್ಯವಾಚನದಲ್ಲಿಯೂ ರಸವತ್ತಾದ ಮಾತುಗಾರಿಕೆಯಲ್ಲಿಯೂ ಅದ್ವಿತೀಯನಾದ ಇವನು 'ವಾಗ್ವಧೂವರವಲ್ಲಭ' ಎಂದೆನಿಸಿದ್ದನು.[9] ವೃಷಭಗಿರಿಯ ಉಚ್ಚಶಿಲಾತಲದಲ್ಲಿ ಅರಿಕೇಸರಿಯಿಂದ ಪಂಪನಿಗೆ ಧರ್ಮಪುರವನ್ನು ಕೊಟ್ಟ ದತ್ತಿಶಾಸನವುಂಟೆಂಬ ಹೊಸಮಾತನ್ನು ಈ ಶಾಸನದಲ್ಲಿ ಜಿನವಲ್ಲಭನು ಘೋಷಿಸಿದ್ದಾನೆ.[9] ಇದು ದೊರೆತರೆ ಜಿನವಲ್ಲಭ-ಪಂಪರ ಜೀವನದ ಚಾರಿತ್ರಿಕ ಅಂಶಗಳ ಮೇಲೆ ಇನ್ನೂ ಹೆಚ್ಚಿನ ಬೆಳಕು ಬದ್ದೀತು.

---

7 ಪೂರ್ವಕಾಲದಲ್ಲಿ ದೂರದ ಊರಿಗೆ ಕನ್ಯೆಯನ್ನು ಕೊಡುವ ಪರಿಪಾಠವಿಲ್ಲವೆಂಬುದನ್ನು ನೆನೆಯಬಹುದು.

ಈ ಗದ್ಯದಲ್ಲಿಯ 'ಭೀಮಪಯ್ಯನ ಬೆಳ್ವೊಲದಣ್ಣಿಗೆರೆ' ಎಂಬ ಪದಗುಂಫನಕ್ಕೆ ಭೀಮಪಯ್ಯನು ಅಣ್ಣಿಗೆರೆಯವನೆಂದೂ ಅರ್ಥವಿಸಬಹುದಾಗಿದೆ.

8 ಈ ಶಾಸನದ ೨ನೆಯ ಪದ್ಯ.

9 ,, ೯ನೆಯ ಪದ್ಯ.

## ೧೩. ಪಣ್ಡಸ್ವಾಮಿ

(೧೧ನೆಯ ಶತಮಾನ?)

ಕಡೂರು ಜಿಲ್ಲೆಯ ಚಿಕ್ಕನಾಯಕನಹಳ್ಳಿ ತಾಲೂಕಿನ ಕೋಟಿಪೂರ ಗ್ರಾಮದಲ್ಲಿ ಕಾಲನಿರ್ದೇಶವಿಲ್ಲದ ಶಾಸನವೊಂದಿದೆ.[1] ಅದು ಪೂರ್ವದ ಹಳಗನ್ನಡಲಿಪಿಯಲ್ಲಿರುವ ಸಂಸ್ಕೃತಶಾಸನ. ಅದನ್ನು ರಚಿಸಿದವನು ಕಶ್ಯಪ ಗೋತ್ರದ ಪಣ್ಡಸ್ವಾಮಿ. ಆತನು ತಯರ್ಗಲ್ಲಣನ ಪುರೋಹಿತನೂ ಪುರಾಣಜ್ಞನೂ ಆಗಿದ್ದನು.

೨೮ ಸಾಲುಗಳುಳ್ಳ ಈ ಶಾಸನದ ಆರಂಭದ ೮ ಸಾಲುಗಳು ಚೆನ್ನಾಗಿದ್ದು ಮುಂದಿನ ಭಾಗ ಅಲ್ಲಲ್ಲಿ ಕೆಟ್ಟುಹೋಗಿದೆ. ಇದು 'ಸಿದ್ಧಂ ನಮಃ' ಎಂದು ಆರಂಭವಾಗಿ

ಸ್ವಸ್ತಿ || ಜಯತೀಂದ್ವರ್ಕನಯನಃ ಕ್ಷಿತಿದ್ಯುವಿಯದೀಶ್ವರಃ
ಲೋಕೋತ್ಪತ್ತಿತಿರೋಭಾವಪಾಲನವ್ಯಾಪೃತೋ ಹರಿಃ ||

ಎಂಬ ಹರಿಸ್ತುತಿಯ ತರುವಾಯ, ಇಕ್ಷ್ವಾಕುಹರಿಶ್ಚಂದ್ರಾದಿಗಳಿಂದ ಪ್ರಸಿದ್ಧವಾದ ಸೂರ್ಯವಂಶದ ಅಲ್ಪಪರಿಚಯವಿದೆ. ರಾಮಕುಶರ ತರುವಾಯ ಮಲ್ಲಿಕಾರಿ ಮೂರಿಕಾರಿ ಎಂಬ ಸಹೋದರರಿದ್ದರೆಂದೂ ಅವರಲ್ಲಿ ಮೂರಿಕಾರಿ ....ಸೇನವ್ಯಾಥನನ್ನು ಕೊಂದು ಈ ಭೂಮಿಯನ್ನು ಗಳಿಸಿದನೆಂದೂ ಉಲ್ಲೇಖಿಸಲಾಗಿದೆ. ಮುಂದೆ ಈ ವಂಶದ ಯಾವನೋ ತಯರ್ಗಲ್ಲಣನೆಂಬವನು ದತ್ತಿಕೊಟ್ಟ ಪ್ರಸ್ತುರಶಾಸನವಿದೆಂದು ಹೇಳಿದೆ. ಕೊನೆಗೆ

ಶಬ್ದತ್ಕಶ್ಯಪೋ ವಾಗ್ಮೀ ತಯರ್ಗಲ್ಲಣ ಪುರೋಹಿತಃ
ಪಂಡಸ್ವಾಮಿ ಪುರಾಣಜ್ಞಃ ಕೃತವಾನ್ ಶಾಸನಂ ತ್ವಿದಂ ||

---

1 Ep. Car. VI, ಚಿ. ನಾ. ಹಳ್ಳಿ ೬೩.

# ೧೭. ಕವಿ ವೈಜಣ್ಣ

ಹಳೇಬೀಡಿನ ಒಂದು ಶಾಸನದಲ್ಲಿ[1] ಹೀಗೊಂದು ಶ್ಲೋಕವೂ ಅದರಡಿಯಲ್ಲಿ ಹೀಗೊಬ್ಬ ಕವಿಯ ಹೆಸರೂ ಇದೆ :

ಸ ಹಿತೋ ಧನಿನಾಂ ಲೋಕೇ ಶಿವೋ ಯಸ್ಯಹೃದಿ ಸ್ಥಿತಃ
ಸಹಿತೋಧನಿನಾಂ ಲೋಕೇ ಶಿವೋ ಯಸ್ಯ ಹೃದಿ ಸ್ಥಿತಃ ||

—ಕವಿ ವೈಜಣ್ಣ

ಈ ಶ್ಲೋಕಕರ್ತೃವೇ ಈತನೋ ತಾನು ತಿಳಿದಿದ್ದುದನ್ನು ಕವಿ ವೈಜಣ್ಣ ಬರೆದನೋ ತಿಳಿಯದು. ವೈಜಣ್ಣನು ತಾನು ಕವಿ ಎಂದಂತೂ ತಿಳಿಸಿದ್ದಾನೆ.

1 EC. V-2, Bl. 233.

# ೧೮. ವೆಣ್ಣೆಯಭಟ್ಟ

( ೧೦೧೦ )

ಈ ವೆಣ್ಣೆಯಭಟ್ಟ ಘನವಿದ್ವಾಂಸನು. ಕನ್ನಡ ಸಂಸ್ಕೃತ ಉಭಯ ಭಾಷೆಗಳಲ್ಲಿಯೂ ಶ್ರೇಷ್ಠನಾದ ಕವಿಯೆಂದು ಆ ಕಾಲದಲ್ಲಿ ಪ್ರಕೀರ್ತಿತನಾಗಿದ್ದಾನೆ. ಧಾರವಾಡ ಜಿಲ್ಲೆಯ ಮುಂಡರಗಿ ತಾಲೂಕಿನ ಆಲೂರು ಎಂಬ ಗ್ರಾಮದವನು. ( ಆ ಊರ ಶಾಸನದಲ್ಲಿ ಈ ಗ್ರಾಮವನ್ನು ಮಾಳದಾಲೂರು ಎಂದು ಹೆಸರಿಸಲಾಗಿದೆ. ) ಕಮ್ಮ ಕುಳದ ಬ್ರಾಹ್ಮಣನಾದ ದಿಂಡಪಂಡಿತರ ಮಗನಾದ ಈ ವೆಣ್ಣೆಯ ಭಟ್ಟನು ಉಭಯಕವೀಂದ್ರನೆಂದೂ ಕವಿರಾಜವಲ್ಲಭನೆಂದೂ ಆಲೂರ ಕ್ರಿ. ವ. ೧೦೧೦ರ ಶಾಸನದಲ್ಲಿ[1]ರುವ ಅವನ ಪ್ರಶಸ್ತಿಮಾಲಿಕೆಯಿಂದ ತಿಳಿದುಬರುತ್ತದೆ, ಹೊರತು ಯಾವೊಂದು ಕಾವ್ಯವನ್ನಾಗಲಿ ಶಾಸನವನ್ನಾಗಲಿ ಈತನು ಕೃತಿಗೈದಂತೆ ಕಂಡುಬರುವುದಿಲ್ಲ.

ವೆಣ್ಣೆಯಭಟ್ಟ ಕವಿಶ್ರೇಷ್ಠನೆಂದೆನಿಸಿಕೊಂಡಂತೆ, ಕುಟಿಲಕೌಟಿಲ್ಯನೆನಿಸಿ, ಕದನವಿನೋದನೆನಿಸಿ, ಕಲಿಕಾಲಬೃಹಸ್ಪತಿಯೆನಿಸಿ, ಕವಿತ್ವ, ನೀತಿಮತ್ವ, ವೀರತ್ವ, ವಿದ್ವತ್ತ್ವ—ಈ ಚತುರ್ಗುಣಗಳ ಹುರಿಗೊಂಡ ವ್ಯಕ್ತಿತ್ವವುಳ್ಳವನಾಗಿದ್ದನೆಂಬುದನ್ನು ಪ್ರಶಸ್ತಿಮಾಲಿಕೆಯಲ್ಲಿ ಕಾಣುತ್ತೇವೆ. ಚಾಳುಕ್ಯ ಜನೆಯ ವಿಕ್ರಮಾದಿತ್ಯನ ಮಾಂಡಲಿಕನಾಗಿದ್ದ ಪಲ್ಲವ ಇರಿವಬೆಡಂಗನೊಳಂಬಾಧಿ ರಾಜನ ಅಧೀನದಲ್ಲಿ ಈತನು ಮಹಾಸೇನಾಪತಿಯಾಗಿದ್ದನು ; ಏಳು ಊರುಗಳಿಗೆ ಅಗ್ರಗಣ್ಯನಾಗಿದ್ದನು. ಮಲೆತುನಿಂತ ಮಲೆಯರಾಜನನ್ನು ಕಾದಿ ಮರ್ದಿಸಿದ ವೀರನು. ಸಿರಿಪುರದ ( ಈಗಿನ ಸಿರೂರಿನ) ಗುಹೆಯಮಠದ ಅಮರಾಚಾರ್ಯಭಟ್ಟಾರಕರಿಗೆ ನೂರು ಮತ್ತರು ಭೂಮಿಯನ್ನು ದಾನಮಾಡಿದನೆಂದು ಏತಚ್ಛಾಸನವು ಹೇಳುತ್ತದೆ.

ವೆಣ್ಣೆಯ ಭಟ್ಟನ ಕವಿತ್ವಕ್ಕೆ ಮಾದರಿಯ ಪದ್ಯಗಳ ಅಭಾವದಿಂದಾಗಿ, ಆತನ ಪರಿಚಯಕ್ಕೆ ಬೇರೊಂದು ಎಳೆ ಸಿಕ್ಕಿಲ್ಲವಾಗಿ, ಅವನ ಯೋಗ್ಯತೆಗೆ

---

1 Epi. Ind. XVI, p. 28.

ಪ್ರಮಾಣಭೂತವಾದ ಪ್ರಶಸ್ತಿಮಾಲಿಕೆಯನ್ನೇ ಆ ಶಾಸನದಿಂದ ಇಲ್ಲಿ ಎತ್ತಿ ಕೊಟ್ಟಿದೆ:

"ಸ್ವಸ್ತಿ ಸಮಸ್ತರಾಜ್ಯಭರನಿರೂಪಿತ ಮಹಾಸೇನಾಧಿಪತಿ ಪತಿಹಿತಾಚರಣಂ ರಣರಂಗದುಷ್ಟಂ ದುಷ್ಟನಿಷ್ಠುರಂ ಕುಟಿಲಕೌಟಿಲ್ಯಂ ಕ್ಷುದ್ರವಿದ್ರಾವಣಂ ಕಲಿಕಾಲಬೃಹಸ್ಪತಿ ಪರಿವಾರವಜ್ರಪಂಜರನಹಿತಾಹಿಗರುಡನುಭಯಕವೀಂದ್ರಂ ಕವಿರಾಜವಲ್ಲಭಂ ವಾದೀಭಪಂಚಾನನಂ ಸರಸ್ವತೀವಲ್ಲಭಂ ಪರನಾರೀದುರ್ಲಭಂ ಘಟಿಗನ ಗಂಧವಾರಣಂ ನಯಧಾಮಂ ಚಲದೋಜನಟಿಪಿಲ್ಲದಾತಂ ನಲ್ಲರ್ಗೆನಲ್ಲಂ ಚತುರಚತುರ್ಮುಖಂ ಕದನವಿನೋದಂ ಮಲೆಯಮರ್ದನಂ ವಿಪ್ರಕುಳಕಮಳಭಾಸ್ಕರಂ ಪಾರ್ವರೊಳ್ಗಂಡಂ ಸಪ್ತಗ್ರಾಮಾಗ್ರಗಣ್ಯಂ ಕಮ್ಮಕುಳೋದ್ಭವಂ ಧೀತ[1]ಗೋತ್ರಂ ದಿಂಡಪಂಡಿತಪುತ್ರಂ ಛಾತ್ರಕಮಿತ್ರಂ ಪಂಡಿತಮಂಡನಂ ವೆಣ್ಣೆಯಭಟ್ಟರುಮೆನಿಸಿದ ಶ್ರೀಮನ್ಮಹಾಪ್ರಚಂಡ ದಂಡನಾಯಕಂ ಘಟಿಯಂಕಕಾಱಂ........"

---

[1] ಈ ಶಾಸನದ ಮೂಲಸಂಪಾದಕರ ಅಡಿಟಿಪ್ಪಣಿ: The first letter of this word looks like *r*. Ellit's Pandit has transcribed the word as *rudita*.

# ೧೯. ಕಂದರ್ಪ

(೧೦೧೯)

ಧಾರವಾಡ ಜಿಲ್ಲೆಯ ಹಾವೇರಿ ತಾಲೂಕಿನ ಕಳ್ಳಿಹಾಳಲ್ಲಿರುವ ಚಾಳುಕ್ಯ ೨ನೆಯ ಜಯಸಿಂಹನ ಕಾಲದ ಶಕವರುಷ ೯೪೧ರ ಶಾಸನವನ್ನು[1] ಕಂದರ್ಪನೆಂಬವನು ರಚಿಸಿದ್ದಾನೆ. ಅಜ್ಜಡಿಯ ಸಹದೇವೇಶ್ವರ ದೇವಾಲಯಕ್ಕೆ ಕೊಟ್ಟ ಭೂದಾನವನ್ನು ಇದರಲ್ಲಿ ಉಲ್ಲೇಖಿಸಿದೆ. ಫಲಶ್ರುತಿಯ ಶ್ಲೋಕಾನಂತರದಲ್ಲಿ 'ಕಂದರ್ಪನ ಕಾವ್ಯ' ಎಂದು ಮಾತ್ರ ನಿರಾಡಂಬರವಾಗಿ ಹೇಳಿದೆ. ಇವನ ಕೆಲವು ಪದ್ಯಗಳು :

ಉರಿಪಲ್ಲುಗ್ಗೇರಿಯುಂ ಮುಮ್ಮುನಿಯ ಮುಸಕಮಂ ಮುಟ್ಟಿಸಲ್ಕನ್ಯಕುಬ್ಜೇ
ಶ್ವರನಂ ಹೇಮಾದ್ರಿಯುಂ ಪಾಯಿಸಲೊಡರಿಸುವಂ ಚಾರುಚಾಲುಕ್ಯರಾಜ್ಯ
ಸ್ಥಿರಲಕ್ಷ್ಮೀರಕ್ಷಕಂ ಕೋಶಳಕುಳಕುಳಿಶಂ ಲಂಜಿಕಾಭಂಜನಂ ಗೂ
ರ್ಜರವಜ್ರಂ ಚೋಳಕಾಳಾಶನಿ ಮಲಯಮಹೀಮರ್ದನಂ ಕುಂದರಾಜಂ ||

ನೆಟ್ಟನೆ ರೂಪವಿಭ್ರಮಕೆ ದಾನದ ಧರ್ಮದ ರೂಢಿಗುಂತ್ತೆ ಬಾ
ಯ್ವಿಟ್ಟು ನಿರಂತರಂ ಪಡೆವ ಕಾಂತೆಯರಾ ವಧು ಕೊಟ್ಟದಾನಮಂ
ಕೊಟ್ಟರೊ ಪುಟ್ಟುವಂದೊಡನೆ ಪುಟ್ಟಿದರೋ ಸತಿ ಪಟ್ಟ ತೊಟ್ಟಿಲೊಳ್
ಪಟ್ಟಿಯನೋಂತರೋ ನೆಗಟ್ದ ಜೋಗಲದೇವಿಯ ನೋಂತನೋಂಪಿಯುಂ ||

ಕಟ್ಟುಪ್ಪು ವಿಷದ ಮುದ್ಯದ
ಪುಟ್ಟಿದ ನೆಲೆ ಜಳಧಿ ಜಳಧಿಯುಂ ಪೊಗಳದೆ ನೀಂ
ಮುಟ್ಟಿಮಿಡು ರಾಚಮಲ್ಲಂ
ಕಟ್ಟಿಸಿದಜ್ಜಿಗೆಱೆ ಸಮುದ್ರದಿಂ ಮಿಗಿಲಲ್ತೇ ||

---

1 ಶಿಲಾಶಾಸನಗಳ ಕೆಲವು ಕನ್ನಡ ಕವಿಗಳು (ಶ್ರೀನಿವಾಸ ರಿತ್ತಿ) ಕ. ಸಾ. ಪ. ಪ. ೪೫–೧ ; ಜೂನ್ ೧೯೬೦. Annual Report on S. I. Epigraphy 1932-33. App. D. No. 124.

ಪುಸಿಯುಂ ಲೋಭಮುಮೆಂಬ ರಾವಲತನಕ್ಕೊಡಾಗಿ ಬೋಡಾಗಿ ಮಾ
ನಸರಾಕಾರದ ಕಾಗೆಯಾಗಿ ನರಿಯಾಗಿರ್ದ್ದನರಂ ಕೂರ್ತು ಕೀ
ರ್ತಿಸದಿರ್ವರ್ಣ್ಣಿಸುವಂದು ಬಣ್ಣಿಸು ಸುಸತ್ಕ್ಯೋದ್ಗ್ರವನಂ ಪೆಪುರಂ
ಜಿಸೆ ಸಂದೀ ಸಹದೇವನಂ ಬುಧಜನಕ್ಕಾರ್ತೀವನಂ ಕಾವನಂ ||

## ೨೦. ಕಪ್ಪಣಭಟ್ಟ

( ೧೦೩೮ )

ಸೊರಬ ತಾಲೂಕು ಕುಪ್ಪಗಡ್ಡೆಯಲ್ಲಿರುವ ಕ್ರಿ. ವ. ೧೦೩೮ರ ಶಾಸನವೊಂದು[1] ಬನವಾಸೆ ಸಾಂತಳಿಗೆಯನಾಳುತ್ತಿದ್ದ ಮಾಟೂರವಂಶದ ಜಯಸಿಂಹನು ತನ್ನ ತಂದೆಯ ಹೆಸರಿನಲ್ಲಿ ಶ್ರೀಆಲೇಶ್ವರ ದೇವಾಲಯವನ್ನೆತ್ತಿಸಿ ಅದಕ್ಕೆ ದತ್ತಿಗಳನ್ನು ಬಿಟ್ಟುದನ್ನು ಹೇಳುತ್ತದೆ. ಅದನ್ನು ರಚಿಸಿದವನು ಕೊನೆಯಲ್ಲಿ " ಶ್ರೀಮತ್ಕವಿರಾಜವಲ್ಲಭಂ ಕಪ್ಪಣಭಟ್ಟರ ಲಿಖಿತಂ " ಎಂದು ತನ್ನ ಹೆಸರನ್ನು ಉಲ್ಲೇಖಿಸಿದ್ದಾನೆ. ಶಾಸನದ ಕೆಲ ಪದಗಳು :

ಕಡಿವ ಭಟರ್ಘಟಾಂತ್ರವೃತ್ತ(ತ)ದಿಂದ ಮುರುಳ್ವ ಹಯಂ ಹಯಾಳಿಯುಂ
ಪುಡಿಪುಡಿಯಾಗೆ ಮೆಟ್ಟುವ ಗಜಂ ಗಜಮಾಂಸಮನುರ್ಬಿ ತಿಂದು ಕೂ
ಗಿಡುವ ಮರುಳ್ಮರುಳ್ಪಡೆಯನಟ್ಟುವ ಸಿದ್ಧಗಣಂ ಗಣಂಗಳಂ
ಬಡಿವ ನಿಶಾಚರರ್ಸಮರಧೀರರಿರುತ್ತಿಱಿದಾಜಿರಂಗದೊಳ್ ||

ಮುಳಿಸತ್ಯದ್ಭುತಮಾಯಮೆಂದುಮಟಳಂ ದಾನಂ ಬುಧಾಹ್ಲಾದಿ ಕೇ
ವಳಿ(ಳ)ಮಲ್ಪುನ್ನತಿ ಸತ್ಯಶೇಚಱಿತಂ ಲೋಕೋತ್ತರಂ ಕೀರ್ತಿ ದಿ
ಗ್ವಳಯಾಂತಂ ನುಡಿ ಮೇರುಶೈಳಲಿಖಿತಂ ಧರ್ಮಂ ಜಗನ್ಮುದ್ರೆ ಭೂ
ತಲವಂದ್ಯಂ ಚರಿತಂ ನಯಂ ಜನನುತಂ ಶ್ರೀಸಿಂಹಭೂಪಾಳನಾ ||

ರಿಪುಸೈನ್ಯಮೊತ್ತೆ ಧುರದೊಳ್
ನೃಪರಿಂ ಮುನ್ನಿಱಿದು ಪಲವು ಕಾಳೆಗದೊಳ್ ಭೂ
ಮಿಪಚೂಡಾಮಣಿ ಸಿಂಗಂ
ನೃಪರಿಂ ಮುನ್ನಿಱಿವನೆಂಬ ಪೆಸರಂ ಪಡೆದಂ ||

---

1 Ep. Car. VIII, ಸೊರಬ ೧೫೪.

# ೨೧. ನಾಗಮಯ್ಯ

( ೧೦೪೫ )

ಈತನು ಧಾರವಾಡ ಜಿಲ್ಲೆಯ ನವಿಲುಗುಂದ ತಾಲೂಕಿನ ಅಣ್ಣಿಗೆರೆಯವನು. ಬಳ್ಳಾರಿ ಜಿಲ್ಲೆಯ ಹಡಗಲಿ ತಾಲೂಕಿನ ಗ್ರಾಮವಾದ ಮೋರಿಗೇರಿಯಲ್ಲಿರುವ ಚಾಳುಕ್ಯ ೧ನೆಯ ಸೋಮೇಶ್ವರನ ಕಾಲದ ಕ್ರಿ. ಶ. ೧೦೪೫ ರ ಒಂದು ಶಿಲಾಶಾಸನವನ್ನು [1] ಈತನು ಬರೆದಿದ್ದಾನೆ. ಶಾಸನಾರಂಭದಲ್ಲಿ ದೇವತಾಸ್ತುತಿಯ ಪದ್ಯವಿಲ್ಲ. ಶಿಲಾಲಿಪಿಯಲ್ಲಿ ೬೮ ಸಾಲುಗಳ ವ್ಯಾಪ್ತಿಯುಳ್ಳ ಈ ಶಾಸನದಲ್ಲಿ ಪದ್ಯಗಳು ಎರಡೇ ಎರಡು—ಒಂದು ವೃತ್ತ, ಒಂದು ಕಂದ—ಇವೆ. ಉಳಿದೆಲ್ಲ ಭಾಗ ಗದ್ಯಮಯ. ಗದ್ಯದ ಭಾಷೆ ಶುದ್ಧ ಹಾಗೂ ಸರಲ. ಆರ್ಮೆಳೆ, ನೆಲ್ಲಕುದಿರು, ಸೊನ್ನ, ಪೊಳಲ್ಗುಂದೆ, ಸೂಗೂರು, ಮೋರಿಂಗೆಱೆ ಎಂಬ ಆರು ಬಾಡಗಳನ್ನು ಅಣುಗಜೀವಿತದಿಂದ ಆಳುತ್ತಲಿದ್ದ ದಂಡನಾಯಕ ತಿಕಣ್ಣ ಮೊದಲಾಗಿ ಲೆಂಕಸಾಸಿರ್ವರು ಅಗ್ರಹಾರಮೋರಿಂಗೆಱೆಯಲ್ಲಿ ಇಪ್ಪತ್ತುನಾಲ್ವರಿಗೆ ಸತ್ರವನ್ನೂ ನೊಳಂಬೇಶ್ವರವನ್ನೂ ತಮ್ಮ ಹೆಸರ ಲೆಂಕೇಶ್ವರವನ್ನೂ ಮಾಡಿಸಿ ದತ್ತಿಗಳನ್ನು ಕೊಟ್ಟಂತೆ ಈ ಶಾಸನದಲ್ಲಿ ಹೇಳಿದೆ.

ಶಾಸನದ ಕೊನೆಯಲ್ಲಿಯ "ಶ್ರೀಮದಣ್ಣಿಗೆಱೆಯ ನಗರೇಶ್ವರ[ದ] ವಿದ್ಯಾಭರಣಜೀಯ . . ಗಂ ನಾಗಮಯ್ಯಂ ಬರೆದಂ" ಎಂಬ ಗದ್ಯದಿಂದ ಶಾಸನಕವಿ ನಾಗಮಯ್ಯನು ಅಣ್ಣಿಗೆರೆಯ ನಗರೇಶ್ವರದ ಸ್ಥಾನಾಚಾರ್ಯನಾಗಿದ್ದ ವಿದ್ಯಾಭರಣಜೀಯರ [ಮ]ಗನೆಂದು ತಿಳಿಯುವುದು.

ಆ ಶಾಸನದೊಳಗಣ ಆ ಎರಡು ಪದ್ಯಗಳು :

ನುಡಿವುದು ನನ್ನಿ ಮಾಡುವುದು ಕೀರ್ತನಮೀವುದೆ ಸದ್ವಿನೋದಮೊ-
ಯ್ಕನೆ ಮಱೆವೊಕ್ಕರನ್ನೆಱೆಯೆ ಕಾವ ಗುಣಂ ಬೆಸನಂ ಮಹಾಜಿಯೊಳ್
ಸೆಡೆಯದುದುಗ್ಗಿಯೆಂದು ನುಡಿವೀ ನುಡಿ ಲೆಂಕರೊಳಾವ ಕಾಲಮುಂ
ನಡೆವುದು ಪಂಡಿತರ್ವೊಗಳೆ ಭೇರಿಯ ಗೋಸನೆ ಭೂತಳಾಗ್ರದೊಳ್ ||

---

1 South Ind ins Ins. Vol. IX, Part I, Gen, No. 101.

ವಾರಿಧಿಪರಿವೃತಧಾತ್ರೀ-
ನಾರಿಯ ವದನದವೊಲೆಸೆವ ಕಿವಗಳಿನಾಡೊಳ್
ಮೋರಿಂಗೆಱೆ ತಿಳಕಾಳಂ-
ಕಾರಮನನುಕರಿಪುದೆನೆ ಜನಂ ಬಣ್ಣಿಸದೇಂ ||

ಒಂದು ತುಣುಕು ಗದ್ಯ :

" ಅಂತೆನಿಸಿದಗ್ರಹಾರಂ ಮೋರಿಂಗೆಱೆಯೊಳ್ ಶ್ರೀಮದುದಯಾದಿತ್ಯದೇವಂಗೆ ಪರೋಕ್ಷವಿನೆಯವಿಪ್ಪತ್ತನಾಲ್ವರ್ಗೆ ಸತ್ರವುಮಂ ಸೊಳಂಬೇಶ್ವರಮುಮಂ ಮಾಡಿಸಿ ತಮ್ಮ ಪೆಸರ ಲೆಂಕೇಶ್ವರಮುಂ ಮಾಡಿಸಿ ದೇವರುಪಭೋಗಕ್ಕ[ಂ*] ಪಾದಮೂಲಪರಿವಾರಕ್ಕ[ಂ*] ಮಠದ ವಿದ್ಯಾದಾಂಕ್ಕವೆಂದರಸರ್ಗೆ ಬಿನ್ನಪಂಗೆಯ್ದುಂ ಸವಂಟಿಯ ಪಾಳಂ ಪಡೆದದಕ್ಕೆ ಶಿವಪುರಮೆಂದು ಪೆಸರಿಟು ಆರಸರ್ದಾಳಿಕ್ರಮದೊಳ್ ಶಿವಾರ್ಪಣಪಿಡಿದು ಮಗುಳೆ ಬಂದು ಪೂವಿನಪಡಂಗಿಲೆಯಪ್ಪ(ಪ)ಯಣ ಬೀಡಿನೊಳ್ —

## ೨೨. ನಾಗವಾರ

(೧೦೪೭)

ಬಳ್ಳಾರಿ ಜಿಲ್ಲೆಯ ಹಡಗಲಿ ತಾಲೂಕಿನ ಮೈಲಾರ ಎಂಬ ಗ್ರಾಮದಲ್ಲಿ ಸೋಮೇಶ್ವರ ದೇವಾಲಯದ ಹೆಬ್ಬಾಗಿಲ ಬಳಿ ನಿಂತಿರುವ ಶಾಸನದ ಕಲ್ಲು[1] ಶಕವರುಷ ೯೬೮ನೆಯ ವ್ಯಯಸಂವತ್ಸರದ ಫಾಲ್ಗುಣ ಶುದ್ಧ ತದಿಗೆಯಂದು, ಒಂಬತ್ತು ಗ್ರಹಗಳು ಹನ್ನೊಂದನೆಯ ಸ್ಥಾನದಲ್ಲಿ ಒಟ್ಟೈಯಿಸಿದ ಶುಭ. ಮುಹೂರ್ತದಲ್ಲಿ ಹೆಗ್ಗಡೆ ಕಾಳಿದಾಸಯ್ಯನು ದೇವಸ್ಥಾನಗಳಿಗೆ ಭೂದಾನ ಮಾಡಿದುದನ್ನು ತಿಳಿಸುತ್ತಿದೆ. ಶಾಸನದ ಕೊನೆಕೊನೆಯಲ್ಲಿ ಕೆಲವೊಂದು ದಂಡಗಳಿಂದ ಬರುವ ಹಣವನ್ನು ಕೆರೆಗಾಗಿ ಬಿಟ್ಟಂತೆ ಹೇಳಿದೆ.

ಶಾಸನದ ಕೊನೆಯಲ್ಲಿರುವ ಒಂದು ಕಂದಪದ್ಯ ಶಾಸನಕಾವ್ಯದ ಕರ್ತೃವಿನ ಹಾಗೂ ಅದರ ಬರೆಹಗಾರನ ಹೆಸರುಗಳನ್ನು ಹೇಳುವುದು: ಇಬ್ಬರೂ ಒಂದೇ ಹೆಸರಿನವರಾಗಿದ್ದಾರೆ:

ಎಳೆಗೆಸೆಯೆ ಕಾಳಿಗಾಂಕನ
ಕುಳಮಿದೊ ಕೃತಿ ನೆಗಳೆ ನಾಗವಾರಂ ಪೇೞ್ದಂ
ಶಿಳಶಾಸನದೊಳು ಮನುಮುನಿ
ಗಳ ವಾಕ್ಯಮನಱಿಯೆ ನಾಗ[ವ*]ಮ್ಮ[ರ್ಂ*]ಬರೆದಂ ||

ಬರೆಹಗಾರನ ಹೆಸರು ನಾಗವರ್ಮಂ ಎಂಬುದು ಛಂದೋದೋಷನಿವಾರಣೆಗಾಗಿ ನಾನು ತಿದ್ದಿದ್ದು: ಹೆಸರು ಇದ್ದುದೂ ಅದೇ ಎಂದು ತೋರುತ್ತದೆ. ಜನರ ವಾಡಿಕೆಯಲ್ಲಿ ಅವನನ್ನು 'ನಾಗಮ್ಮ' ಎಂದೇ ಕರೆಯುತ್ತಿರಬಹುದು. ಅಂತೆಯೇ, ಬರೆಯುವ ಓಘದಲ್ಲಿ ಶುದ್ಧರೂಪ ಮರೆಯಲ್ಲುಳಿದು ಕರೆಹೆಸರೇ ಬರೆವಣಿಗೆಯಲ್ಲಿ ಬಂದುಬಿಟ್ಟಿದೆ.

ಒಂದೇ ಕಲ್ಲಲ್ಲಿ ಎರಡು ಶಾಸನಗಳನ್ನು ಕೆತ್ತಲಾಗಿದ್ದು, ಎರಡನೆಯದರ ಮುಕ್ಕಾಲು ಮೂರುವೀಸಪಾಲು ಬರೆಹ ಕೆಟ್ಟುಹೋಗಿದೆ. ಚೆನ್ನಾಗಿ ಉಳಿ

1 South Ind. Ins. Vol. IX, Part I, Gen. Nos. 102 & 103.

ದಿರುವ ೧೦-೧೫ ಸಾಲುಗಳಿಂದ ಶ್ರೀ ಮಣಸ ಬರ್ಮದೇವಯ್ಯನ ಮಗ ಕಾಳಿ ದಾಸನೆಂಬವನು ದಾನ ಕೊಟ್ಟಂತೆ ತಿಳಿದುಬರುತ್ತದೆ. ಅದರ ಕೊನೆಯಲ್ಲಿರುವ ನಷ್ಟಪ್ರಾಯ ಕಂದಪದ್ಯದಲ್ಲಿ ಬರೆದವನ ಹೆಸರು ನಾಗವರ್ಮ ಎಂದು ಸ್ಪಷ್ಟ ವಾಗಿದೆ. ಎರಡರ ಬರೆಹಗಾರನೂ ಒಬ್ಬನೇ ಆಗಿರುವಾಗ ಕವಿಯೂ ಒಬ್ಬನೇ-ನಾಗವಾರನೇ-ಆಗಿರಬೇಕೆಂದು ತಿಳಿದರೆ ತಪ್ಪೇನಾಗಲಿಕ್ಕಿಲ್ಲ. ಆ ಕಂದಪದ್ಯ :

ಪಸರಿಸಿದ ಕೀರ್ತಿಧರ್ಮಂ-
ಗೆಸೆದಿರೆ . ಪತಿ . ಬಿಟ್ಟ ಮೇದಿನಿ ನೆಗಳಲ್
ಸಸಿಸೂರ್ಯರೊಸೆದು ನಿಲಲಿವ
. . . ಯಿಂತಱಿಯೆ ನಾಗವರ್ಮಂ ಬರೆದ ||

ಈ ಶಾಸನಗಲ್ಲಮೇಲಣ ಮೊದಲ ಭಾಗದಲ್ಲಿಯ ಕೆಲವು ಪದ್ಯಗಳನ್ನು ಇಲ್ಲಿ ಕೊಟ್ಟಿದೆ :

ಅಱಿದಾಗಮೋಕ್ತಿಯಿಂದಂ
ನಿಱಿಸಿ ಶಿವಜ್ಯೋತಿಯಂ ಸ್ವಚಿತ್ತದೆ ಗತಿಯಂ
ಮಱಿಯದೆ ಸಚ್ಚಾರಿತ್ರದೆ
ಕುಱುವತ್ತಿಯು ಚಿಲ್ಲುಕಾರ್ಯಮುನಿ ಮಸುಚರಿತಂ ||
ಬಯ್ದಂಗೆ ಪಣಮುವೊಂದುಂ
ಪೊಯ್ದಂಗಾಱು ಪಣಮಿಱಿಯೆ ಪನ್ನೆರಡುಪಣಂ
ಪಾಯ್ದಱದೆ ಸುರಿಗೆಗಿರ್ತಿರ-
ದೆಯ್ದಿದವಂಗೆಂಟು ಪಣಮೆ ದಂಡಂ ನಿರುತಂ ||
ಆಣೆಯನೆ ಮಿಕ್ಕು ಪೋದಡೆ
ಮಾಣದೆ ಕೊಟ್ಟಿಪಡು ಪಣಮಿವಂ ಕೆಱಿಗಿತ್ತಂ
ಕ್ಷೋಣಿಪತಿ ಮಿಕ್ಕದಂಡಂ
ಜಾಣೆನಲರಸಿಂಗಿದೂರ್ಗೆ ಮಾಡಿದ ಸಮೆಯಂ ||

# ೨೩. ರಾಜಮಲ್ಲದೇವ

( ೧೦೫೦ )

ಶಿವಮೊಗ್ಗೆ ಜಿಲ್ಲೆಯ ನಗರ ತಾಲೂಕಿನ ಹುಂಚಗ್ರಾಮದ ಕ್ರಿ. ಶ. ೧೦೭೭ರ ಜೈನಶಾಸನವು[1] ರಾಜಮಲ್ಲದೇವ ಎಂಬವನನ್ನು ಅತ್ಯಂತ ಶ್ರೇಷ್ಠನಾದ ಮಹಾಕವಿಯೆಂದು ಬಾಯ್ತುಂಬ ಹೊಗಳುತ್ತದೆ. ಈತನು ಬೂತುಗ ಪೆರ್ಮಾನಡಿಯ ಮಗನು. ಈತನ ತಾಯಿ ರೇವಕ್ಕ. ಮರುಳದೇವ, ಗುತ್ತಿಯ ಗಂಗನೆಂದು ಹೆಸರಾದ ಮಾರಸಿಂಹ ಎಂಬವರು ರಾಜಮಲ್ಲನ ಅಣ್ಣಂದಿರು; ಗೋವಿಂದರ, ಅರುಮುಳಿ ಎಂಬವರು ತಮ್ಮಂದಿರು. ಗಂಗ ಅರಸುಮನೆತನದವರೊಡನೆ ಇವನ ಮನೆತನದ ಶರೀರಸಂಬಂಧ ಬೆಳೆದಿತ್ತು; ರಾಜಮಲ್ಲನ ದೊಡ್ಡಪ್ಪನಿಗೆ ಗಂಗಾನ್ವಯದ ಹೆಣ್ಣು ಕೊಟ್ಟಿತ್ತು. ಕನಕಸೇನಭಟ್ಟಾರಕ ಎಂಬವನು ಈತನ ಗುರು.

ರಾಜಮಲ್ಲನನ್ನು ಕೊನೆದು ಕೊಂಡಾಡುವ ಹುಂಚಶಾಸನದ ಕಂದ ಪದ್ಯವಿದು :

ಶ್ರೀರಾಜಮಲ್ಲದೇವಂ
ಭಾರವಿ ಕೇಯೂರ ರಾಜಶೇಖರನಾತಂ
ಭಾರವಿ ಸಾಕ್ಷಾದ್ಬಾಣ ಮ
ಯೂರಂ ವಾಲ್ಮೀಕಿ ಕಾಳಿದಾಸಂ ವ್ಯಾಸಂ ||

ಈ ಪರಿಯಾಗಿ ಪ್ರಶಂಸಿತನಾದ ರಾಜಮಲ್ಲನು ಒಂದಾದರೂ ಕಾವ್ಯಕೃತಿಯನ್ನು—ಶಾಸನಕಾವ್ಯಕರ್ತೃವಿನ ದೃಷ್ಟಿಯಿಂದಲಾದರೂ ಅತ್ಯಂತ ಶ್ರೇಷ್ಠವಾದ ಕಾವ್ಯವನ್ನು—ರಚಿಸದೆ ಇರಲಿಕ್ಕಿಲ್ಲ—ಅದೂ ಮಹಾಕಾವ್ಯವೇ ಆಗಿರಬೇಕು—ಎಂದೆನಿಸುತ್ತದೆ. ಆದರೆ ಇವನ ಹೆಸರಿನ ಯಾವ ಕಾವ್ಯವೂ ಇದುವರೆಗೆ ಉಪಲಬ್ಧವಿಲ್ಲ.

---

1. Epi. Car. Vol. VIII, Part II ( Nagar 35 )

## ೨೪. ಜಿನವರ್ಮ ಪಂಡಿತ

(೧೦೫೦)

ಕೊಕಟನೂರು ಬೆಳಗಾವಿ ಜಿಲ್ಲೆಯ ಅಥಣಿ ತಾಲೂಕಿನ ಒಂದು ಗ್ರಾಮ. ಅಲ್ಲಿಯ ಚಾಳುಕ್ಯ ತ್ರೈಲೋಕ್ಯಮಲ್ಲನ ಕಾಲದ ಕ್ರಿ. ವ. ೧೦೫೮ರ ಶಾಸನ ವೊಂದನ್ನು[1] ಜಿನವರ್ಮಪಂಡಿತನು ಮಂಡಳೇಶ್ವರನಾದ ಜೋಗಭೂಪನ ಹೇಳಿಕೆಯ ಮೇರೆಗೆ ರಚಿಸಿದ್ದಾನೆ. ಅದನ್ನು ತಿಳಿಸುವ ಶಾಸನಪದ್ಯವಿದು :

ಜನಿತೋತ್ಸಾಹದ ಮಂಡಳೇಶತಿಳಕಂ ಶ್ರೀಜೋಗಭೂಪಂ ಜಗ
ಜ್ಜನ ಚಿಂತಾಮಣಿ ತಾನಿದಂ ಬೆಸಸಲೀ ತ್ರೈಮೂರ್ತಿದೇವರ್ಗೆಶಾ
ಸನಮಂ ಶಾಸನಮಾಗಲೆಯ್ದೆ ಬರೆದಂ ವಿದ್ವಜ್ಜನಾಂಭೋಜಿನೀ
ವನಹಂಸಂ ಜಿನವರ್ಮಪಂಡಿತ-ನಿಜಾಭಾಸ್ವದ್ಯಶೋಮಂಡಿತಂ ||

ಇದರಿಂದ ಕವಿ ಜಿನವರ್ಮಪಂಡಿತನೆಂಬ ಹೆಸರು ಮಾತ್ರ ಗೊತ್ತಾಗುತ್ತದೆ. ಅವನು ವಿದ್ವಾಂಸನಾಗಿದ್ದನೆಂದು ವರ್ಣನೆ ತಿಳಿಸುತ್ತದೆ.

ಜೋಗಭೂಪನೂ ಅವನ ಹೆಂಡತಿ ಪೊಲ್ಲಿಕಬ್ಬೆಯೂ ಕೊರ್ಗಟನೂರ ತ್ರೈಪುರುಷದೇವರ ಪೂಜಾರ್ಥವಾಗಿ, ಅಲ್ಲಿಯ ಶಾಲೆಯ ಉಪಾಧ್ಯಾಯ ಛಾತ್ರಾದಿಗಳ ಊಟ-ಉಡಿಗೆಗಾಗಿ ಜನ್ನವಾಡವನ್ನು ಧಾರಾಪೂರ್ವಕವಾಗಿ ಬಿಟ್ಟುದನ್ನು ಈ ಶಾಸನವು ಉಲ್ಲೇಖಿಸುತ್ತದೆ. ಅಲ್ಲಲ್ಲಿ ಬಹಳವಾಗಿ ನಶಿಸಿ ರುವ ಈ ಶಾಸನದಲ್ಲಿ ೧೭ ಕನ್ನಡ ಪದ್ಯಗಳಿವೆ. ಆರಂಭದಲ್ಲಿ ಹರಿ-ಹರ-ಹಿರಣ್ಯಗರ್ಭ (ತ್ರೈಮೂರ್ತಿದೇವ)ರ ಸ್ತುತಿಯ ಒಂದು ಸಂಸ್ಕೃತ ಶ್ಲೋಕವೂ ಇದೆ. ಅದರಲ್ಲಿಯ ಕೆಲವು ಪದ್ಯಗಳನ್ನು ಇಲ್ಲಿ ಎತ್ತಿ ಕೊಡ ಲಾಗಿದೆ.

ಅದಟಂ ಪಾಂಡ್ಯನ ಮೃತ್ಯುವಂ ಮಟಿದನಂ ಚೇರಮ್ಮ[ನಿಲ್ಪಂ] ಕಡ
ಲ್ಜಿದನಾ ಸಿಂಹಳನಂ [ತಡಂ ಕವಿದನಂ] ಕಾಂಭೋಜನಂ ಸೂಜೆಮಾ

---

1 ಕರ್ನಾಟಕ ವಿಶ್ವವಿದ್ಯಾಲಯದ 'ಕರ್ನಾಟಕ ಭಾರತಿ' ನವೆಂಬರ್ ೧೯೭೦. ಶಾಸನಸಂಪಾದಕರು : ಶ್ರೀ ಆರ್. ಎನ್. ಗುರವ.

ಡಿದನಂ ಕ್ಷತ್ರಿಯ ಕಾಳರಾತ್ರಿಯೆನಿಸಿರ್ದಾ ಚೋಳನಂ ದ್ವಂದ್ವಯು
ದ್ಧದೊಳಾಂತಿಕ್ಕಿದ ಜೆಟ್ಟಿಗರ್ ಜಗದೊಳಾರ್ ತ್ರೈಳೋಕ್ಯಮಲ್ಲಂಬರಂ ||

ತತ್ಪಾದಪದ್ಮೋಪಜೀವಿ

ಜಳಧಿಪ್ರೋದ್ಭೂತ — — ⏑⏑⏑⏑⏑⏑ — — ⏑ — — ⏑ ಳೋರ್ವೀ
ತಳಮಂ ತ್ರೈಳೋಕ್ಯಮಲ್ಲಪ್ರಿಥುವಿಪತಿಗೆ ನಿಷ್ಕಂಟಕಂ ಮಾಡಿ ಬಾಹಾ
ಬಳದಿಂದಂ [— ⏑] ಕೀರ್ತಿವಧು ⏑⏑⏑ — — ⏑ ವಿದ್ವಿಷ್ಟಭೂಭೃ
ತ್ಕುಳಕಾಳಂ ಮಂಡಳೇಶಾಗ್ರಣಿ ವಿಜಯವಧೂ ವಲ್ಲಭಂ ಜೋಗಭೂಪಂ ||

ಆತನ ಪುಣ್ಯವತಿಯ ಭಾಗ್ಯದ ಸೌಭಾಗ್ಯದ [ಕಾ]ಂತಿಯುದಗುಂತಿಯಂ ಪೊಗಳ್ವಡೆ

ಜನಕಜೆ ಪಾಟೆ ಹೈಮವತಿ— ⏑⏑ ರೋಹಿಣಿ ತತ್ಸರೂಪೆ ವಾ
ಗ್ವನಿತೆ ಸಮಂ ತಿಳೋತ್ತಮೆ ಸಮಾನಮರುಂಧತಿ ಮಿಕ್ಕಪೋಲ್ವೆ ಗೋ
ಮಿನಿ ದೊರೆ ಸತ್ಯಭಾಮೆ ಸರಿ ರೇಣುಕಿ — ⏑⏑ ಮನ್ಮಥಪ್ರಿಯಾಂ
[ಗನೆ ದೊರೆಯೆಂಬುದೆಂ]ಬುದು ಪೆಱದೊರೆಯೆಂಬುದೆ
ಪೊಲ್ಲಿಕಬ್ಬೆಯೊಳ್ ||

# ೨೫. ದಯಾಪಾಳದೇವ

( ೧೦೫೦ )

ಈತನೊಬ್ಬ ವ್ಯಾಕರಣಶಾಸ್ತ್ರದ ಗ್ರಂಥಕರ್ತನೆಂಬ ಉಲ್ಲೇಖ ಮೇಲೆ ಹೇಳಿದ ಹುಂಚಶಾಸನ ( ನಗರ ೩೫ ) ದಲ್ಲಿ ಸಿಕ್ಕುತ್ತದೆ. ಅದು ಇಂತಿದೆ:

ರಾಜಮಲ್ಲದೇವಂಗೆ ಗುರುಗಳೆನಿಸಿದ ಕನಕಸೇನಭಟ್ಟಾರಕರವರ ಶಿಷ್ಯರ್ ಶಬ್ದಾನುಶಾಸನಕ್ಕೆ ಪ್ರಕ್ರಿಯೆಯೆಂದು ರೂಪಸಿದ್ಧಿಯಂ ಮಾಡಿದ ದಯಾಪಾಳದೇವರುಂ –

# ೨೬. ನಯಸೇನಸೂರಿ

( ೧೦೫೪-೮೧ )

ಚಾಳುಕ್ಯ ಮೊದಲನೆಯ ಸೋಮೇಶ್ವರನು ಆಳುತ್ತಿದ್ದ ಕಾಲ. ಧಾರವಾಡ ಜಿಲ್ಲೆಯ ಗದುಗು ತಾಲೂಕಿನ ಮುಳುಗುಂದ ಗ್ರಾಮದಲ್ಲಿ ಈ ನಯಸೇನಸೂರಿ ಎಂಬ ಘನಪಂಡಿತನು ಆಗ ಬಾಳಿಕೊಂಡಿದ್ದನು. ಕ್ರಿ. ಶ. ೧೦೫೩ರಲ್ಲಿ ಕಂಡರಿಸಲಾದ ಆ ಊರ ಒಂದು ಶಿಲಾಶಾಸನದಲ್ಲಿ[1] ಈತನನ್ನು ಪ್ರಾಮುಖ್ಯವಾಗಿ ಬಣ್ಣಿಸಲಾಗಿದೆ. ಈತನು ವ್ಯಾಕರಣವಿಷಯದಲ್ಲಿ ಎತ್ತಿದ ಕೈ ಆಗಿದ್ದನು. ಆ ವರ್ಣನೆಯಲ್ಲಿ ಬಂದಿರುವ,

ನಿನಗೇನೆಂಬೆನೊ ಶಾಕಟಾಯ ಮುನೀಶಂ ತಾನೆ ಶಬ್ದಾನುಶಾ-
ಸನದೊಳ್ಪಾಣಿನಿ ಪಾಣಿನೀಯದೊಳೆ ಚಂದ್ರಂ ಚಾಂದ್ರದೊಳ್ತಜ್ಜಿನೇಂ-
ದ್ರನೆ ಜೈನೇಂದ್ರದೊಳಾ ಕುಮಾರನೆ ಗಡಂ ಕೌಮಾರದೊಳ್ಪೋಲ್ವರೆಂ-
ತೆನೆ ಪೋಲರ್ನಯಸೇನಪಂಡಿತರೊಳನ್ಯರ್ವಾದಿವೀತೋರ್ವಿಯೊಳ್ ||

ಎಂಬ ಪದ್ಯದಲ್ಲಿ ಹೇಳಿರುವಂತೆ, ಪ್ರಾಚೀನ ವ್ಯಾಕರಣಶಾಸ್ತ್ರಗಳನ್ನೆಲ್ಲ ಆತ್ಮಸಾತ್ ಮಾಡಿಕೊಂಡು ಅವುಗಳ ಕರ್ತೃಗಳಷ್ಟೇ ಜ್ಞಾನಸಿದ್ಧಿಯನ್ನು ಪಡೆಕೊಂಡವನಾಗಿ, 'ಸಮಸ್ತ ಶಬ್ದಶಾಸ್ತ್ರಪಾರಗನ್ನಯಸೇನ ಪಂಡಿತದೇವರ್' ಎಂಬುದಾಗಿ ಆ ಕಾಲದಲ್ಲಿ ಪ್ರಖ್ಯಾತನಾಗಿದ್ದನು.

ಈ ನಯಸೇನಪಂಡಿತನ ವಿದ್ವತ್ತ್ವದ ಪ್ರಭಾವ ಮುಳುಗುಂದದ ಸುತ್ತುಮುತ್ತಲಂತೂ ಸರಿ, ದೂರದ ವರೆಗೂ ಹಬ್ಬಿದ್ದಿತು. ಶ್ರೀಮದ್ದಂಡನಾಯಕ ಬಲದೇವಯ್ಯಂಗಳು ಈತನ ಶಿಷ್ಯರಾಗಿದ್ದರೆಂದು ಸೊರಟೂರ ಶಾಸನವು (ಕ್ರಿ. ಶ. ೧೦೭೨) ತಿಳಿಸುತ್ತದೆ. ಲಕ್ಷ್ಮೇಶ್ವರದ ಕ್ರಿ. ಶ. ೧೦೮೧ ರ ಶಿಲಾಶಾಸನವೊಂದರಲ್ಲಿ[2] ಈ ಪಂಡಿತೋತ್ತಮನ ಕೀರ್ತಿ ದಿಗಂತದಲ್ಲಿ ಹೇಗೆ ದುಮುದುಮಿಸುತ್ತಿದ್ದಿತೆಂಬುದನ್ನು ಬಹು ಮನೋಜ್ಞವಾದ ಉತ್ಪ್ರೇಕ್ಷೆಯಿಂದ

---

1 Epi. Ind. Vol. XVI Page 51.
2 Epi. Ind. Vol. XVI Page 59.

ಬಣ್ಣಿಸಲಾಗಿದೆ. ಮುಳುಗುಂದ ಶಾಸನದ ಮೇಲಣ ಪದ್ಯವೂ ಅಲ್ಲದೆ ಈ ಇನ್ನೊಂದು ಪದ್ಯವೂ ಲಕ್ಷ್ಮೇಶ್ವರದ ಶಾಸನದಲ್ಲಿದೆ:

ಸರಸತಿಯಂ ಮನೋಮುದದೆ ತಾಳ್ದಿದನೆನ್ನ ನವಜ್ಞೆಗೆಯ್ದನಾ-
ನಿರೆನವಳಿರ್ಕೆ ಚೀಃ ಸವತಿಯೊಳ್ಪುದುವಾಳ್ವುದು ಕಷ್ಟವೆಂದು ನಿ-
ಷ್ಠುರವಚನಂಗಳಂ ನುಡಿದು ದಿಕ್ಕರಿಯಂ ಪರಿದೇಱ ಕೀರ್ತಿ ತಾಂ
ಪುರುಡಿಸಿ ಪೂಜಿಪಳ್ವರತಪೋನಿಧಿಯಂ ನಯಸೇನಸೂರಿಯಂ ||

ಇದರಿಂದ ಈ ಮಹಾವಿದ್ವಾಂಸನ ಶಿಷ್ಯರು, ಇವನಿಂದ ಪ್ರಭಾವಿತ ರಾದವರು ಇದ್ದೆಡೆಗಳಲ್ಲೆಲ್ಲ ಈತನ ಪ್ರಶಂಸಾಪರ ಪದ್ಯಗಳು ಪ್ರಚುರ ವಾಗಿದ್ದುವೆಂದು ತೋರುತ್ತದೆ.

ಸಂಸ್ಕೃತದಲ್ಲಿ ಕನ್ನಡ ವ್ಯಾಕರಣಗ್ರಂಥ (ಭಾಷಾಭೂಷಣ) ವನ್ನು ಬರೆದ ೨ನೆಯ ನಾಗವರ್ಮನು (ಕ್ರಿ. ವ. ಸು. ೧೧೪೫) ಆ ಗ್ರಂಥದ ೭೪ನೆಯ ಸೂತ್ರದಲ್ಲಿ 'ದೀರ್ಘೋಕ್ತಿರ್ನಯಸೇನಸ್ಯ'—ನಯಸೇನನ ಮತ ದಂತೆ ಸಂಬೋಧನದ ಪ್ರತ್ಯಯವು ದೀರ್ಘಾಂತವಾಗಿರುವುದು—ಂದು ಹೇಳಿ ದ್ದಾನೆ. ಶಬ್ದಶಾಸ್ತ್ರಪಾರಾವಾರಪಾರಗನೆಂದು ಶಾಸನೋಕ್ತನಾಗಿರುವ ನಯ ಸೇನಸೂರಿಗೆ ಅನ್ವಯಿಸಿಯೇ ಈ ಸೂತ್ರವಿರಬೇಕೆಂದು ಹೇಳುವ ಅಗತ್ಯವಿಲ್ಲ. ಈ ನಯಸೇನನು ಕನ್ನಡ ವ್ಯಾಕರಣಗ್ರಂಥವನ್ನು ಬರೆದಿದ್ದನೆಂದು ಈ ಸೂತ್ರ ದಿಂದ ವ್ಯಕ್ತವಾಗುತ್ತದೆ. ಆದರೆ ಅಂತಹದೊಂದು ಗ್ರಂಥ ಉಪಲಬ್ಧವಿಲ್ಲ.

ಮುಳುಗುಂದ-ಲಕ್ಷ್ಮೇಶ್ವರ ಶಾಸನಗಳಲ್ಲಿ ಪ್ರಶಂಸಿತನಾಗಿರುವ ಈ ನಯಸೇನಸೂರಿ ಅಥವಾ ನಯಸೇನಪಂಡಿತನೇ 'ಧರ್ಮಾಮೃತ' ಕಾವ್ಯದ ಕರ್ತೃವೆಂಬುದಕ್ಕೆ ಆ ಕಾವ್ಯದಲ್ಲಿ ಪ್ರಮಾಣಭೂತ ಉಲ್ಲೇಖವುಂಟು.

ಮುಳುಗುಂದದೊಳಿರ್ದು ಮಹೋ-
ಜ್ಜ್ವಳಧರ್ಮಾಮೃತಮನೞ್ತಿಯಿಂದಂ ಭವ್ಯಾ-
ವಳಿಗಱಿಪಿದಂ ಧರಿತ್ರೀ-
ತಳಪೂಜ್ಯಂ ಸುಕವಿನಿಕರಪಿಕಮಾಕಂದಂ ||

ಎಂಬ ಪದ್ಯದಲ್ಲಿ ತಾನೀಕಾವ್ಯವನ್ನು ಮುಳುಗುಂದದಲ್ಲಿದ್ದು ಬರೆದೆ ನೆಂದು ಸ್ಪಷ್ಟಶಬ್ದಗಳಲ್ಲಿಯೇ ತಿಳಿಸಿದ್ದಾನೆ. ತಾನು ರಚಿಸಿದ ಧರ್ಮಾಮೃತ

ವನ್ನು ಅವನು ಅಲ್ಲಿಯ ಜೈನಸಂಘಕ್ಕೆ ಓದಿ ಹೇಳಿ ಶ್ರವಣಮಾಡಿಸುತ್ತಿದ್ದ ನೆಂಬೂದೂ ಇಲ್ಲಿ ಗೊತ್ತಾಗುತ್ತದೆ. ಈ ಗ್ರಂಥದ ರಚನೆ ಪೂರಯಿಸಿದ ಮಿತಿಯ ಉಲ್ಲೇಖವೂ ಒಂದು ಪದ್ಯದಲ್ಲಿದೆ.

'ಧರ್ಮಾಮೃತ'ದ ಕರ್ತೃ ಆತ್ಮಪರಿಚಯವನ್ನು ಒಂದು ಪದ್ಯದಲ್ಲಿ ಮಾಡಿಕೊಟ್ಟಿದ್ದಾನೆ.

ಮಾನಿತಶೀಲನಿಧಾನನ-
ನೂನಗುಣಂ ಸಕಳಭವ್ಯಜನಬುಧಜನಚಿ-
ತ್ತಾನಂದಕರಂ ಕೇಳ್ ನಯ
ಸೇನಬುಧಂ ಸುಕವಿನಿಕರಪಿಕಮಾಕಂದಂ ||

ಇಲ್ಲಿಯ 'ಮಾನಿತಶೀಲನಿಧಾನಂ' ಎಂಬುದು ಲಕ್ಷ್ಮೇಶ್ವರ ಶಾಸನ ದಲ್ಲಿಯ 'ವರತಪೋನಿಧಿ' ಎಂಬ ನುಡಿಗೆ ಸರಿಹೊಂದಿಕೆಯಾಗುವಂತಿದೆ.

ಗಿರಿ ಶಿಖಿ ವಾಯುಮಾರ್ಗ ಶಶಿಸಂಖ್ಯೆಯೊಳಾವಗಮೊಂದಿವರ್ತಿಸು-
ತ್ತಿರೆ ಶಕಕಾಲಮುನ್ನತಿಯ ನಂದನವತ್ಸರದೊಳ್

ಅದು ಪೂರ್ಣವಾಗಿದೆ. 'ಗಿರಿ' ಎಂಬುದು ಏಳರ ಸಂಕೇತಶಬ್ದವಾಗಿರು ವುದರಿಂದ ೧೦೩೭ನೆಯ ಶಕವರ್ಷವೆಂದು ಅರ್ಥವಾಗುತ್ತಿರುವುದಾದರೂ ನಂದನ ಸಂವತ್ಸರವು ೧೦೩೪ರಲ್ಲಿ ಬಂದಿರುವುದರಿಂದ 'ಗಿರಿ' ಎಂಬುದನ್ನು ನಾಲ್ಕರ ಸಂಜ್ಞೆಯಾಗಿ ನಯಸೇನನು ಪ್ರಯೋಗಿಸಿದ್ದಾನೆಂದು ತಿಳಿಯಬೇಕಾ ಗುವುದು. ಶ. ವ. ೧೦೩೪ರಲ್ಲಿ ಎಂದರೆ ಕ್ರಿ. ವ. ೧೧೧೨ರಲ್ಲಿ ಈ ಗ್ರಂಥವನ್ನು ಅವನು ಮುಗಿಸಿದ್ದಾನೆ. ಕ್ರಿ. ವ. ೧೦೫೩ರಲ್ಲಿ ಶಬ್ದಶಾಸ್ತ್ರವನ್ನು ಕರತಲಾ ಮಲಕವಾಗಿ ಮಾಡಿಕೊಂಡು ಸುಪ್ರಸಿದ್ಧನಾಗಿದ್ದ ನಯಸೇನನಿಗೆ ಧರ್ಮಾ- ಮೃತವನ್ನು ಮುಗಿಸಿದಾಗ ಸು. ೬೫ ವರುಷಗಳನ್ನು ದಾಟಿದ ವೃದ್ಧಾಪ್ಯ ವೆಂದು ತೋರುತ್ತದೆ.

ಧರ್ಮಾಮೃತದ ನಯಸೇನನು ತನ್ನ ಗುರುವಿನ ಹೆಸರನ್ನು ತನ್ನ ಗ್ರಂಥದಲ್ಲಿ ಹೇಳಿಕೊಂಡಿರದಿದ್ದರೂ ಇತರ ಪ್ರಮಾಣಗಳಿಂದ ನರೇಂದ್ರಸೇನರೇ ಆತನ ಗುರುವಿರಬಹುದೆಂದು ಬಿ. ಆರ್. ನರಸಿಂಹಾಚಾರ್ಯರು ಅಭಿಪ್ರಾಯ

ಪಟ್ಟಿದ್ದಾರೆ.[1] ಆದರೆ, ನಯಸೇನಸೂರಿ, ಮೂಲಸಂಘದ ಸೇನಗಣದ ಜೈನ ಯತಿ ನರೇಂದ್ರಸೇನ ತ್ರೈವಿದ್ಯರ ಅಗ್ರಶಿಷ್ಯನೆಂಬುದಕ್ಕೆ ಮೇಲೆ ಹೇಳಿದ ಲಕ್ಷ್ಮೇಶ್ವರದ ಕ್ರಿ. ವ. ೧೦೮೧ ರ ಶಾಸನದಲ್ಲಿ ಸ್ಪಷ್ಟವಾದ ಉಲ್ಲೇಖವಿದೆ. ಆ ಗುರು ಕೂಡ ಶಬ್ದಶಾಸ್ತ್ರಪಾರಂಗತನೆಂದು ಅಲ್ಲಿಯ

ಚಾಂದ್ರಂ ಕಾತಂತ್ರಂ ಜೈ-
ನೇಂದ್ರಂ ಶಬ್ದಾನುಶಾಸನಂ ಪಾಣಿನಿ ಮು-
ತ್ತೈಂದ್ರಂ ನರೇಂದ್ರಸೇನ ಮು-
ನೀಂದ್ರಂಗೇಕಾಕ್ಷರಂ ಪೆಱಂಗಿವು ಪೊಗ್ಗೇ ||

ಎಂಬ ಕಂದಪದ್ಯದಿಂದ ಗೊತ್ತಾಗುತ್ತದೆ.

ಅಂತೂ ಶಾಸನಗಳ ನಯಸೇನನೂ ಧರ್ಮಾಮೃತದ ನಯಸೇನನೂ ಅಭಿನ್ನರೆಂಬುದರಲ್ಲಿ ಸಂದೇಹವಿಲ್ಲ.

ಆ ಕಾಲದಲ್ಲಿ ಹೊಸಗನ್ನಡದಲ್ಲಿ ಕಾವ್ಯವನ್ನು ರಚಿಸುತ್ತೇನೆಂದು ಹೇಳಿ ಸಿಕ್ಕಾಪಟ್ಟೆ ಸಂಸ್ಕೃತವನ್ನು ಸೇರಿಸುವ ಪ್ರವೃತ್ತಿ ಕೆಲವು ಕವಿಗಳಲ್ಲಿ ಇತ್ತೆಂದು ತೋರುತ್ತದೆ. ಹಾಗೆ ಹದಗೆಡಿಸಬಾರದೆಂದು ನಯಸೇನ ತನ್ನ ಗ್ರಂಥದಲ್ಲಿ ಎರಡು ಪದ್ಯಗಳಲ್ಲಿ ಅವರನ್ನು ಖಂಡಿಸಿದ್ದಾನೆ :

ಪೊಸಗನ್ನಡದಿಂ ವ್ಯಾವ-
ರ್ಣಿಸುವೆಂ ಸತ್ಕೃತಿಯನೆಂದು ಕನ್ನಡಮಂ ಚಿಂ-
ತಿಸಿ ಕೂಡಲಾಱದಕ್ಕಟ
ಮಿಸುಕದ ಸಕ್ಕದಮನಿಕ್ಕುವವನುಂ ಕವಿಯೇ ||
ಸಕ್ಕದಮಂ ಪೇೞ್ವಡೆ ನೆಱೆ
ಸಕ್ಕದಮಂ ಪೇೞ್ಗೆ ಶುದ್ಧಕನ್ನಡದೊಳ್ ತಂ-
ದಿಕ್ಕುವುದೆ ಸಕ್ಕದಂಗಳ
ತಕ್ಕುದೆ ಬೆರಸಲ್ಕೆ ಘೃತಮುಮಂ ತೈಲಮುಮಂ ||

---

1 ಅವರ ಕರ್ಣಾಟಕ ಕವಿಚರಿತೆ, ಸಂ. ೧, ಪುಟ ೯೬ ರಲ್ಲಿ ಈ ಶಾಸನಗಳ ವಿಷಯವನ್ನೆತ್ತಿದ್ದರೂ ಕವಿ-ಕಾವ್ಯಗಳ ವಿವೇಚನೆಯನ್ನು ಸಮಗ್ರವಾಗಿ ಮಾಡಿದ್ದಾರೆ. ಅದನ್ನು ನೋಡಬೇಕು. ಇಲ್ಲಿ ನಾನು ಆ ವಿಷಯಕ್ಕೆ ಕೈಹಾಕಿಲ್ಲ.

# ೨೭. ಮಲ್ಲ
(೧೦೫೭)

ಇವನೊಬ್ಬ ಕನ್ನಡ ಶಾಸನಕವಿ. ಮೈಸೂರು ಜಿಲ್ಲೆಯ ಹೆಗ್ಗಡೆದೇವನ ಕೋಟೆ ತಾಲೂಕಿಗೆ ಒಳಪಟ್ಟಿರುವ ಬೆಳತೂರು ಎಂಬ ಗ್ರಾಮದಲ್ಲಿರುವ ಒಂದು ಮಹಾಸತಿ ಶಿಲಾಶಾಸನವನ್ನು ಈತ ರಚಿಸಿದ್ದಾನೆ. ಆ ಊರ ಮೂಡುದಿಕ್ಕಿನಲ್ಲಿರುವ ಅಡ್ಡಟ್ಟಿ ಹೊಲದಲ್ಲಿ ಈ ಮಾಸತಿ ಕಲ್ಲು ಬಿದ್ದುದು ಸಿಕ್ಕಿದೆ. ನಗುನಾಡ ಅಧಿಪತಿಯಾದ ರವಿಗ ಎಂಬಾತನ ಸುತೆಯೂ ನವಿಲೆ ನಾಡ ಅಧಿಪತಿಯ ಸತಿಯೂ ಆದ ದೇವಕಬ್ಬೆ ಎಂಬಾಕೆ, ತನ್ನ ಗಂಡ ಮಡಿದ ನೆಂಬ ಸುದ್ದಿಯ ಕೇಳಿ ದೇವದ್ವಿಜರಿಗೆ ವಿವಿಧ ದಾನಗಳನ್ನು ಕೊಟ್ಟು ಸತಿ ಹೋದ ಸಂಗತಿಯನ್ನು ಈ ಮಾಸತಿಗಲ್ಲಿನ ಕಾವ್ಯ ವಿಶದವಾಗಿ ತಿಳಿಸುತ್ತದೆ. ದೇವಕಬ್ಬೆಯ ವೀರಸತೀತ್ವವನ್ನು ಈ ಮಲ್ಲಕವಿ ಬಲು ಚೆನ್ನಾಗಿ ಚಿತ್ರಿಸಿದ್ದಾನೆ. ಬಂಧ, ಶಬ್ದಸಂಪತ್ತಿ, ಕಲ್ಪನಾವಿನ್ಯಾಸಗಳ ದೃಷ್ಟಿಯಿಂದ ಕಾವ್ಯ ಅಷ್ಟೊಂದು ಪ್ರೌಢವಲ್ಲವೆಂದು ಎನಿಸುವಂತಿದ್ದರೂ ಸಾರಲ್ಯವೇ ತನ್ನದೊಂದು ಸೊಬಗೆನಿಸಿಕೊಂಡು ನಿರಾಭರಣಸುಂದರವಾಗಿದೆ.

ದೇವಕಬ್ಬೆ ಅಗ್ನಿಕುಂಡವನ್ನು ಹೊಗುವ ಮುನ್ನ ಇತ್ತ ದಾನಗಳ ವಿಷಯವನ್ನು ಮಾತ್ರ ಚಿಕ್ಕ ಗದ್ಯದಲ್ಲಿ ಹೇಳಲಾಗಿದೆ; ಮಿಕ್ಕೆಲ್ಲವೂ ಪದ್ಯ ರೂಪದಲ್ಲಿದೆ. ಈ ಶಾಸನದ ಕಾಲ—ಚೋಳರಾಜೇಂದ್ರ ವರುಷ ೬ ನೆಯ, ಶಕವರುಷ ೯೭೯ನೆಯ ಹೇವಿಳಂಬಿ ಸಂವತ್ಸರ ಎಂಬುದನ್ನು ಕವಿ ಪದ್ಯ ದಲ್ಲಿಯೇ ನಿರೂಪಿಸಿದ್ದಾನೆ. ಕೆಳಗಣ ಪದ್ಯದಲ್ಲಿ ಶಾಸನಕವಿ ತನ್ನ ಹೆಸರನ್ನು ಹೇಳಿಕೊಂಡಿದ್ದಾನೆ:

ಮಱುಪರ ಚಕ್ರಂ ದ್ವಿಜರೊ-
ಱಿಮಱಿಯಿಲ್ಲೆನಿಪ ಕುಱಿಪಿನಾದಿತ್ಯಂ ಸಂ-
ದಱಿಕೆಯವಗಾದ ಮಲ್ಲಂ
ಜಱುಚದ ಕವಿರಾಜಬಾಂಧವಂ ಬರೆದನಿದಂ ||

ಇದರಿಂದ ಈತನು ಸಚ್ಛೀಲನಾದ ಬ್ರಾಹ್ಮಣನೆಂದೂ 'ಕವಿರಾಜ ಬಾಂಧವ' ಎಂಬ ಬಿರುದುಳ್ಳವನೆಂದೂ ತಿಳಿಯುತ್ತದೆ. ಮಲ್ಲನು ತನ್ನೀ ಶಾಸನಕಾವ್ಯದಲ್ಲಿ ಅಕ್ಷರವೃತ್ತ ಕಂದಗಳನ್ನೂ ಅಲ್ಲದೆ ಅಕ್ಕರ ಮತ್ತು ಲಲಿತ ವೃತ್ತಗಳೆಂಬ ಛಂದಃಪ್ರಕಾರಗಳನ್ನು ಬಳಸಿದ್ದಾನೆ. ಮಹಾಸತಿ ದೇಕಬ್ಬೆಯನ್ನು ವರ್ಣಿಸುವ ಅವನ ಸುಂದರವಾದ ಲಲಿತವೃತ್ತವಿದು:

ಶ್ರೀರಮಣಿ ಗೌರಿ ಶಚಿದಾರಿಣಿಯ ಪುತ್ರಿ ರತಿ
    ಭೂರಮಣಿಯಂದದ ಸುರೂಪವಜಿಪ್ಪೊಳ್ಪಾ-
ದಾರೆ ಜಯಧಾರೆ ಜಸಧಾರೆ ನಯಧಾರೆ ಭಯ-
    ಹಾರೆ ಪತಿಭಕ್ತಿ ಧೃತಶಕ್ತಿಯೆನೆ ಸಂದೀ
ವೀರನಿಧಿಯಂ ಚಲದ ವಾರಿನಿಧಿಯಂ ಗುಣದ
    ಚಾರುನಿಧಿಯಂ ನೆಗಳ್ದ ದೇಕಲೆಯನಿಂತೀ
ನಾರಿಜನರನ್ನಮಸದಾರೊ ಮಜಿವರ್ ಸಕಳ-
    ಧಾರಿಣಿಯೊಳಿಂತು ವರಕಾಂತಿ ದೊರೆಯಾವಳ್ ||

ಅಕ್ಷರವೃತ್ತವಾದ ಈ ಲಲಿತವೃತ್ತವೊಂದರಲ್ಲಿ ಎರಡು ಷಟ್ಪದಿಗಳು ಅಡಕವಾಗಿವೆ ಎಂಬುದನ್ನು ಅಲ್ಲಿಗಲ್ಲಿಗೆ ಅನುಪ್ರಾಸವನ್ನಿಟ್ಟು ಎದ್ದು ಕಾಣುವಂತೆ ಮಾಡಿರುವುದು ಗಮನಿಸುವ ಹಾಗಿದೆ. ರನ್ನನ ಗದಾಯುದ್ಧದಲ್ಲಿಯೂ ಇಂತಹ ಲಲಿತವೃತ್ತವಿರುವುದನ್ನೂ ಗಮನಿಸಬೇಕು.[1]

---

1 ರನ್ನ-ಮಲ್ಲರ ಲಲಿತವೃತ್ತಗಳ ಸಾಮ್ಯ ವೈಷಮ್ಯಗಳ ವಿಶೇಷ ವಿವೇಚನೆಗಾಗಿ 'ಜಯಂತಿ' ಮಾಸಪತ್ರಿಕೆಯ ೧೯೪೮ ಮಾರ್ಚ ತಿಂಗಳ ಸಂಚಿಕೆಯಲ್ಲಿ ಪ್ರಕಟವಾದ 'ರನ್ನನ ಲಲಿತವೃತ್ತ' ಎಂಬ ನನ್ನ ಲೇಖನವನ್ನು ನೋಡಬಹುದು.

## ೨೮. ಬರ್ಮದೇವ

( ೧೦೬೧ )

ಹರಪನಹಳ್ಳಿ ತಾಲೂಕಿನ ಹಿರೇಮುಗಳಗೇರಿ ಗ್ರಾಮದ ೧೯ ಸಾಲುಗಳ ಶಾಸನವು ಬಹಳವಾಗಿ ನಷ್ಟವಾಗಿದೆ.

'ಆಹಿಪತಿಕಂಕಣಂಗೆ ಕಲಿದೇವಸ್ವಯಂಭುಗೆ . . . ಕೊಟ್ಟನಾ
ಗ್ರಹ - - - - -'

ಎಂಬುದೊಂದೇ ವೃತ್ತಪದ್ಯವು ಅದರಲ್ಲಿರುವಂತೆ ಕಂಡುಬರುತ್ತದೆ. ಕೊನೆಯಲ್ಲಿ 'ಶ್ರೀ[ಕವಿ]ಮುಖದರ್ಪಣಂ ಬರ್ಮದೇವಂ ಬರೆದಂ' ಎಂದಿದೆ.

# ೨೯. ಬಸವಣಯ್ಯ

( ೧೦೬೨ )

ಧಾರವಾಡ ಜಿಲ್ಲೆಯ ಗದುಗು ತಾಲೂಕಿನ ಮುಳುಗುಂದ—ಧರ್ಮಾಮೃತದ ನಯಸೇನಸೂರಿಯ ಮುಳುಗುಂದ—ಗ್ರಾಮದಲ್ಲಿ ನಗರೇಶ್ವರ ದೇವಾಲಯವುಂಟು. ಆ ದೇಗುಲದ ಹಿಂಬದಿಯಲ್ಲಿ ಶಾಸನಶಿಲೆಯೊಂದುಂಟು. ಅದು ಹುಟ್ಟಿದ ಕಾಲ—ಶಕವರುಷ ೯೮೪ ರ ಪೌಷ್ಯ ಶುದ್ಧ ೫—ಚಾಳುಕ್ಯ ೧ನೆಯ ಸೋಮೇಶ್ವರ ಆಳುತ್ತಿದ್ದ ಕಾಲ.[1] ಈ ಶಾಸನವನ್ನು ರಚಿಸಿದವನು ಮನ್ನೆಯರ ಬಸವಣಯ್ಯನೆಂದು ಕೊನೆಯ ಕಂದ ಪದ್ಯದಿಂದ ತಿಳಿದು ಬರುವುದು :

ಅನುಪಮತರಾಕ್ಷರಂ ಬುಧ -  
ಜನಮುಂ ಜೀಯೆನಿಸೆ ಸಕಳವಿದ್ಯಾನಿಳಯಂ  
ಮನುಮುನಿ ಚರಿತ್ರನೀಶಾ-  
ಸನಮುಂ ಮನ್ನೆಯರ ಬಸವಣಯ್ಯಂ ಬರೆದಂ ||

ಬಸವಣಯ್ಯನು ಕವಿಯೆಂದು ಇಲ್ಲಿ ಸ್ಪಷ್ಟವಾಗಿ ಉಲ್ಲೇಖಿಸಿರದಿದ್ದರೂ ಇವನು 'ಸಕಳ ವಿದ್ಯಾನಿಳಯ'ನಾಗಿದ್ದುದರಿಂದ ಕವಿ ಇವನೇ ಎಂದು, ರಚಿಸಿದಂ ಎಂಬರ್ಥದಲ್ಲಿ ಬರೆದಂ ಎಂದಿದ್ದಾನೆಂದು ಊಹಿಸುತ್ತೇನೆ. ಈ ಕವಿ ಮುಳುಗುಂದ ಭಾಗದಲ್ಲಿ, ಸಂಭವತಃ ಮುಳುಗುಂದ ೧೨ಕ್ಕೆ ವಂಶ ಪರಂಪರೆಯಿಂದ ಮನ್ನೆಯನಾಗಿ ಆಳುತ್ತಿದ್ದನೆಂದು ತೋರುತ್ತದೆ. ತನ್ನ ಬರೆಹ ಜನ ಮೆಚ್ಚುವಂತಹ ಚೆಲುವಾದ ಬರೆಹ ಎಂದೂ ಕವಿ ಹೇಳಿಕೊಂಡಿದ್ದಾನೆ.

ಮೂನೂರ್ವರು ಸೆಟ್ಟಿಯರು, ಗಾವುಂಡರು, ನೂಱಪ್ಪದಿಂಬರು ಮಹಾಜನಗಳು, ಸಾಲಿಗರಯ್ವದಿಂಬರು, ತೆಲ್ಲಿಗರು ನೂಱಪ್ಪದಿಂಬರು,

---

1 Bom. Kar. Ins. Vol. I, Part I, Gen. No. 97.

ಮಾಲೆಗಾಜಿರಯ್ಯ ದಿಂಬರು, ಪಂಚಮಠಸ್ಥಾನ ಇವರುಗಳಿದ್ದು ( ಸಭೆಯಾಗಿ ನೆರೆದು ) ನಗರೇಶ್ವರದೇವಸ್ಥಾನದಲ್ಲಿ ನೆಲಸಿದ್ದ ತಪೋಧನರ ಹೊಟ್ಟೆ-ಬಟ್ಟೆಗಾಗಿ ಭೂಮಿಗಳನ್ನು ಬಿಟ್ಟ ಸಂಗತಿ ಇದರಲ್ಲಿ ಹೇಳಿದೆ.

ಶಾಸನವು ಗದ್ಯಪದ್ಯಾತ್ಮಕವಾದ ಕಾವ್ಯವಾಗಿದೆ. ಕಲ್ಲ ಬರೆಹ ಅಲ್ಲಲ್ಲಿ ಕೊಂಚ ಕೊಂಚ ತೊಡೆದುಹೋಗಿದೆ. ಶಾಸನದ ಸಾಲುಗಳು ೪೯. ಅದರಲ್ಲಿರುವ ಕನ್ನಡ ಪದ್ಯಗಳ ಸಂಖ್ಯೆ ೧೧. ಓದಲು ಸಾಧ್ಯವಾಗುವಂತೆ ನಶಿಸದೆ ಉಳಿದುಕೊಂಡಿರುವ ಭಾಗದಿಂದ ಎರಡು ಪದ್ಯಗಳನ್ನು ಆಯ್ದು ಇಲ್ಲಿ ಕೊಟ್ಟಿದೆ:

ಧಾರಣಹಾರಣಬ್ರತದೊಳಿಂತೊಡಲಂ [ಜಡೆ?]ಮಾಡಿ ನೈಷ್ಠಿಕಾ-
ಚಾರದೊಳೊಪ್ಪಿ ಕೂಡಿ ಶಿವಪೂಜನೆಯಂ ಬಲವಂದು ಮಾಡಿ ಸಂ-
ಸಾರಸುಖಕ್ಕೆ ದರ್ಪವಿಷಯಂಗಳನೇಳಿಸಿ ಕಾಡಿಯಾಡಿ ಕಾ-
ಮಾರಿಯನರ್ಚಿಸಲ್ಕೆ ನಲಿದಿರ್ಪ ಮುನೀಶ್ವರನೀ ಧ್ರುವೇಶ್ವರಂ ||

ಮುನಿಗಳೊಳಾ ಮಹಾಮುನಿ ಧ್ರುವೇಶ್ವರ ಪಂಡಿತರಂ ಜಗತ್ತ್ರಯಂ
ಪೊಗಳೆ ತಪಃಪ್ರಭಾವನಿಧಿ – ‿ ‿ – ದೊರೆ ಪದ್ಮಸಂಭವಂ
ದೊರೆ ಮುನಿಯಾ ವಶಿಷ್ಠಮುನಿಪಂ ಸಮನಾದನಗಸ್ತ್ಯನುತ್ತಮಂ
ಸರಿಯೆನೆ ಬಣ್ಣಿಸಲ್ ತ್ರಿಭುವನಂ ಪೊಗಳುತ್ತಿರೆ ಯಾಮುನೀಶನು-
ತ್ತಮನಿರೆ ಪೂಜ್ಯಮಾಗಿ ನಗರೇಶ್ವರದೀ ಮಠಮೊಪ್ಪಿ ತೋಱುಗುಂ ||

ಆ ಕಾಲದ ಕವಿಮಾರ್ಗದಲ್ಲಿ ಅನುಲ್ಲಂಘ್ಯವಾಗಿದ್ದ ಪ್ರಾಸಸಂಪ್ರದಾಯವನ್ನು ಇಲ್ಲಿಯ ಎರಡನೆಯ ಪದ್ಯದಲ್ಲಿ ಸಾಧಿಸಲಾರದೆ ಹೋಗಿರುವುದರಿಂದ, ಅದನ್ನು ಒಂದು ಪಙ್ಕ್ತಿಯಿಂದ ಹೆಚ್ಚಿಸಿರುವಲ್ಲಿ ಸಮರ್ಪಕಕಾರಣ ತೋರುವುದಿಲ್ಲವಾದುದರಿಂದ ಕವಿ ಅಷ್ಟೊಂದು ಅಭ್ಯಸ್ತನಲ್ಲವೆಂದು ತೋರುತ್ತದೆ.

# ೩೦. ನಾಲ್ವರು ಕಬ್ಬಿಗರು

( ೧೦೬೭ )

**ರಾಜವಲ್ಲಭ, ವಿವೇಕನಿಧಿ, ಚಂದ್ರಭಟ್ಟ, ಬಡಭದ್ರ**

ಒಂದೇ ಶಾಸನವು ನಾಲ್ವರ ಕೈ ಹತ್ತಿ ಸಿದ್ಧವಾಗಿದ್ದುದರಿಂದ ಇವರೆಲ್ಲರನ್ನೂ ಒಟ್ಟಾಗಿಯೇ ವಿಚಾರಿಸಿಕೊಳ್ಳುವುದು ಕ್ರಮಪ್ರಾಪ್ತವಾಗಿದೆ. ಎಲ್ಲರಿಗೂ ಪ್ರಮಾಣಸಾಮಗ್ರಿ ಒಂದೇ ಶಾಸನ. ಯಾವೊಬ್ಬನಿಗೂ ಇತರತ್ರ ಆಧಾರ ಉಪಲಬ್ಧವಿಲ್ಲ. ವಲ್ಲಭ, ವಿವೇಕನಿಧಿ, ಚಂದ್ರಭಟ್ಟ, ಬಡಭದ್ರ ಈ ನಾಲ್ವರ ಪರಿಶ್ರಮದಿಂದ, ಧಾರವಾಡ ಜಿಲ್ಲೆಯ ಶಿಗ್ಗಾವಿ ತಾಲೂಕಿನ ಹೊಟ್ಟೂರು ಎಂಬ ಹಳ್ಳಿಯ ಕ್ರಿ. ವ. ೧೦೬೭ರ ಶಾಸನ[1] ರೂಪುಗೊಂಡಿದೆ. ಅದರ ಕೊನೆಯಲ್ಲಿರುವ ನಷ್ಟಪ್ರಾಯ ಪದ್ಯವೊಂದು ಈ ಮಾತನ್ನು ತಿಳಿಸುತ್ತದೆ:

ಸ್ಫುರಿತವಚೋವಿಳಾಸಿ ಚಡು(ಟು)ವಾಣಿಯ ಸತ್ಕವಿರಾಜವಲ್ಲಭಂ
ವಿರಚಿಸಿದಂ ವಿವೇಕನಿಧಿ ಪಟ್ಟ[ ಲ – ບ ບ – ບ – ]ಂಗಿಯಿಂ
ಬರೆದನಿದಂ ಸವಿಸ್ತರಿಸಿ ತಿರ್ದಿದ ವಾಕ್ಪತಿ ಚಂದ್ರಭಟ್ಟರುಂ
ಗುರು ಬಡಭದ್ರದೇವರುವಿದೇಂ ತ್ರಿಜಗದ್ಗುರುವಾಯ್ತೊ ಶಾಸನಂ ||

ಈ ಶಾಸನಕಾವ್ಯದ ಕರ್ತೃತ್ವದ ಶ್ರೇಯಸ್ಸಿನಲ್ಲಿ ಭಾಗಿಗಳಾದ ನಾಲ್ವರಲ್ಲಿ ವಿರಚಿಸಿದವನಾದ ಸ್ಫುರಿತವಚೋವಿಳಾಸಿ ಎನಿಸಿದ, ಸತ್ಕವಿ ರಾಜವಲ್ಲಭನಿಗೆ ಮುಕ್ಕಾಲು ಪಾಲಿನಷ್ಟು ಸಲ್ಲುತ್ತದೆಂದು ಹೇಳಬಹುದು. 'ವಿವೇಕನಿಧಿ' ಎನಿಸಿದ್ದ ಯಾವನೋ ಒಬ್ಬನು ಇದನ್ನು ಸವಿಸ್ತರಿಸಿ ಬರೆದನು. 'ವಾಕ್ಪತಿ' ಎಂಬ ಬಿರುದುಳ್ಳ ಚಂದ್ರಭಟ್ಟರೂ ಗುರುವಾದ ಬಡಭದ್ರದೇವರೂ ಅದನ್ನು ತಿದ್ದಿದರು. ಸವಿಸ್ತರಿಸಿ ಬರೆದವನು ತನ್ನ ಒಂದೆರಡಾದರೂ ಪದ್ಯಗಳನ್ನು ಸೇರಿಸಿರುವುದು ಸಹಜಸತ್ಯವಾದುದರಿಂದ ಉಳಿದ ಮೂವರ ಪೈಕಿ ವಿವೇಕನಿಧಿಗೆ ಶ್ರೇಯಸ್ಸಿನಲ್ಲಿ ಹೆಚ್ಚಿನ ಪಾಲನ್ನು ಕೊಡಬೇಕು. ಈ ನಾಲ್ವರೂ ಸಾಹಿತ್ಯತಜ್ಞತೆಯ ವಿಶೇಷಣಗಳಿಂದ ವಿಶೇಷಿತರಾಗಿದ್ದಾರೆ.

---

1 Epi. Ind. Vol. XVI, Page 80.

ಈ ಶಾಸನಶಿಲೆಯಲ್ಲಿ ೪೫ ಸಾಲುಗಳ ಬರೆಹವಿದೆ. ಆರಂಭದಲ್ಲಿ ಜಿನನ, ಶಂಭುವಿನ ಅಥವಾ ಬೇರೆ ಯಾವೊಂದು ದೇವರ ಸ್ತುತಿಪದ್ಯವಿಲ್ಲದೆ ಶಾಸನದ ಬರೆಹ ಆರಂಭವಾಗುತ್ತದೆ. ನೇರವಾಗಿ ಚಾಳುಕ್ಯ ಆಹವಮಲ್ಲ ದೇವನ ಪ್ರಶಸ್ತಿ ಮೊದಲಾಗಿ ಆತನ ಆಳಿಕೆಯ ಉಲ್ಲೇಖ ಬರುತ್ತದೆ. ಇದರ ಇನ್ನೊಂದು ವಿಶೇಷವೆಂದರೆ, ಚಕ್ರವರ್ತಿ ಮಹಾಮಂಡಳೇಶ್ವರ ಸಾಮಂತರು ಕೇವಲ ಸ್ವಪ್ರಶಸ್ತಿಯೊಂದಿಗೆ ಉಲ್ಲಿಖಿತರಾಗಿದ್ದಾರೆ: ಅವರ ಶೌರ್ಯಾದಿ ಗುಣಗಳನ್ನು ವರ್ಣಿಸುವ ಪದ್ಯಗಳಿಲ್ಲ. ಆ ಕಾಲದಲ್ಲಿ ಘಟಿಕಾಸ್ಥಾನವೆನಿಸಿದ್ದ ಪೊಟ್ಟಿಯೂರ (ಹೊಟ್ಟೂರ) ಗಾವುಂಡುಗೆಯ್ಯುತ್ತಿದ್ದ ಮಾರಗಾವುಂಡ, ಆತನ ಮಗ ಕೇಶಿಗಾವುಂಡ ಪದ್ಯಗಳಲ್ಲಿಯೂ ಗದ್ಯಗಳಲ್ಲಿಯೂ ವಿಶೇಷವಾಗಿ ವರ್ಣಿತರಾಗಿದ್ದಾರೆ: ಶಾಸನಕವಿಗಳ ಪ್ರೀತಿ, ಆದರ, ಅಭಿಮಾನಗಳೆಲ್ಲ, ತಮ್ಮೂರವರೇ ಆಗಿ, ಹಳ್ಳಿಯ ಬಾಳಿನಲ್ಲಿ ಹುದುವಾಗಿ ಬಾಳುವವರಾಗಿ, ಉತ್ತಮರೆನಿಸಿಕೊಂಡಿದ್ದ ಗಾವುಂಡರಲ್ಲಿ ಕೇಂದ್ರೀಕೃತವಾಗಿವೆ. ಅವರೀ ದೃಷ್ಟಿಕೋನ ಗಮನಾರ್ಹವಾದುದೇ ಸರಿ.

ಮಂಡಳೇಶ್ವರಾದಿಗಳು ನೆರೆದು ಕೇಶವದೇವರಿಂಗೆ ವೃತ್ತಿಗಳನ್ನೂ ಮಹಾಮಂಡಳೇಶ್ವರ ತೋಯಿಮದೇವನ ತಾಯಿ ಅಕ್ಕಾದೇವಿ ಎಂಬಾಕೆ 'ತಪೋನಿಯಮಜಪಸಮಾಧಿಶೀಲಸಂಪನ್ನೆಯರಪ್ಪ ತಪಸ್ವಿ ಗಂಗಿಕಬ್ಬೆಗಳಿಗೆ' ಮಠದ ವಿದ್ಯಾದಾನದ ಸಲುವಾಗಿ, ತನಗೆ ನಡೆಯುತ್ತಿದ್ದ 'ಅಂದಿಗರ್ಚುಗಾಣಿಕೆ'ಯ ಎರಡು ಗದ್ಯಾಣದ ತೆರೆಯನ್ನೂ ಬಿಟ್ಟಂತೆ ಶಾಸನದಲ್ಲಿ ಹೇಳಿದೆ.

ಈ ಶಾಸನದಿಂದ ಆವತರಿಸಿಕೊಂಡ ಗದ್ಯಪದ್ಯಗಳು :

**ಕೇಶಿಗಾವುಂಡ :**

ಉದಕಸ್ವರ್ಣಚಯಾನ್ನದಾನಗುಣದಿಂ ಗೋದಾನದಿಂ ಭೂಮಿದಾ-
ನದಿನುತ್ಕೃಷ್ಟಬ್ರಿಜದಾನದಿಂ ವಿವಿಧವಿದ್ಯಾದಾನದಿಂ ನಿತ್ಯದಾ-
ನದಿಮುದ್ಯತ್ತ್ರಿಳದಾನದಿಂ ನಿಖಿಳಕನ್ಯಾದಾನದಿಂ ತುಷ್ಟಿಮಾ-
ಡಿದನುತ್ಕೃಷ್ಟಜನಕ್ಕೆ ಕೇಶವನಿದೇಂ ಸಚ್ಚಿತ್ತಸಂಪನ್ನನೋ ||

ಪ್ರಣತಾಭೀಷ್ಟಫಳಪ್ರದಾತನನಘಪ್ರಧ್ವಂಸಿಯಂ ಭೋಗಿಭೂ-
ಷಣನಂ ಶಂಕರನಂ ಪ್ರತಿಷ್ಠಿಸಿ ಮಹೇಶಾವಾಸಮಂ ಪುಣ್ಯಪೂ-
ರಣಮಂ ಪೂಜಿತಮಂ ಶಿಳಾರಚಿತಮಂ ರಾರಾಜಿತೋತ್ತುಂಗತೋ-
ರಣಮಂ ಮಾಡಿಸಿ ಕೇಶಿ ಭಾಸುರಯಶಃಶ್ರೀಕಾಂತೆಯಂ ತಾಳ್ದಿದಂ ||

ಇಂತು ಪೊಟ್ಟಿಯೂರ ಪೆರ್ಮಾಡಿ ಕೇಶಿಗಾವುಂಡನುಂ ಮೂವದಿಂಬರುಂ ಸುಖದಿನಿರೆ........ಮಹಾಸಾಮಂತ ಜೋಯಿಯರಸರುಂ ಮಹಾಮಂಡಳೇಶ್ವರಂ ತೋಯಿಮದೇವನುಂ ಮೈಳಲದೇವಿಯರುವಿಬ್ಬ, ಪೊಟ್ಟಿಯೂರ ಪೆರ್ಮಾಡಿ ಕೇಶಿಗಾವುಂಡನ ಮಾಡಿಸಿದ ಕೆಱೆಯೇರಿಯ ಮೇಗಣ ಕೇಶವೇಶ್ವರದೇವರ್ಗೆ ಬಿಟ್ಟ ಧರ್ಮವೆಂತೆಂದಡೆ...

# ೩೧. ಕನ್ನಪಯ್ಯ

(೧೦೭೨)

ಕನ್ನಪಯ್ಯ ಎಂಬವನು ಬರೆದ ಒಂದು ಶಾಸನ, ಕ್ರಿ. ವ. ೧೦೭೨ ರದು, ಧಾರವಾಡ ಜಿಲ್ಲೆಯ ಗದುಗು ತಾಲೂಕಿನ ಸೊರಟೂರು ಎಂಬ ಗ್ರಾಮದಲ್ಲಿ ಸಿಕ್ಕಿದೆ.[1] ಅದರಲ್ಲಿ ಚಾಳುಕ್ಯ ಭುವನೈಕಮಲ್ಲ ೨ನೆಯ ಸೋಮೇಶ್ವರನ ಆಳಿಕೆಯ ಉಲ್ಲೇಖವಿದೆ. ೪೦ ಸಾಲುಗಳುಳ್ಳ ಈ ಕಲ್ಬರೆಹ ಅಲ್ಲಿ ಇಲ್ಲಿ ಕೊಂಚ ಕೊಂಚ ನಷ್ಟವಾಗಿದೆ. ಕನ್ನಡ ಪದ್ಯಗಳು ೧೦-೧೧ ಅದರಲ್ಲಿದ್ದಂತೆ ತೋರುತ್ತದೆ.

ಆ ಶಾಸನದ ಕೊನೆಯಲ್ಲಿರುವ

ಸರಸತರಮಾದುದೆಂದ-
ಕ್ಕರಿಗರ್ಬಣ್ಣಿಪಿನಮಿೞ ಶಿಳಾಶಾಸನಮಂ
ಸ.........[ಮುತ್ತಿನ]
ಸರಿಗೆಯನನುಕರಿಸೆ ಕನ್ನಪಯ್ಯಂ ಬರೆದಂ ||

ಎಂಬ ಕಂದಪದ್ಯದಲ್ಲಿಯ ಕನ್ನಪಯ್ಯನು ಶಾಸನಕಾವ್ಯದ ಕರ್ತೃವೆಂದೇ ಎಣಿಸಬಹುದಾಗಿದೆ. ಏಕೆಂದರೆ, ಇಲ್ಲಿ 'ಬರೆದಂ' ಎಂಬುದಕ್ಕೆ 'ಕಲ್ಲಮೇಲೆ ಬರೆದನು' ಎಂದಿಷ್ಟೇ ಅರ್ಥವಿದ್ದಂತೆ ಕಾಣುವುದಿಲ್ಲ. ಕಲ್ಲಮೇಲೆ ಬರೆದವನು ಕನ್ನಪಯ್ಯನೇ ಆಗಬಹುದಾದರೂ ಶಾಸನಕಾವ್ಯದ ಕರ್ತೃತ್ವವೂ ಆತನನ್ನೇ ಕೂಡಿದುದೆಂದು ಈ ಕಂದಪದ್ಯದ ಪೂರ್ವಾರ್ಧದಲ್ಲಿ ವ್ಯಕ್ತವಾದುದು ಗೋಚರಿಸುತ್ತದೆ. 'ಅಕ್ಕರಿಗ (ಪಂಡಿತ)ರು ಸರಸತರವಾದುದು ಎಂದು ಕೊಂಡಾಡುವಂತೆ ಈ ಶಾಸನವನ್ನು ಬರೆದಂ' ಎಂದಿರುವುದು ಬರೆವಣಿಗೆಗೆ ಒಪ್ಪುವ ಮಾತಲ್ಲ, ಅದು ಕಾವ್ಯದ ರಚನೆಯನ್ನು ಕುರಿತ ಮಾತೇ ಎಂಬುದು ನಿಃಸಂದೇಹ. ಅಲ್ಲದೆ, ಈ ಪದ್ಯದ ಮೂರನೆಯ ಪಾದದಲ್ಲಿ ನಷ್ಟವಾದ ಅಕ್ಷರ

---

1 Bom. Kar. Ins. Vol. 1, Part I, Gen. No. 111.

ಗಳು ಕನ್ನಪಯ್ಯನ ಕಾವ್ಯಕರ್ತೃತ್ವವನ್ನು ಬೆಂಬಲಿಸುವಂತಹವೇ ಇದ್ದುವೋ ಏನೋ! ಕವಿಯ ಅಕ್ಷರಗಳು [ಮುತ್ತಿನ] ಸರಿಗೆಯಂತೆ ಅಂದವಾಗಿದ್ದುದ ರಿಂದ ಆತನೇ ಕಲ್ಲಮೇಲೆ ಬರೆದಿರಬಹುದು. ಅಂತೂ ಈ ಶಾಸನದ ಕಬ್ಬಿಗನೂ ಬರೆಹಗಾರನೂ ಒಬ್ಬನೇ-ಕನ್ನಪಯ್ಯನೇ—ಎಂದು ನನಗನಿಸುತ್ತಿದೆ.

ಈ ಶಾಸನದ ಎರಡು ಪದ್ಯಗಳು:

ಪರಮಜಿನಂ ತನಗಾಪ್ತಂ .
ಗುರುಗಳ್ನಯಸೇನದೇವರೂರ್ಜಿತಧರ್ಮಂ
ಪಿರಿದಪ್ಪ ಬಸನವೆಂದೊಡೆ
ಧರೆಯೊಳ್ಬಲದೇವನಂತು ನೋಂತರುಮೊಳರೆ ||

ಇಂತೆನಿಸಿ ನೆಗಳ್ದ ಶ್ರೀಮದ್ದಂಡನಾಯಕ ಬಲದೇವಯ್ಯಂಗಳ್

ಇದು ಧರ್ಮಾಮೃತಸಿಂಧು ಸುಶ್ರುತಲತಾಸಂದೋಹಕಂದಂ ದಯಾ-
ನದಿಗುತ್ಪತ್ತಿಯ ಬೆಟ್ಟು ತತ್ತ್ವದ ತವರ್ಸಂಸಾರವಾರಾಸಿಗಿ-
ಕ್ಕಿದ ಘೈತ್ರಂ ತೊಡವಾರ್ಹತಕ್ಕೆನೆ ಜನಂ ಭೂಭಾಗದೊಳ್ಪೆಂಪು ವೆ-
ತ್ತುದು ಸೂರಸ್ಥಗಣಂ ಪ್ರಸಿದ್ಧವದಱೊಳ್ ಶ್ರೀಚಿತ್ರಕೂಟಾನ್ವಯಂ||

ಇಲ್ಲಿ ಕವಿ ನಯಸೇನನ 'ಧರ್ಮಾಮೃತ' ಗ್ರಂಥವನ್ನು ನಿರ್ದೇಶಿಸಿದ್ದಾನೋ ಏನೋ.

# ೩೨. ರುದ್ರಭಟ್ಟ

(೧೦೭೪)

ಧಾರವಾಡ ಜಿಲ್ಲೆಯ ನರಗುಂದ ಗ್ರಾಮದಲ್ಲಿರುವ ಕ್ರಿ. ವ. ೧೦೭೪ ರ ಶಾಸನವು[1] ಊರ ಭಾಗವಾದ ಮೆಕ್ಕೆಗೇರಿಯ ಮಹಾಜನಗಳ ಸಮಕ್ಷದಲ್ಲಿ ಅಜವರ್ಮಸೆಟ್ಟಿ ಬಸದಿ ಸತ್ರಗಳಿಗೆ ಕೊಟ್ಟ ಭೂದಾನವನ್ನು ಉಲ್ಲೇಖಿಸುತ್ತದೆ. ಶಾಸನದ ೪೪ ಸಾಲುಗಳಲ್ಲಿ ಮೊದಲಿನ ೬-೭ ಸಾಲುಗಳು ಮಾತ್ರ ಚೆನ್ನಾಗಿದ್ದು ಮುಂದಿನವು ಅಲ್ಲಲ್ಲಿ ನಶಿಸಿವೆ. ಕೆಲವು ಶಬ್ದಗಳನ್ನಂತೂ ಊಹಿಸಲೂ ಆಗಿಲ್ಲ. ಈ ಶಾಸನದ ಕೊನೆಯಲ್ಲಿ '. . . ಚತುರ್ಮುಖ ರುದ್ರಭಟ್ಟರ ಕಾವ್ಯಂ' ಎಂದಿದೆ. ಇವನ ಬಿರುದಿನ ಚತುರ್ಮುಖ ಎಂಬುದರ ಹಿಂದೆ 'ಕಾವ್ಯ' 'ಕವಿತ್ವ' 'ಸಾಹಿತ್ಯ' ಇತ್ಯಾದಿಗಳಲ್ಲೊಂದು ಏನೋ ಇದ್ದಿರಬಹುದು.

ಈ ಶಾಸನದಲ್ಲಿಯ ಹಲವಾರು ಪದ್ಯಗಳಲ್ಲಿ ಎರಡನ್ನು ಕೆಳಗೆ ಕೊಟ್ಟಿದೆ:

ಆದಟರಿವರೆನಿಪ ಪಗೆವರ
ನದಿರ್ಪಿ ತನ್ನಾಜ್ಞೆಯಿಂ ಚತುರ್ವಾರ್ಧಿಪರೀ
ತ[ದ*]ಧರೆಯನಾಳ್ದನತ್ಯ
ಭ್ಯುದಯ[ಂ*] ಭುವನೈಕಮಲ್ಲನರ್ಥಿಗೆ ನಲ್ಲ[ಂ*] ||

ಪ್ರಕಟಿತ ಧರ್ಮನಿರ್ಮಳರುದಾರಗುಣ[ರ್ ಪರ*] ವೀರ ವಿಕ್ರಮರ್
ಸುಕವಿಗ[ಳುದ್ಧ*] ಚಾರುಚರಿತರ್ಮಹಿ . . . ಸೇವಾ ಪವಿತ್ರರಾ(ಯಾ?)
ಜ್ಞಿಕರುಚಿತಪ್ರಸಂಗರಭಿಮಾನಿಗಳಪ್ಪ ವಿಶಿಷ್ಟದಾನಿಗ[ಳ್]
[ಸಕ]ಳಕಳಾಗಮಜ್ಞರತಿ [ಧರ್ಮರತ*]ರ್ನಱುಗುಂದದ ದ್ವಿಜರ್ ||

---

1 K. I. Vol. V, No. 10.

# ೩೩. ವೈಜನಾಥ

(೧೦೭೫)

ಭುವನೈಕಮಲ್ಲ ಚಾಳುಕ್ಯ ಇಮ್ಮಡಿ ಸೋಮೇಶ್ವರನ ಕಾಲದಲ್ಲಿ ಕ್ರಿ.ಶ. ೧೦೭೫ ರಲ್ಲಿ ಹುಟ್ಟಿದ ಶಿಲಾಶಾಸನವೊಂದು, ವಿಜಾಪುರ ಜಿಲ್ಲೆಯ ಬಾಗಿಲು-ಕೋಟೆ ತಾಲೂಕಿನ ಕೊಪ್ಪ ಎಂಬ ಹಳ್ಳಿಯಲ್ಲಿ ದುರಗವ್ವನ ಗುಡಿಯ ಹಿಂದುಗಡೆ ಬಿದ್ದಿದೆ.[1] ಅದನ್ನು ವೈಜನಾಥ ಎಂಬ ಕವಿ ಬರೆದಿದ್ದಾನೆ. ಬರೆಹದಲ್ಲಿ ೫೪ ಸಾಲುಗಳಷ್ಟು ವಿಸ್ತಾರವಾದ, ಗದ್ಯಪದ್ಯಾತ್ಮಕವಾದ ಈ ಶಾಸನದಲ್ಲಿ ವೃತ್ತ-ಕಂದ ಪದ್ಯಗಳು ಒಟ್ಟಿಗೆ ೧೨ ಇವೆ. ಶಾಸನಾಂತ್ಯದಲ್ಲಿ ಅದರ ಕರ್ತೃ 'ಕವಿ ವೈಜನಾಥಂ ಬರೆದಂ' ಎಂದು ಮಾತ್ರ, ಯಾವ ಬಿರುದೂ, ಸ್ವ-ಪ್ರಶಂಸೆಯ ಯಾವ ಶಬ್ದವೂ ಇಲ್ಲದೆ ನಿರಾಡಂಬರವಾಗಿ ತನ್ನ ಹೆಸರನ್ನು ಹೇಳಿಕೊಂಡಿದ್ದಾನೆ. ಕವಿ ಎಂಬ ವಿಶೇಷಣ ಪದವನ್ನು ವೈಜನಾಥನ ಹೆಸರಿನ ಹಿಂದೆ ಜೋಡಿಸಿ ಜನಗಳು ಅವನನ್ನು ಕರೆಯುತ್ತಿದ್ದರು ಎಂಬ ಹಾಗೆ ಇದರಿಂದ ಧ್ವನಿತವಾಗುತ್ತದೆ.

ಆ ಶಾಸನದಿಂದ ಕೆಲ ಪದ್ಯಗಳು :

ಶ್ರೀಮತ್ತ್ರೈಳೋಕ್ಯಮಲ್ಲಕ್ಷಿತಿಪತಿ ಹಿಮವತ್ಸೇತುಪೂರ್ವಾಸ್ತಶೈಳಂ
ಸೀಮಾಸ್ತಂಭಾಳಿರಾಜನ್ನುತಿ ಸಕಳಮಹೀಕಾಂತೆಯಾಗಲ್ಕೆ ತಾಪೋ-
ದ್ದಾಮಾವಷ್ಟಂಭದಿಂ ಪಾಳಿಸಿ ಕವಚಹರಂ ಮೂರ್ತಿಮಾರ್ತಂಡನೆಂದು-
ತ್ತ್ರೇಮಂ ಸೋಮೇಶ್ವರೋರ್ವೀಪತಿಗೆ ಸಕಳಸಾಮ್ರಾಜ್ಯಮಂ ಕೂರ್ತು
ಕೊಟ್ಟಂ ||

ಧರೆಯುಂ ತ್ರೈಳೋಕ್ಯಮಲ್ಲಕ್ಷಿತಿಪತಿ ಕುಡೆ ಕಯ್ಕೊಂಡುಮತ್ತತ್ತ ರತ್ನಾ-
ಕರಮಧ್ಯದ್ವೀಪನಾನಾವಿಷಯತತಿಗೆ ತನ್ನಾಣೆ ತನ್ನಚ್ಚು ತನ್ನಿ-
ಟ್ಟ ರಸರ್ತನ್ನೋಲೆ ತನ್ನುಂಡಿಗೆಯೆನೆ ವಿದಿತಾಜ್ಞಾನ್ವಿತಂ ಮಾಡಿದಂ ಬಾ-
ಪ್ಪುರೆ ಪದ್ಮಾನಂದತೇಜಂ ನೃಗನಳಚರಿತಂ ಮೂರ್ತಿಮಾರ್ತಂಡದೇವಂ||

1 Bom. Kar. Ins. Vol. I, Part I.

ಎನಿತಂ ಚಾಳುಕ್ಯಚಕ್ರೇಶ್ವರ ನಿಜವಿಜಿಗೀಷುಪ್ರಭಾಟೋಪಮಾಯ್ತಂ-
ತನಿತರ್ಕ್ಕಂ ಮಂತ್ರಸಂಪಾದನದ ಪದಕೆ ತಾಂ ಮಂತ್ರಿ ಯುದ್ಧಕ್ಕದೇನ-
ಚ್ಚಿನ ದಂಡಾಧೀಶ್ವರಂ ತಾನೆನೆ ಚತುರುಪಧಾಶುದ್ಧಿಯಂ ತಾಳ್ದಿದಂ ನೂ-
ತನಮುದ್ರಾರಾಕ್ಷಸಂ ನೂತನಕಮಳಭವಂ ಸಿಂಬದಂಡಾಧಿನಾಥಂ ||

# ೩೪. ಬಮ್ಮರ ಹರಿಯಣ್ಣ

(೧೦೭೫)

ಬಮ್ಮರ ಹರಿಯಣ್ಣನೆಂಬವನು ತನಗೆ ಅಥವಾ ತನ್ನ ಕೃತಿಗೆ ವಿಶೇಷ ವರ್ಣನಾಡಂಬರವಿಲ್ಲದೆ ಶಾ. ಶ. ೯೯೭ ರಲ್ಲಿ ಹೇಳಿದ ಸೊರಬ ತಾಲೂಕಿನೊಳಗಿನ ಮಲ್ಲಾಪುರ ಶಾಸನವು[1] ೫೮ ಸಾಲುಗಳಲ್ಲಿ ಹರಡಿದೆ. ಕಾದಂಬ ಕೀರ್ತಿವರ್ಮನ ಪಟ್ಟಮಹಾದೇವಿ ಮಾಳಲದೇವಿ ಕುಪ್ಪಟೂರಿನ ಶ್ರೀ ಪಾರ್ಶ್ವದೇವರ ಚೈತ್ಯಾಲಯವನ್ನು ಮಾಡಿಸಿ ಸಿದ್ದಣಿ ಗ್ರಾಮವನ್ನು ಬಿಟ್ಟುದನ್ನು ಇದರಲ್ಲಿ ಹೇಳಿದೆ. ವರ್ಣನಾಪದ್ಯಗಳಲ್ಲಿ ೩–೪ ಸಂಸ್ಕೃತ ಪದ್ಯಗಳೂ ಇರುವುದು ಹರಿಯಣ್ಣನು ಉಭಯಕವಿ ಎಂಬುದಕ್ಕೆ ಸಾಕ್ಷಿ. ಶಾಸನದ ಮೊದಲ ಮುಕ್ಕಾಲು ಭಾಗದ ಸಾಲುಗಳು ತುದಿತುದಿಯಲ್ಲಿ ಮುಕ್ಕಾಗಿರುವುದರಿಂದ ಪದ್ಯಗಳು ಅಲ್ಲಲ್ಲಿ ಊನವಾಗಿವೆ. ಅವುಗಳಲ್ಲಿ ಕೆಲವು :

ಅಸಮವಿತರಣಗು[ಣಂಸಾ
ಹ]ಸಭೀಮಂ ಕೀರ್ತಿದೇವನೆಂಬೀ ಪೆಸರಂ
ವಸುಧೆ ಕುಡೆ ಪ[ಡೆ]ದನೆಂಟುಂ
ದೆಸೆಯಾನೆಗೆ ಕೀರ್ತಿ ಕೀರ್ತಿಮುಖವಾದುದಱಿಂ ||

ಕಿಂ ಕರ್ಣಃ ಕಿಂ ಕಿ[ರೀಟೀ ಕಿಮು ದಿ]ವಿಜಪತಿಃ ಕಿಂ ಸ್ಮರಃ ಕಿಂ ವಿಧಾತಾ
ದಾನೀ ನೂನಂ ಕೃತಾಪೀಃ ಪೃಥು[ತ]ರವಿಭವಶ್ಚಾರುರೂಪಃ ಕಳಾವಿ
ದ್ಯಗ್ರೇ ಯಸ್ಯೇತಿ ನಿತ್ಯಂ ವಿತರಣವಿಜಯ - - - [ಸೌಂ]ದರ್ಯವಿದ್ಯಾ
ವಾರ್ದಿಂ ಸಂಸ್ತೂಯತೇಽಸೌ ಸಕಳರಿಪುಕುಳೋದ . . ನಃ ಕೀರ್ತಿದೇವಃ ||

ಬಳೆದ ಸುಗಂಧಶಾಳಿವನದಿಂದೊಳಗೊಪ್ಪುವ ನಾಳಿಕೇರ ಕಾ
ದಳ ನವಪೂಗ ನಾಗಲತಿಕಾವನದಿಂ ಪರಿ - - - ಳದಿಂ
ವಳಯಿತಮಾಗಿ ವಿಪ್ರಸುರಚಿತ್ರನಿಕೇತನಮೋಳಿಯಿಂದೆ ಕ
ಣ್ಗೊಳಿಪುದು ಕುಪ್ಪಟೂರ್ಸಕಳವಿದ್ಯೆಗೆ ತಾನೆನೆ ಜನ್ಮಭೂತಳಂ ||

---

1 EC. VIII, ಸೊರಬ ೭೬.

ಶಾಂತರಸಂ ಪೊನಲ್ವರಿದು ಸಂಯಮದಲ್ಲಿ ಮಡಲ್ತು ಪರ್ಬಿತೋ
[ರಂ]ತೆ ಚರಾಚರಬ್ರಜಮನಾತ್ಮವಜೋಮೃತದಿಂ ವಿನೇಯರ
ಸ್ವಾಂತರಜೋಮಳಂ ತೊಳೆದು ಪೋಯ್ತೆನೆ ಪೇಳ್ ಬುಧ ಪದ್ಮನಂದಿ ಸಿ
ದ್ಧಾಂತಿಕ ಚಕ್ರವರ್ತಿಯನದಾರ್ಪೊಗಳ್ಗುಣಶೀಲಮೂರ್ತಿಯಂ

## ೩೫. ನಾಗದೇವ

( ೧೦೭೮ )

ಎರಡು ದಾನಗಳನ್ನು ಉಲ್ಲೇಖಿಸುವ ಒಂದೇ ಮಿತಿವರ್ಷಗಳಲ್ಲಿ ಹುಟ್ಟಿದ ಶಾಸನವು[1] ಧಾರವಾಡ ಜಿಲ್ಲೆಯ ನರಗುಂದ ಗ್ರಾಮದಲ್ಲಿದೆ. ಅದರ ಕ್ರಿಸ್ತವರ್ಷ ೧೦೭೮. ಮೊದಲನೆಯ ದಾನೋಲ್ಲೇಖವು ಮುಗಿದ ಮೇಲೆ ಫಲಶ್ರುತಿಶ್ಲೋಕಗಳ ತರುವಾಯ

ಪರಮಗುಣಗಣಕೆ ನಿಳಯಂ
ಪರಿಣತನೂರೊಡೆಯ ನಾಗದೇವಂ ಪೇೞ್ದಂ
ಧರೆ ಬಣ್ಣಿಸಲರ್ಥಿಯಿನಾ
ದರದಿಂದೆಲಸಿಯರ ಕೇಸಿಮಯ್ಯಂ ಬರೆದಂ ||

ಎಂಬ ಕಂದಪದ್ಯವಿದೆ. ಬಳಿಕ ಎರಡನೆಯ ದಾನೋಲ್ಲೇಖವೂ ಕೊನೆಯಲ್ಲಿ ಫಲಶ್ರುತಿಯ ಕನ್ನಡಪದ್ಯವೂ ಇವೆ. ಮೊದಲ ದಾನೋಲ್ಲೇಖವನ್ನು ಶಾಸನಿಸಿ ತನ್ನ ಹೆಸರನ್ನು ಹೇಳಿಕೊಂಡ ಕವಿಗೆ ಅಂದೇ ಜರುಗಿದ ಎರಡನೆಯ ದಾನೋಲ್ಲೇಖವನ್ನು ಉಲ್ಲೇಖಿಸುವುದುಳಿದಿದೆ ಎಂಬುದು ಗಮನಕ್ಕೆ ಬಂದು ಅದರಲ್ಲಿಯೇ ಮುಂದುವರಿಸಿರಬೇಕೆಂದು ತೋರುತ್ತದೆ. ಇಡೀ ಶಾಸನವೂ ಏತತ್ಕವಿಕೃತವೇ; ನರಗುಂದದ ಊರೊಡೆಯನಾದ ನಾಗದೇವನದೇ.

ಅರ್ಕದೇವರಿಗೆ ಅಲಂಕಾರ ಪೂಜೋಪಕರಣಗಳನ್ನೂ ಸತ್ರಕ್ಕೆ ಭೂಮಿಯನ್ನೂ ನರುಗುಂದದ ಪಡುವಗೇರಿಯ ಮಹಾಜನರು ಪಡೆದುಕೊಟ್ಟರೆಂದು ಶಾಸನವು ವಿವರಿಸುತ್ತದೆ. ಈ ಶಾಸನವೂ ಸುಮಾರಾಗಿ ಅಲ್ಲಲ್ಲಿ ನಶಿಸಿದೆ. ಅದರಲ್ಲಿಯ ಕೆಲವು ಪದ್ಯಗಳನ್ನು ಇಲ್ಲಿ ಕೊಟ್ಟಿದೆ :

ತೆಱಿಭಾಗವಳತೆ[ಯ ಸತೆಂ
ಬಱಿಕೆಯ ತೆಱಿ]ಗಳೊಳಮೇನುಮಂ ಶತ್ರ[ಕ್ಕೆ
ತ್ತ]ಱದಂತಿರೆ ನಡೆಯಿಸುವ
ಣ್ನಱುಗುಂದದ ಪಡುವಗೇರಿಯಯ್ವತ್ತಯ್ವರ್ ||

---

1 K. I. Vol. V, No. 11.

ಪ್ರಿಯದಿಂದಂ ನಱುಗುಂದದೊಳ್ನೆಗೞ್ದ [ಮೂ]ಲಸ್ಥಾನದರ್ಕಂಗೆ ಬೆ
[ಳ್ಳಿ]ಯ ಕಣ್ತಾಂಬ್ರದ ಭಾಜನಂ ತೊಳಪಪಟ್ಟಂ ಬೊಟ್ಟು ಘಂಟಾಚತು
ಷ್ಟ[*]ವೆಂದಿಂತಿವನಿತ್ತನುತ್ತಮ ಚರಿತ್ರಂ ವಂದಿ[ವಿದ್ವಜ್*]ಜನಾ
ಶ್ರಯನುರ್ವೀಜನಮರ್ಕಱಿಂ ಪೊಗಳ್ವಿನಂ ಮಮ್ಮ[ಂ*]ಯಶೋ
ಮಂಡನಂ ||

ಎರಡನೆಯದಾನೋಲ್ಲೇಖದಲ್ಲಿ :

ಅಕ್ಕರ ||
ನಾಡೊಳಗ್ರ್ಯರು ಮಹಾಗ್ರಹಾರಂ ನಱುಗುಂಡದ ಪಡುವಗೇರಿಯ ವಿಪ್ರರು
ಗಾಡಿವೆತ್ತಿರ್ಪ . . ಯ ಕೆಱೆಯಿಂ ಪಡುವಲಾಱು ಮತ್ತರ್ಕೆಯ್ಯಂ[ಸ]
ಸರ್ವಮಾನ್ಯಂ
ಬೇಡಿ ಚಾಳುಕ್ಯವೀರನೊಳಂಬ ರಾಜನ ಕಯ್ಯೊಳ್ಪಡೆದ(ನ್ತಮ್ಮ)ತದಾನಕ್ಕೆ
ಮಾಡಿ ಭಟ್ಟವೃತ್ತಿಗರ್ಥಿಯಿಂ [ಬಿ*]ಟ್ಟರಾ ಚಂದ್ರಾರ್ಕತಾರಂ
ಸಲ್ವನ್ನೆಗಂ ||

# ೩೬. ನಾಗವಾರ

( ೧೦೮೦ )

ನರಗುಂದ ಗ್ರಾಮದ ಕ್ರಿ. ಶ. ೧೦೮೦ರ ೬೩ ಸಾಲುಗಳ ಶಿಲಾ ಶಾಸನವು[1] ಸಾಮಾನ್ಯವಾಗಿ ಚೆನ್ನಾಗಿದೆ ಎಂದು ಹೇಳಬಹುದು. ಚಾಳುಕ್ಯ ವಂಶ, ನರಗುಂದ ಗ್ರಾಮ, ಅಲ್ಲಿಯ ಪ್ರಭು ಮೊದಲಾದವರ ವರ್ಣನೆ ಗಳಿಂದ ಶಾಸನವು ಪದ್ಯಮಯವಾಗಿದೆ. ಭೂದಾನಾದಿ ವಿವರಗಳೂ ಪದ್ಯ ದಲ್ಲಿವೆ. ಸಂಜೆವಟ, ಅರವೆ, ಗುಡಿ ಮೊದಲಾದವುಗಳಿಗೆ ವೀರನೊಳಂಬನ ರಾಯಭಾರಿ ಸಂಕಪಯ್ಯನು ಭೂಮಿಗಳನ್ನು ಬಿಟ್ಟ ಸಂಗತಿ ಇಲ್ಲಿ ಹೇಳಿದೆ. ಕೊನೆಯಲ್ಲಿ ರಾಮರ ಮಗನಾದ ಮಲ್ಲಿಕಾರ್ಜುನನು ಈ ಶಾಸನವನ್ನು ಬರೆದ ನೆಂದೂ ಕೊಲ್ಲು[ರವ]ನಾದ ಸಾಕ್ಷರಿಕನಾದ ನಾಗವಾರಕವೀಂದ್ರನು ತಿದ್ದಿ ಬರೆಸಿದನೆಂದೂ ಹೇಳುವ ಈ ಒಂದು ಕಂದಪದ್ಯವಿದೆ :

ಬರೆದಂ[ರಾಮರ] ಸುತನಾ
ದರದಿಂದ[ಂ*] ಮಲ್ಲಿಕಾರ್ಜುನಂ ಸಾ[ಸನಮಂ*]
- - ತಿರ್ದಿ ಬರೆಸಿ[ದಂ*] ಸಾ
ಕ್ಷರಿಕಂ ಕೊಲ್ಲು[ರವ] ನಾಗವಾರಕವೀಂದ್ರಂ ||

ಇದರಲ್ಲಿಯ ಕೆಲವು ಪದ್ಯಗಳು :

[ಪ*]ಲತೆಱದ ಧಾನ್ಯವರ್ಗದ
ಬೆಳಸಿಂಗೊಳ್ವಲ[ನೆನಿಪ್ಪ*][2] ಬೆಳ್ವಲನೆಂಬಾ
ಲಲನೆಯ ತಿಲಕದವೊಲ್ಕ
ಣ್ಗೊಳಿಸುವುದು ಮಹಾಗ್ರಹಾರಮೆನೆ ನಱುಗುಂದ[ಂ*] ||

---

1 K. I. Vol. V, Gen. No. 12.

2 ಮೂಲ : [ನಾಗಿರ್ಪ].

ಆರಯ್ವೊಡದಱ ನಾಲ್ಕುಂ
ಕೇರಿಗಳೊಳಗಲ್ಲಿಗಲ್ಲಿಗತಿರಮಣೀಯುಂ
[ಸಾರಂ] ಮೂಡಣ ಭಾಗದ
ಕೇರಿ ಶ್ರೀಮೆಕ್ಕೆಗೇರಿಯೆಂಬುದು ಪೆಸರಿಂ ||

[ಆ*]ಮೆಕ್ಕೆಗೇರಿಯೊಳ್ವಸು
ಧಾಮರರೊಳಗಗ್ರಗಣ್ಯನೂರ್ಜಿತಪುಣ್ಯಂ
ಶ್ರೀಮನ್ಮಂಡೆಯವಂಶಶಿ
ಖಾಮಣಿಯೆನೆ [ಶಂ]ಕಪಯ್ಯನೆಂಬಂ ನೆಗೞ್ದಂ ||

## ೩೭. ಮಲ್ಲಿಕಾರ್ಜುನ

( ೧೦೮೦ )

ನರಗುಂದದ ಕ್ರಿ. ಶ. ೧೦೮೦ ರ ಶಾಸನವನ್ನು[1] ಮಲ್ಲಿಕಾರ್ಜುನನೆಂಬವನು ರಚಿಸಿದ್ದಾನೆ. ಈತನು [ರಾಮರ] ಸುತನು. ಈತನೊಬ್ಬ ಸಾಮಾನ್ಯಕವಿಯೆಂದು ತೋರುತ್ತದೆ. ಏಕೆಂದರೆ ತನ್ನೀ ಕೃತಿಯನ್ನು ಅಲ್ಲಿಯೇ ಇದ್ದ ಕವೀಂದ್ರನೆಂದೆನಿಸಿಕೊಂಡ ನಾಗವಾರನಿಂದ ತಿದ್ದಿಸಿ ಬರೆಯಿಸಿದ್ದಾನೆ.[2]

---

1 KI. Vol. V, Gen. No. 12.

2 ನಾಗವಾರ ನೋಡಿರಿ.

# ೩೮. ನಾಗದೇವ

( ೧೦೮೨ - ೮೭ )

ಧಾರವಾಡ ಜಿಲ್ಲೆಯ ಗದುಗಿನ ಬಳಿ ಇರುವ ಕುರ್ತಕೋಟಿ ಎಂಬ ಊರಲ್ಲಿದ್ದ ಮೂರು ಶಾಸನಕಾವ್ಯಗಳನ್ನು ನಾಗದೇವ ಎಂಬಾತನು ರಚಿಸಿದ್ದಾನೆ. ಈತನು ಗದುಗಿನ ಹತ್ತಿರದಲ್ಲಿಯೇ ಇನ್ನೊಂದು ಊರಾದ ಹೊಂಬಳ ಎಂಬ ಗ್ರಾಮದವನು; ಅಗ್ರಹಾರವಾಗಿದ್ದ ಆ ಊರ ಶೈವ ಬ್ರಾಹ್ಮಣನು ; ಪೊಂಬೊಳಲ ನಾಗದೇವ ಎಂಬುದಾಗಿ ಇವನು ತನ್ನ ಹೆಸರನ್ನು ಹೇಳಿಕೊಂಡಿದ್ದಾನೆ. ಇವನು ವಿಕ್ರಾಂತಧನನೂ ಶೂರನೂ ಆಗಿದ್ದನು. ಇವನು ರಚಿಸಿದ ಶಾಸನಗಳು ಮೂರು. ಚಾಳುಕ್ಯ ಆರ್ವಡಿ ವಿಕ್ರಮಾದಿತ್ಯನ ಕಾಲದವು : ಕ್ರಿ. ವ. ೧೦೮೨ರಲ್ಲಿ ನಿರ್ಮಿತವಾದುದು ಒಂದು, ಕ್ರಿ. ವ. ೧೦೮೭ರಲ್ಲಿ ಒಂದೇ ಮಿತಿಯಂದು ಮೈದಾಳಿದುವು ಎರಡು. ಆ ಕಾಲದಲ್ಲಿ ಕುರ್ತಕೋಟಿಯನ್ನು 'ಕುಱುತಕೂಂಟಿ' ಎಂದು ಕರೆಯುತ್ತಿದ್ದರು.

ಮೇಲೆ ಹೇಳಿದ ಮೂರು ಶಾಸನಕಾವ್ಯಗಳಲ್ಲಿ ಎರಡರ ಕೊನೆಯಲ್ಲಿ ಪೊಂಬೊಳಲ ನಾಗದೇವನು ಬರೆದನೆಂಬುದನ್ನು ಹೇಳಿಯೇ ಇರುವುದರಿಂದ ಅವುಗಳ ಕರ್ತೃತ್ವ ನಿಃಸಂದಿಗ್ಧವಾಗಿದೆ. ಮೂರನೆಯದರಲ್ಲಿ ಕರ್ತೃವಿನ ಹೆಸರಿನ ಉಲ್ಲೇಖವಿಲ್ಲ. ಆದರೆಯೂ ಕಾಲಸಂದರ್ಭ, ರಚನಸಾಮ್ಯ ಮೊದಲಾದವುಗಳ ಸಮನ್ವಯ ಸಮಾಲೋಚನೆಯಿಂದ ಅದೂ ಪೊಂಬೊಳಲ ನಾಗದೇವನ ಕೃತಿಯೆಂಬುದು ಧಾರಾಳವಾಗಿ ಕಂಡುಬರುತ್ತದೆ. ಆ ಮೂರು ಶಾಸನಗಳನ್ನು ಒಂದೊಂದಾಗಿ ತೆಗೆದುಕೊಂಡು ಇಲ್ಲಿ ಪರ್ಯಾಲೋಚಿಸುವ.

೧.[1] ಇದರ ಕಾಲ ಕ್ರಿ.ವ. ೧೦೮೨. ಕುರ್ತಕೋಟಿಯ 'ಉಪ್ಪುನೀರಿನ ಬಾವಿ' ಎಂಬ ಬಾವಿಯ ಬಳಿ ಇದು ಇದೆ. ತ್ರಿಭುವನಮಲ್ಲ ಆರ್ವಡಿ ವಿಕ್ರಮಾದಿತ್ಯನ ತಮ್ಮ ಜಯಸಿಂಹದೇವನ ಮನೆವೆಗ್ಗಡೆಯಾಗಿದ್ದ ವಾಮದೇವಯ್ಯಗಳೂ ಮಹಾಜನವಿಸ್ಸೂರುವರೂ ಕುಱುತಕೂಂಟಿಯ ಕಡಲೆಗೆಱಿಗೆ

---

1 Bom. Kar. Ins. Vol. I, Part II, Gen. No. 127.

ಹಿಂದಣ ದತ್ತಿಗಳನ್ನು ಪುನರುಜ್ಜೀವಿಸಿದಂತೆಯೂ ಕೆಲ ಹೊಸ ದತ್ತಿಗಳನ್ನು ಬಿಟ್ಟಂತೆಯೂ ಈ ಶಾಸನ ಸಾರುತ್ತದೆ. ಕಲ್ಲುಬರೆಹದಲ್ಲಿ ೫೬ ಸಾಲುಗಳಾಗಿರುವ ಈ ಶಾಸನದ ಲಘು ಚಂಪೂಕಾವ್ಯ ೧೬ ಕನ್ನಡ ಪದ್ಯಗಳಿಂದ ಒಡಗೂಡಿದೆ. ಶಾಸನದ ಮುಗಿವಿನಲ್ಲಿ 'ಓಂ ನಮಃ ಶಿವಾಯ' ಎಂಬ ಷಡಕ್ಷರಿ ಇದೆ. ಶಾಸನದ ಮಧ್ಯಭಾಗದಲ್ಲಿ ಅಲ್ಲಲ್ಲಿ ಅಕ್ಷರಗಳು ನಶಿಸಿಹೋಗಿವೆ. ಆದರೆ, ಕಡಲೆಗೆಱೆಯ ಸೊಗಸಾದ ವರ್ಣನೆ ಛಿನ್ನವಾಗದೆ ಉಳಿದು, ಅಮೃತವನ್ನು ಹನಿಸಿ ಓದುಗರ ಮನದಣಿಸುತ್ತಿರುವುದು ಸಂತಸದ ವಿಷಯ. ಆ ವರ್ಣನೆಯಿಂದ ಪೊಂಬೊಳಲ ನಾಗದೇವನ ಸರಸಕವಿತ್ವವಿಶೇಷವನ್ನು ಗುರುತಿಸಬಹುದು.

ಆ ಪದ್ಯಗಳಿವು :

ಅತಿಮಧುರಂ ಪ್ರಸನ್ನಕವಿ ನಿರ್ಮಿಸಿದುನ್ನತಕಾವ್ಯದಂತೆ ನಿ-
ರ್ವೃತಿಯುತಮೆಯ್ದೆ ನೋಕ್ಷದಪೊಲ್ಜಿ[1]ತ್ತಜನಪ್ಪನ ಚಿತ್ತದಂತೆ ಸಂ-
ತತಮತಿನಿರ್ಮಳಂ ಪೆಱರನೆಂದುಮಪೇಕ್ಷಿಸುತಿರ್ಪನಂತೆ ತಾ-
ನತಿಲಘುವೆನ್ನದೀ ಚಣಕದುದ್ಧೃತಟಾಕಮನಾರೊ ಬಣ್ಣಿಸರ್ ||

ಭಾವಿಸೆ ಮೂರ್ತಿ ಸೋಮಕಳೆಯುಂದದೆ ಶೋಭಿಸುತಿರ್ಪುದೀ ಜಗ-
ತ್ಪಾವನಮಂಬುಜೋದರನಿವಾಸಪಯೋನಿಧಿಯಂತೆ ತೀವಿ ಸೇ-
ವ್ಯಾವಹಮಾಗಿ ರಂಜಿಪುದು ಜೀವನದಿಂ ನರಜೀವರಾಶಿಗ-
ಳ್ಜೀವಿಪುವೆಂದಡುನ್ನತಿಯನಾರ್ಪೊಗಳರ್ಧರಣೀತಳಾಗ್ರದೊಳ್ ||

ಪೊಡವೀಪತಿ ಕಾವೇರಿಯ
ತಡಿಯೊಳ್ಬಿಟ್ಟಿರ್ದ ತನ್ನದೀಜಳಮುಮನೀ
ಕಡಲೆಗೆಱೆಯಮೃತಜಳಮುಮ
ನೊಡನೊಯ್ಯನೆ ತೂಗಿ ನೋರ್ಪನಭಿವರ್ಣಿಸಿದಂ ||

ರಂಗತ್ತರಂಗಮಾಳಾ-
ಭಂಗುರದಿಂದೆಸೆವ ಕಡಲೆಗೆಱೆ ನೋರ್ಪಜನ-
ಕ್ಕಿಂಗಡಲಂ ಧಿಕ್ಕರಿಪುದ-
ದಂ ಗಡ ಪೊಗಳಲ್ಕೆ ಕಮಳಭವನುಂ ನೆಱೆಯಂ ||

---

1 ಶಿಥಿಲೋಚ್ಚಾರ.

ಈ ಕಡಲಿಗೆರೆಯ ನೀರಿನ ಸವಿಯ ವರ್ಣನೆಯಲ್ಲಿ ಮೊದಲ ಪದ್ಯದಲ್ಲಿ 'ಪ್ರಸನ್ನ ಕವಿ ನಿರ್ಮಿಸಿದ ಉನ್ನತ ಕಾವ್ಯದಂತೆ ಅತಿಮಧುರವಾದುದು' ಈ ನೀರು ಎಂದು ಹೇಳಿದಲ್ಲಿ, ಕವಿ ತನ್ನ ಕಾವ್ಯದ ಸ್ವಾರಸ್ಯವನ್ನೇ ಉಪಮೆಗೆ ತಕ್ಕೊಂಡಿರುವುದು ಸಹಜ. ಕಳಸದ ಶಾಸನಕವಿ ಕವಿರಾಜರಾಜ (ಕ್ರಿ. ಶ. ೯೩೦) ಕಾಡಿಯೂರ ಜನಗಳ ವರ್ಣನೆಗೆ ತನ್ನ ಕಾವ್ಯದ ಉಪಮೆಯನ್ನೇ ಕೊಟ್ಟುಕೊಂಡಿರುವುದನ್ನು ಇಲ್ಲಿ ನೆನೆಯಬಹುದು. ಹೀಗಾಗಿ, ಪ್ರಸನ್ನಕವಿ ಎಂಬುದು ಬೇರಾವ ಪ್ರಸಿದ್ಧ ಕವಿಯನ್ನು ಸೂಚಿಸುತ್ತಿರದೆ ಈ ನಾಗದೇವನಿಗೇ ಈ ಬಿರುದಿದ್ದಿತೆಂದು ತೋರುತ್ತದೆ.

ಪೊಂಬೊಳಲ ನಾಗದೇವ ತನ್ನ ಹೆಸರನ್ನು ಹೇಳಿಕೊಂಡ, ಶಾಸನದ ಕೊನೆಗಿರುವ ಪದ್ಯದಲ್ಲಿ ತನ್ನೂರ ಬಗೆಗೆ 'ವಸುಧಾಂಬಿಕೆಗೆ ಲಲಾಮ' ಎಂದು ಉಪಮಿಸಿ ಸಾತ್ತ್ವಿಕಾಭಿಮಾನವನ್ನು ವ್ಯಕ್ತಗೊಳಿಸಿದ್ದಾನೆ.

ಅಂಬುಧಿಪರಿವೇಷ್ಟಿತವಸು-
ಧಾಂಬಿಕೆಗೆ ಲಲಾಮವೆನಿಪ ವಿಪ್ರಗ್ರಾಮಂ
ಪೊಂಬೊಳಲ ನಾಗದೇವ ಬು-
ಧಂ ಬುಧತತಿ ಮೆಚ್ಚೆ ಕಾವ್ಯಮಂ ವಿರಚಿಸಿದಂ ||

೨.[1] ಅದೇ ಊರಲ್ಲಿ ಕೆರೆಯೊಡ್ಡಿನಮೇಲೆ ಬಿದ್ದಿದ್ದ ಶಾಸನ. ಇದರ ಕಾಲ ಕ್ರಿ.ಶ. ೧೦೮೭. ಕುಚಿತಕೂಂಟೆಯ ಮಹಾಜನಗಳಲ್ಲಿ ಶ್ರೇಷ್ಠನೆನಿಸಿದ ಬೇಳ್ಕೆಯರ ಎರೆಯಮಯ್ಯನು ತನ್ನ ಕಟ್ಟಿಸಿದ ಎರೆವಿಷ್ಣು ಕೇಶವ ದೇವರಿಗೆ ದತ್ತಿಗಳನ್ನು ಬಿಟ್ಟ ಉಲ್ಲೇಖ ಈ ಶಾಸನದಲ್ಲಿ ಬಂದಿದೆ. ( ಬೇಳ್ಕೆಯರ್ : ಬೇಳ್ಕೆಯುವರ್ : ಬೇಳುವವರು, ಹೋಮಮಾಡುವವರು; ಅಗ್ನಿಹೋತ್ರಿಗಳನ್ನು ಆಗ ಈ ಕನ್ನಡ ಹೆಸರಿನಿಂದ ಜನರು ಕರೆಯುತ್ತಿದ್ದರೆಂಬಂತೆ ತೋರುತ್ತದೆ. ಅಥವಾ ಕವಿಯೇ ಕನ್ನಡದ ಮೇಲಣ ಅಕ್ಕರೆಯಿಂದ ಕರೆದಿದ್ದಾನೆಯೋ ಏನೋ. ಏನಿದ್ದರೂ ಇದೊಂದು ಸೊಗಸಾದ ಪದಪ್ರಯೋಗವಾಗಿದೆ. )

೧೭ ಕನ್ನಡ ಪದ್ಯಗಳನ್ನುಳ್ಳ ಈ ಶಾಸನಕಾವ್ಯ ಕಲ್ಲಬರೆವಣಿಗೆಯಲ್ಲಿ ೫೧ ಸಾಲುಗಳಲ್ಲಿ ಹಬ್ಬಿದೆ. ಅದರಿಂದ ಕುಚಿತಕೂಂಟೆಯ ನಾಗೂ ಅಲ್ಲಿಯ ವಿಪ್ರರ ವರ್ಣನಾಪದ್ಯಗಳನ್ನು ಇಲ್ಲಿ ಎತ್ತಿಕೊಟ್ಟಿದೆ.

---

1 Bom. Kar. Ins. Vol. I, Part II, Gen. No. 134.

ವಾರಿಧಿವೇಷ್ಟಿತಾವನಿಲತಾಂಗಿಗೆ ಕುಂತಳದೇಶವಾಸ್ಯಮಂ-
ತಾರಮಣೀಯಮಪ್ಪ ಮುಖಪಂಕರುಹಕ್ಕೆ ಲಲಾಟದಂತೆ ವಿ-
ಸ್ತಾರದಿನೊಪ್ಪಿ ತೋಱುವುದು ಬೆಳ್ವೊಲಮಲ್ಲಿ ಲಲಾಮದೊಂದಳಂ-
ಕಾರಸಮನ್ವಿತಂ ಕುಱ್ತಕೂಂಟೆ ವಿರಾಜಿಪುದೀ ಧರಿತ್ರಿಯೊಳ್ ||

ಗ್ರಾಮದ ಪೂರ್ವದಕ್ಷಿಣದಿಶಾಪ್ರವಿಭಾಗದ ಯಾಗಮಂಡಪ-
ಸ್ತೋಮದ ಹೋಮಧೂಮದ ಕವಿಲ್ವೊಗೆ ಪರ್ಬಿ ದಿಶಾಂತರಾಳದಿಂ
ವ್ಯೋಮಮನೆಯ್ದೆ ನೀಳ್ದೆಸೆವುದಬ್ಧಿನಿನಾದಮೆ ವೇದಘೋಷಮೆಂ-
ದೀ ಮಹಿ ಬಣ್ಣಿಕುಂ ಕುಱ್ತಕೂಂಟೆಯ ವಿಪ್ರಜನಾಗ್ರಗಣ್ಯರಂ ||

ಶಾಸನಕವಿ ತನ್ನ ಹೆಸರನ್ನು ಹೇಳುತ್ತಾ, ತನ್ನನ್ನು ಜಯಶೀಲನಾದ ವೀರ ಎಂದು ಹೇಳಿಕೊಂಡಿದ್ದಾನೆ :

ಇಂತೀ ಶಾಸನಗಬ್ಬಮ-
ನೆಂತು ವಿಚಾರಿಪೊಡೆವುಚಿತಮೆಂಬಂತಿರೆ ವಿ-
ಶ್ರಾಂತಧನಂ ಜಯಲಕ್ಷ್ಮೀ-
ಕಾಂತಂ ಪೊಂಬೊಳಲ ನಾಗದೇವಂ ಪೇಳ್ದಂ ||

೩.[1] ಕುರ್ತಕೋಟಿ ವಿರೂಪಾಕ್ಷದೇವಾಲಯದ ಗೋಡೆಯೊಳಗೆ ಕಟ್ಟಿರುವ ಶಾಸನದ ಕಲ್ಲು. ಇದರಲ್ಲಿ ಕವಿನಾಮದ ನಿರ್ದೇಶವಿಲ್ಲ. ಆದರೂ ಈ ಶಾಸನವೂ ಹೊಂಬಳದ ನಾಗದೇವನಿಂದಲೇ ರಚಿತವಾದ ಕಾವ್ಯವೆಂದು ಮನವರಿಕೆಯಾಗುವಂತಹ ಕೆಲವು ಕಾರಣಾಂಶಗಳಿವೆ.

ಅ. ಈ ಶಾಸನದ ಜನನವೂ ಎರಡನೆಯ ಶಾಸನವು ಜನಿಸಿದಂದೇ, ಕ್ರಿ. ಶ. ೧೦೮೭ರಂದೇ, ( ಪ್ರಭವ, ಶ್ರಾವಣ, ಅಮಾವಾಸ್ಯೆ, ಆದಿತ್ಯವಾರ ಸರ್ವಗ್ರಾಸಿಸೂರ್ಯಗ್ರಹಣದಂದೇ ) ಆಗಿದೆ.

ಆ. ಇದರ ಹುಟ್ಟೂ ಆ ಎರಡರ ಊರಲ್ಲೇ ಆಗಿದೆ.

ಇ. ಈ ಶಾಸನವನ್ನು ಕಲ್ಲಮೇಲೆ ಬರೆದುಕೊಟ್ಟವನು ಆ ಎರಡನ್ನು ಬರೆದುಕೊಟ್ಟ ಕುಳಕರಣಿ ಮಾಬಳಾಚಾರ್ಯನೇ. ಈ ಮೂರು ಶಾಸನಗಳಲ್ಲಿಯೂ

1. Bom. Kar. Ins. Vol. I, Part II. Gen. No. 133.

ಬರುವ ಬರೆಹಗಾರನ ಹೆಸರನ್ನು ಹೇಳುವ ಪದ್ಯ ನೂನುಕೂನು ಇಲ್ಲದೆ ಒಂದೇ ಆಗಿದೆ. ಆ ಪದ್ಯವಿದು :

ಪರಹಿತರಿನ್ಸೂರ್ವರ ಪದ-
ಸರಸಿರುಹಾಮೋದಮಧುಕರಂ ಶಿವಭಕ್ತಂ
ಕರವತಿಶಯವಾಗಿರೆ ವಿ-
ಸ್ತರದಿಂ ಕುಳಕರಣಿ ಮಾಬಳಾರ್ಯಂ ಬರೆದಂ ||

೩. ನಾಗದೇವನದೆಂದು ಸ್ಪಷ್ಟನಿರ್ದೇಶವುಳ್ಳ ೨ನೆಯ ಶಾಸನದಲ್ಲಿಯೂ ಈ ಶಾಸನದಲ್ಲಿಯೂ ಬಂದಿರುವ ಮಹಾಜನವಿನ್ಸೂರ್ವರ ಪ್ರಶಸ್ತಿ ಅಭಿನ್ನವಾಗಿದೆ.

೪. ಮೂರು ಶಾಸನಗಳಲ್ಲಿಯೂ ಶೈಲಿ-ಬಂಧಗಳ ಸಾಮ್ಯ ಕಂಡುಬರುತ್ತದೆ.

ಹೀಗೆ, ಕಾಲ-ಮಿತಿ-ಸ್ಥಳಗಳ ಅಭಿನ್ನತ್ವ, ಬರೆಹಗಾರರ ಏಕತ್ವ, ಶೈಲಿ-ಬಂಧಗಳ ಸಮತ್ವ, ಪದ್ಯಗಳ ವಿನಿಮಯ—ಇತ್ಯಾದಿ ನಾಲ್ಕೈದು ಕಾರಣಗಳು ಈ ಮೂರು ಶಾಸನಗಳು ಏಕಕವಿಕರ್ತೃತ್ವವನ್ನೇ ಪ್ರಮಾಣಿಸಿ ತೋರಿಸುತ್ತಿವೆಯೆಂದು ನಿಸ್ಸಂದೇಹವಾಗಿ ಹೇಳಲಭ್ಯಂತರವಿಲ್ಲ.

ನಾವಿದ ದಾಸನೆಂಬವನು ಕಟ್ಟಿಸಿದ ಗುಡಿಗೆ ಮೋರಿಯರ ವಂಶದವರು ದತ್ತಿ-ದಾನಗಳನ್ನು ಬಿಟ್ಟು-ಕೊಟ್ಟುದನ್ನು ಈ ಶಾಸನದಲ್ಲಿ ಹೇಳಿದೆ. ಮೊದಲಿನೆರಡರಿಂದಲೂ ಈ ಶಾಸನ ದೀರ್ಘವಾಗಿದೆ. ಇದರಲ್ಲಿದ್ದ ಪಙ್ಕ್ತಿಗಳು ೬೫; ಕನ್ನಡ ಪದ್ಯಗಳ ಸಂಖ್ಯೆಯೂ ೩೪.

ನಯಸೇನನು ತನ್ನ ಧರ್ಮಾಮೃತ ಕಾವ್ಯದಲ್ಲಿ,

ಪೊಲೆಯರ್ ಭಾವಿಸುವೊಡೆ ದು-
ಷ್ಕುಲರನುಪಮಶುದ್ಧವೃತ್ತಿಯೊಳ್ ನಡೆವೊಡೆ ಭೂ-
ತಲವೆಲ್ಲಂ ಬಣ್ಣಿಸುವುದು
ಕುಲದಿಂದಂ ಧರ್ಮಮಧಿಕಮೆಂದಱಿಪುವವೊಲ್ ||

ಎಂದು, ಆಗಿನ ಜನಗಳಲ್ಲಿ ಕುಲಕ್ಕಿಂತಲೂ ಧರ್ಮವನ್ನು ಅಧಿಕವೆಂದು ಕಾಣುವ ಉದಾರದೃಷ್ಟಿ ಇದ್ದಿತೆಂಬುದಕ್ಕೆ ಪೊಂಬೊಳಲ ನಾಗದೇವನ ಈ

ಶಾಸನಕಾವ್ಯ ಸಾಕ್ಷ್ಯ ನುಡಿಯುತ್ತಿದೆ. ಪರಮಧಾರ್ಮಿಕರಾದ ಮೋರಿಯ ವಂಶದವರನ್ನೂ ಪ್ರಸ್ತುತ ಧರ್ಮಿಣಿಯಾದ ನಾಪಿದ ದಾಸನನ್ನೂ ಈ ಶಾಸನದಲ್ಲಿ ಎದೆಯುಕ್ಕಿ ಕೊಂಡಾಡಲಾಗಿದೆ. ಇದು ಆಗಿನ ಜನರ ಸಹೃದಯ ಭಾವದ ಉಸಿರು.[1] ಈ ಶಾಸನದಿಂದ ಆಯ್ದು ಮೂರು ಪದ್ಯಗಳನ್ನು ಉದಾಹರಿಸಿದೆ:

ಗಂಗರಸರ ಬೀರನುಪ್ರ-
ತ್ತುಂಗಯಶೋಭಾಗಿಯೆಡವ ಬಸವಯ್ಯನುಮಾ-
ಗಂಗರ ಚಾವುಂಡನುಮಾ
ಗಂಗಾಧರಭಕ್ತನೆನಿಪ ಮಾಲರ ಕಲ್ಲಂ ||

ಕೊಡಗರ ಕೇತಂ ಪಡವಳ-
ರರೆಯಮ್ಮಂ ಮಿಕ್ಕ ದಾನಿ ಗಡಿಯರ ಸಿಂಗಂ
ತೊಡರ್ದರ ಗಾಳಂ ಕೆಂಚಂ
ಪೊಡವಿಯೊಳುತ್ಕೃಷ್ಟೆ ಬಮ್ಮಿಕಬ್ಬೆಯ ರಾವಂ ||

ಮೋರಿಯಕುಲತಿಲಕರ್ವಾ-
ಕ್ಸಾರತೆಯೊಳ್ ಸಿರಿಯರೆನಿಪ ಸಾಸಿರ್ವರುವ-
ಸ್ತ್ರಾರಾತಿ ದಾಸಿಗಂ ವಿ-
ಸ್ತಾರದಿ ಮಾಡಿದ ಶಿವಾಲಯಕ್ಕಾದರದಿಂ ||

---

1 ಧನಗರ ಕಂಚಿಕಬ್ಬೆಯನ್ನು ವರ್ಣಿಸಿದ ಸೊಗಲು ಶಾಸನದ ಕವಿ ಕಮಳಾದಿತ್ಯನನ್ನು ( ಕ್ರಿ. ಶ. ೯೮೦ ) ಇಲ್ಲಿ ನೆನೆಯಬಹುದು.

## ೩೯. ಕರ್ಪರಸ

( ೧೦೮೪ )

ಬೆಳಗಾವಿ ಜಿಲ್ಲೆಯ ರಾಮದುರ್ಗ ತಾಲೂಕಿನ ಹದ್ಲಿ ಗ್ರಾಮದಲ್ಲಿರುವ, ಚಾಳುಕ್ಯ ೬ನೆಯ ವಿಕ್ರಮಾದಿತ್ಯನ ಆಳಿಕೆಯಲ್ಲಿ ಕ್ರಿ. ಶ. ೧೦೮೪ರಲ್ಲಿ ಹುಟ್ಟಿದ ಶಾಸನವೊಂದನ್ನು[1] ಕರ್ಪರಸನೆಂಬವನು ರಚಿಸಿದ್ದಾನೆ. ೮ ಪದ್ಯಗಳುಳ್ಳ ೪೦ ಪಙ್ಕ್ತಿಗಳ ಈ ಚಿಕ್ಕ ಶಾಸನದ ಕವಿ ತನ್ನ ಪರಿಚಯವನ್ನು ಕೊನೆಯ ನಾಲ್ಕು ಸಾಲುಗಳಲ್ಲಿ ಹೇಳಿಕೊಳ್ಳುತ್ತ ತನ್ನನ್ನು 'ಕವಿತಾಮನೋಹರ' ಎಂದು ಕರೆದುಕೊಂಡಿದ್ದಾನೆ. ಅಲ್ಲಿ ಉಕ್ತವಾದಂತೆ ಕರ್ಪರಸನು ಕವಿ[ದಿ]ಳರ ಮನೆತನದ ಶೈವಬ್ರಾಹ್ಮಣನೆಂದೂ ಚಂದ್ರ ಮತ್ತು ಚಾಮಾಂಬಿಕೆಯರ ಮಗನೆಂದೂ ಮಹಾಸಂಧಿವಿಗ್ರಹಿ ದಂಡನಾಯಕ ಕಾಳಿದಾಸನ ಅಳಿಯನೆಂದೂ ತಿಳಿಯುತ್ತದೆ.

ಕರ್ಪರಸ ಕವಿಯ ಎರಡು ಪದ್ಯಗಳು ಮತ್ತು ಚುಟುಕುಗದ್ಯ ಕೆಳಗಿವೆ:

ಜನಕಂ ವಿಪ್ರಕುಳಾಂಬರದ್ಯುಮಣಿ ಚಂದ್ರಂ ತಾಯ್ಸದಾಚಾರವ
ರ್ತಿನಿ ಚಾಮಾಂಬಿಕೆ ನಿರ್ಮಳೋರ್ಜಿತಯಶಂ ಶ್ರೀ ಕಾಳಿದಾಸಂ ಧರಾ
ವಿನುತಂ ಮಾವನುಮಾವರಂ ಸಕಲಲೋಕಾರಾಧ್ಯನಾರಾಧ್ಯನೆಂ
ದು ನಿತಾಂತಂ ಧರೆ ಬಣ್ಣಿಕುಂ ಬುಧಸಮೂಹಂ ಕರ್ಪಱಂ ಕರ್ಪನಂ
॥ ೧ ॥

ಸ್ಮರಪರಿತಾಪಮಂ ಶೋಷಿದನಕ್ರಮದಿಂ ವಿಷಯಂಗಳೆಲ್ಲಮಂ
ಹರಿಸಿಹನೆಂದು ಲೋಕವಿನಿತುಂ ನೆಱೆ ಕೀರ್ತಿಪುದಿಂತಿದೇಕೆ ವಾ
ಕ್ತರುಣಿಗೆ ಸೋಲ್ತು ಮುಕ್ತಿವಧುಗಾಟಿಸನೆಂದಡೆ ಜ್ಞಾನಶಕ್ತಿದೇ
ವರ ಚರಿತಂ ಚರಾಚರದೊಳಂ ಬಗೆವಾಗ ವಿಚಿತ್ರಮಲ್ಲಿಯುಂ ॥ ೨ ॥

ಶ್ರೀಮದಗ್ರಹಾ ಪಬ್ದಲಿ ( ಇಂದಿನ ಹದ್ಲಿ ) ನಾಲ್ಮ್ಮಾಱುಪ್ಪದಿಂಬರ ಕೈಯೊಳ್ ಜ್ಞಾನಶಕ್ತಿ ಪಂಡಿತರ್ ದ್ರವ್ಯಪೂರ್ವಕದಿಂ ಸರ್ವನಮಸ್ಯಮಾಗೆ ಯೂರಿಂಗೀಶಾನ್ಯದ ಛತ್ರದ ಕೆಯ್ಯುಂ ಪಡುವಣ ಪಾಳ ಕೆಯ್ಯುಂ ಕೊಂಡು ಗವರೇಶ್ವರದೇವರ್ಗೆ ಬಿಟ್ಟ ಮತ್ತ ೫ ಅಯ್ದು.

---

1 BKI. Vol. IV, Ins. No. 57.

# ೪೦. ಮಾಳಪಯ್ಯ

(೧೦೮೫)

ಧಾರವಾಡ ಜಿಲ್ಲೆಯಲ್ಲಿ ಕರ್ಜಗಿಯಿಂದ ಪಶ್ಚಿಮಕ್ಕೆ ೩ ಮೈಲಂತರದಲ್ಲಿರುವ ಕೋಳೂರು ಗ್ರಾಮದ ಕ್ರಿ. ವ. ೧೦೮೫-೮೬ರ ವೀರಗಲ್ಲು[1], ಆವೂರ ಗಾವುಂಡ ಮನೆತನದ ಬಸವನು ಪ್ರಭುಕಾರ್ಯಕ್ಕಾಗಿ ಮಡಿದುದನ್ನು ಉಲ್ಲೇಖಿಸುತ್ತದೆ. ಅದರಲ್ಲಿ ೮ ಕಂದಪದ್ಯಗಳುಂಟೆಂದು ತೋರುತ್ತದೆ. ಶಾಸನವು ಮೊದಲಿನಿಂದ ಕೊನೆಯವರೆಗೆ ಅರ್ಥಮರ್ಥ ಅಳಿದಿರುವುದರಿಂದ ಓದಿ ಅರ್ಥ ಹೊಂದಿಸಲಾಗುವುದಿಲ್ಲ. ಕೊನೆಯ ಸಾಲಿನಲ್ಲಿ 'ಕೇತಮಲ್ಲನನೋದಿಸಿದ ಉಪಾಧ್ಯಾಯಂ ಮಾಳಪಯ್ಯಂ ಬರೆದಂ' ಎಂದಿದೆ. ಬರೆದವನು ಉಪಾಧ್ಯಾಯನಾಗಿರುವುದರಿಂದ ಪದ್ಯಕರ್ತೃ ಆತನೇ ಆಗಿರುವ ಸಂಭವ ಹೆಚ್ಚಾಗಿದೆ. ಅವನ ಛಾತ್ರ ಕೇತಮಲ್ಲನು ಸ್ವಾಮಿಕಾರ್ಯಕ್ಕಾಗಿ ಜೀವತೆತ್ತ ಬಸವನ ತಮ್ಮ.

---

1 Ep. Ind. XIX, page 190.

# ೪೧. ದಾಮರಾಜ

( ೧೦೮೫ )

ಶಿವಮೊಗ್ಗೆಯ ೧೦ನೆಯ ಶಾಸನವನ್ನು ಬರೆದಿರುವನೆಂದು ಶಾಸನದ ಕೊನೆಯ 'ಸಂಧಿವಿಗ್ರಹಿ ದಾಮರಾಜಂ ಸಾಸನಗಬ್ಬಮಂ ಪೇೞ್ದು ಬರೆದಂ' ಎಂಬ ವಾಕ್ಯದಿಂದ ತಿಳಿಯುತ್ತದೆ. ಚಾಲುಕ್ಯ ವಿಕ್ರಮಾದಿತ್ಯನ ಸಾಮಂತ ಗಂಗಪೆರ್ಮಾಡಿಯ ಮಹಾಪ್ರಧಾನನಾದ ಹೆಗ್ಗಡೆ ನೊಕ್ಕಯ್ಯನು ಬಸದಿಗಳನ್ನು ಕಟ್ಟಿಸಿದಂತೆಯೂ ಗಂಗಪೆರ್ಮಾನಡಿ ಅವುಗಳಿಗೆ ( ೧೦೮೫ ) ದತ್ತಿ ಬಿಟ್ಟಂತೆಯೂ ಹೇಳಿದೆ. ಈತನು ಸಂಧಿವಿಗ್ರಹಿಯಾಗಿದ್ದನು.

ಒಂದು ಪದ್ಯವನ್ನು ನೋಡಿ :

ಪಾರ್ಥಿವರಂ ನಿರಾಕರಿಪ ದಾನಗುಣೋಕ್ತಿಯಿನರ್ಥಿಗರ್ಥಮಂ
ಪ್ರಾರ್ಥಿಸದೀವ ಕಾರಣದೆ ಪೆರ್ಗಡೆ ನೊಕ್ಕಣನೀಪರೋಪಕಾ-
ರಾರ್ಥಮಿದಂ ಶರೀರಮೆನಿಪೊಂದು ಪುರಾಣವಚೋಕ್ತಿಯಿಂದ ಮ-
ಪಾರ್ಥಿತದಾನದಿಂದೆ ನೆಗೞ್ದುನ್ನತಿ ಸಂದುದಿಳಾತಳಾಗ್ರದೊಳ್
|| ೨ ||

# ೪೨. ಮಾಧವಭಟ್ಟ

(೧೦೯೧)

ಕ್ರಿ. ಶ. ೧೦೯೧ರಲ್ಲಿ ಹುಟ್ಟಿದ ಸೊರಟೂರು (ಗದುಗು ತಾಲೂಕು, ಧಾರವಾಡ ಜಿಲ್ಲೆ) ಶಾಸನವನ್ನು[1] ಈತನು ಬರೆದಿದ್ದಾನೆ. ಶಾಸನ ಚಿಕ್ಕದು; ೩೨ ಸಾಲುಗಳದು: ಅದರಲ್ಲಿರುವ ಕನ್ನಡಪದ್ಯಗಳ ಸಂಖ್ಯೆ, ಕವಿನಾಮ ನಿರ್ದೇಶದ ಪದ್ಯ ಸಹವಾಗಿ ನಾಲ್ಕೇ. ತೆಲ್ಲಿಗರ ಜಕ್ಕಿಯಬ್ಬೆ ಎಂಬಾಕೆ ಸತ್ರವನ್ನು ಮಾಡಿಸಿ ಭೂಮಿಯನ್ನು ಬಿಟ್ಟಂತೆ ಅದರಲ್ಲಿ ಹೇಳಿದೆ.

ಕವಿ ತನ್ನ ಬಗ್ಗೆ ಕೊನೆಯಲ್ಲಿ ಹೀಗೆ ಹೇಳಿಕೊಂಡಿದ್ದಾನೆ:

ಕೊಟ್ಟು ಕುಱುಪಿಂಗೆ ಬಗೆ ನೇ-
ರ್ಪಟ್ಟಿರೆ ರಸಭಾವಮರ್ಥಗೌರವದೊಳೊಡಂ-
ಬಟ್ಟಿರೆ ಪೇಳ್ದಂ ಮಾಧವ-
ಭಟ್ಟಂ ವಾಕ್ಶ್ರೀಲಲಾಟಮಣಿಮಯಪಟ್ಟಂ ||

ಈ ಚಿಕ್ಕ ಶಾಸನದ ಮಟ್ಟಿಗೆ ನೋಡಿದರೆ ಕವಿ ಹೀಗೆ ಹೇಳಿಕೊಂಡುದು ಹೆಚ್ಚೆಂದೇ ತೋರುತ್ತದೆ. ಆದರೆ, ಒಳ್ಳೆಯ ಕಾವ್ಯದ ಲಕ್ಷಣಗಳೇನು ಎಂಬುದನ್ನು ಬಲ್ಲವನಾಗಿ ಚೆಂದವಾಗಿ ತಿಳಿಸಿದ್ದಾನೆ. ಇವನು ಸಾಕಷ್ಟು ಓದಿಕೊಂಡವನೂ ಭಾಷಾಜ್ಞಾನ ಚೆನ್ನಾಗಿ ಉಳ್ಳವನೂ ಆಗಿದ್ದನೆಂಬುದರಲ್ಲಿ ಸಂದೇಹವಿಲ್ಲ.

ಮಾಧವಭಟ್ಟನ ಶಾಸನದ ಚಿಕ್ಕ ಗದ್ಯವನ್ನೂ ಉಳಿದ ಮೂರು ಪದ್ಯಗಳನ್ನೂ ಇಲ್ಲಿ ಕೊಟ್ಟಿದೆ:

ಸ್ವಸ್ತ್ಯನಂತಾನಂತಕಾಲಾಭ್ಯಂತರ ತಮಸ್ತಮಂಧಕಾರ ವಿನಿರ್ಗತ ಮಹಾಶಕ್ತಿಸ್ವರೂಪಸಮುದ್ಭೂತೆ, ತ್ರಿಜಗದ್ವ್ಯಾಪ್ತಕೀ[ರ್ತಿ], ಪರಮೌದಾರಿಕ ಮಹಾಮೂರ್ತೆ, ವಾ[ರಾ]ದಿ ಸಪ್ತಕತೀರ್ಥಪವಿತ್ರೀಕೃತೋತ್ತಮ,

1 Bom. Kar. Ins. Vol. I. Part II, Gen. No. 137.

ಶ್ರೀಮತ್ಕೊಲ್ಲಾಪುರದ ಮಹಾಲಕ್ಷ್ಮೀದೇವಿಯ ಸೊಱಟವುರಮಂ ದುಷ್ಟ ನಿಗ್ರಹ ವಿಶಿಷ್ಟ ಪರಿಪಾಳನಯಿನಾಳ್ದು ಪರಿರಕ್ಷಿಸುತ್ತಮಿರೆ, . . .

ಕ್ರಮದಿಂ ದೇವಣಸೆಟ್ಟಿಗಂ ಪತಿಹಿತಪ್ರಖ್ಯಾತೆ ಸಾಯಬ್ಬೆಗಂ
ಕ್ಷಮೆಯಂ ತಾಳ್ದಿದ ಜಕ್ಕಿಯಬ್ಬೆ ಶುಭಮಾಗಲ್ಪುಟ್ಟಿ ತಾನನ್ನದಾ-
ನಮನಿಕ್ಕಲ್ ಮಹಿಯ[ಂ*] ವಿನೀತೆ ಸೊಱಟೂರಿನ್ನೂರ್ಬರಂ ಬೇಡಿಕೊಂ-
ಡು ಮನೋರಾಗದೆ ಪಾದಪೂಜೆವೆರಸಿಂತೀ ಸತ್ರಮಂ ಮಾಡಿದಳ್ ||

ಉತ್ತಮರಿನ್ನೂರ್ಬರುಮೊಸೆ-
ದಿತ್ತಡೆ ಕೈಕೊಂಡು ಪಾದಪೂಜಾವಿಧಿಯಂ
ಪೊತ್ತಾಱು ಮತ್ತರಂ ಸ್ವಕು-
ಳೋತ್ತಮೆ ಸತಿ ಜಕ್ಕಿಯಬ್ಬೆ ಸತ್ರಕ್ಕಿತ್ತಳ್ ||

ದಾನದೊಳನ್ನಮೆ ಸಾರಂ
ದೀನಾನಾಥರ್ಗೆ ತುಷ್ಟಿದಾನಮೆನುತ್ತಂ
ತಾನಱಿದು ಜಕ್ಕಿಯಬ್ಬೆ ಯ-
ಶೋನಿಧಿ ಸತ್ರಕ್ಕೆ ಭೂಮಿದಾನಮನಿತ್ತಳ್ ||

## ೪೩. ನಾಗಾರ್ಜುನಪಂಡಿತ

( ೧೦೯೪ )

ಕಲಬುರ್ಗಿ ಜಿಲ್ಲೆಯ ಇಂಗಳಿಗೆ ಎಂಬ ಗ್ರಾಮದಲ್ಲಿ ಹಾಳು ಬಸದಿಯಲ್ಲಿ ದೊರೆತಿರುವ ಒಂದು ಶಾಸನವು[1] ನಾಗಾರ್ಜುನ ಪಂಡಿತನೆಂಬ ಜೈನ ಕವಿ ಬರೆದುದಾಗಿದೆ. ಶಾಸನದ ಕೊನೆಯ ಗದ್ಯದಲ್ಲಿ ಇವನು ತನ್ನ ಹೆಸರನ್ನು 'ವಾಗ್ವಧೂನಂದನಂ' ಎಂದು ಪ್ರಶಸ್ತಿಪೂರ್ವಕವಾಗಿ ಉಲ್ಲೇಖಿಸಿದ್ದಾನೆ:

"ವಾಗ್ವಧೂನಂದನಂ, ಜಿನಪಾದಾಂಭೋಜಭೃಂಗಂ, ನಾಗಾರ್ಜುನ ಪಂಡಿತಂ ಬರೆದಂ. ಮಂಗಳಮಹಾಶ್ರೀ."

ಇಲ್ಲಿ ಪೇಳ್ದಂ ಎಂದಾಗಲಿ, ರಚಿಸಿದಂ ಎಂದಾಗಲಿ ಕರ್ತೃಕತ್ವದ ಸ್ಪಷ್ಟ ಪದಪ್ರಯೋಗವಿಲ್ಲದಿದ್ದರೂ 'ಬರೆದಂ' ಎಂಬಲ್ಲಿಯೇ ಆ ವಿಶೇಷಾರ್ಥವು ಹೊರಡುತ್ತಿದೆ. ನಾಗಾರ್ಜುನ ಪಂಡಿತನು ಸರಸ್ವತಿಯ ಪುತ್ರನೆಂಬ ಬಿರುದಿನಲ್ಲಿಯೇ ಕವಿತ್ವಶಕ್ತಿಯುಳ್ಳವನೆಂದು ಸೂಚಿತವಾಗಿರುವುದರಿಂದ ಈ ಶಾಸನವನ್ನು ರಚಿಸಿದ ಕಬ್ಬಿಗನು ಇವನೇ ಎಂಬುದು ಸಹಜಸಿದ್ಧವಾದ ಮಾತಾಗಿದೆ.

ಚಾಳುಕ್ಯ ೬ನೆಯ ವಿಕ್ರಮಾದಿತ್ಯನು ತನ್ನೊಲವಿನ ಮಡದಿ ಜಾಕಲ ದೇವಿಯೊಡನೆ ಒಮ್ಮೆ ಸುಖಸಂಕಥಾ ವಿನೋದದಲ್ಲಿ ಕಾಲಕ್ಷೇಪ ಮಾಡುತ್ತಿರುವ ಸಮಯದಲ್ಲಿ ಒಬ್ಬ ಶ್ರೇಷ್ಠಿ ಬಂದು, ಸುಂದರವಾದ ಜಿನಪ್ರತಿಮೆಯೊಂದನ್ನು ಅವರಿಗೆ ತೋರಿಸುತ್ತಾನೆ. ಅದನ್ನು ಮೆಚ್ಚಿದ ವಿಕ್ರಮ ತನ್ನ ಮಡದಿಗೆ, 'ನಿನ್ನಾಳಿಕೆಯ ಊರೊಳಗೆ ಇದನ್ನು ಪ್ರತಿಷ್ಠಿಸು' ಎಂದು ಹೇಳಿ ಕೊಡಿಸುತ್ತಾನೆ. ಈ ಸರಸಸನ್ನಿವೇಶವೂ ಚಕ್ರವರ್ತಿ ತನ್ನ ಹೆಂಡತಿಯ ವ್ರತವನ್ನು ಕೆಡಿಸುವೆನೆಂದು ಪ್ರತಿಜ್ಞೆಯಿಂದ ಹವಣಿಸಿ ಸೋತನೆಂದು ಹೇಳುವ ಪ್ರೇಮಕಲಹದ ಉಲ್ಲೇಖವೂ ಹೃದಯಂಗಮವಾಗಿವೆ. ಜಾಕಲದೇವಿ ಜಿನ

---

1 Jainism in South India & Some Jaina Epigraphs—Dr. P. B. Desai—p. 229.

ಬಿಂಬವನ್ನು ಪ್ರತಿಷ್ಠಿಸಿ ಗುಡಿಯನ್ನು ಕಟ್ಟಿಸಿ, ಅದನ್ನು ತಳವೃತ್ತಿಸಹಿತವಾಗಿ ಇಂದ್ರಸೇನಭಟ್ಟಾರಕರಿಗೆ ಒಪ್ಪಿಸಿದಳೆಂಬ ಸಂಗತಿ ಈ ಶಾಸನದಲ್ಲಿ ಬಂದಿದೆ. ಅಯ್ವತ್ತೆಂಟೇ ಸಾಲುಗಳುಳ್ಳ ಈ ಚಿಕ್ಕ ಶಾಸನಕಾವ್ಯದಲ್ಲಿ ಸರಸಸನ್ನಿವೇಶಗಳನ್ನು ಭಾವಪೂರ್ಣವಾಗಿ ಸುಲಲಿತವಾಗಿ ಕವಿ ಚಿತ್ರಿಸಿದ್ದಾನೆ. ಇದರಲ್ಲಿ ಪದ್ಯಗಳ ಸಂಖ್ಯೆ ಒಂಬತ್ತೇ ಆದರೂ 'ಗದ್ಯಂ ಹೃದ್ಯಂ' ಆಗಿದೆ. ಈ ಶಾಸನದ ಕಿಂಚಿತ್ಕಾವ್ಯಾಂಶವನ್ನು ಇಲ್ಲಿ ಕೊಟ್ಟಿದೆ:

**ಜಾಕಲದೇವಿ**

ಸ್ವಸ್ತ್ಯನವರತ ಪರಮಕಲ್ಯಾಣಾಭ್ಯುದಯ ಸಹಸ್ರಫಳಭೋಗಭಾಗಿನಿ, ಸಕಳ ದೀನಾನಾಥಮನಃಸಂತರ್ಪಣೋದ್ಯೋಗಿನಿ, ಸಮಸ್ತಾಂತಃಪುರ ನಿತಂಬಿನೀಕದಂಬಚೂಡಾಮಣಿ, ಚತುರ್ವಿಧದಾನಚಿಂತಾಮಣಿ, ರಂಭಾವಿಳಾಸೋಪಹಸಿತಸ್ಫೂರ್ತಿ, ದಿಗ್ವಿಜಯವಿಳಸಿತೋಜ್ಜ್ವಳಕೀರ್ತಿ, ಕಲಿಕಾಲ ಪಾರ್ವತಿ, ಅಭಿನವಸರಸ್ವತಿ, ರಾಯಚೇತೋವಶೀಕರಣಕರಣವಿದ್ಯಾಧರಿ, ಸಕಳಕಳಾಧರಿ, ಸೀತಾದ್ಯನೇಕಮಹಾಸತೀಜನಪತಿಬ್ರತಾಚಾರಶೀಳೋದಾರ ವರ್ಣನಕಥಾಪ್ರಸಂಗೆ, ಜಿನಗಂಧೋದಕಪವಿತ್ರೀಕೃತೋತ್ತಮಾಂಗೆ, ಶ್ರೀಮದರ್ಹತ್ಪರಮೇಶ್ವರಚಾರುಚರಣಾರ್ಚನವಿನೋದೆ, ಮೃಗಮದಾಮೋದೆ, ಸಹಜಬೆಡಂಗಿ, ತಿಕ್ಕಣನಣುಂಗಿ, ಶ್ರೀಮತ್ತ್ರಿಭುವನಮಲ್ಲದೇವವಿಶಾಳವಕ್ಷಃಸ್ಥಳನಿವಾಸಿನಿಯರಪ್ಪ ಶ್ರೀಮಜ್ಜಾಕಳದೇವಿಯರುಜಿಲ್ಪೂಸೂಜಿಜೊಳಗಣಿಂಗುಣಿಗೆಯಂ ತ್ರಿಭೋಗಾಭ್ಯಂತರಸಿದ್ಧಿಯಿನಾಳುತ್ತಮಿರೆ,

ಜನಕಜೆಯಂತೆ ಸಜ್ಜನಜನಸ್ತುತೆ ಪಾರ್ವತಿಯಂತೆ ಜೀವಿತೇ-
ಶನೊಳವಿಕಳ್ಪಭಾವೆ ಧರೆಯಂತೆ ಧೃತಕ್ಷಮೆ ರಂಭೆಯಂತೆ ರೂ-
ಪಿನ ನೆಲೆ ಪೆಂಪುವೆತ್ತಮರಧೇನುವಿನಂತನಿಮಿತ್ತದಾನಿ ಕಾ-
ಮನ ಸರಲಂತಿರಯ್ದೆ ಪರಿಭಾವಿಸೆ ಜಾಕಲದೇವಿ ಧಾತ್ರಿಯೊಳ್ ||

ಬ್ರತಮಂ ಚಾಳುಕ್ಯಕ್ಷಿತಿ-
ಪತಿಕಿಡಿಸುವೆನೆಂದು ಪೂಣ್ದಡಂ ಕಿಡಿಸದದಂ
ಪ್ರತಿಪಾಳಿಸಿದೊಂದು ಮಹೋ-
ನ್ನತಿ ಜಾಕಲದೇವಿಗೆಕ್ಕಲಾವಣಮಲ್ತೆ ||

## ಶಾಸನರಕ್ಷಣೆಯ ಫಲ

ನಿಯತಂ ಚಕ್ರಿಯ ಕಯ್ಯೊಳಾಳ್ಕೆವಡೆದಾ ಸಾಮಂತರುಂ ನಾಡ ಮ-
ನ್ನೆಯರುಂ ಗ್ರಾಮದ ಮೂಲಿಗಪ್ರಭುಗಳಿಂತೀಧರ್ಮಮಂ ಸಂದಕ್ತಿ-
ಪ್ರಿಯದಿಂ ರಕ್ಷಿಸುತಿಕ್ಕೆ ರಕ್ಷಿಸುತಿರಲ್ದೀರ್ಘಾಯುಮಂ ಪುಣ್ಯವೃ-
ದ್ಧಿಯುಮಂ ನಿರ್ಮಳಕೀರ್ತಿಯುಂ ಪಡೆವರಾಚಂದ್ರಾರ್ಕತಾರಂಬರಂ||

## ೪೪. ಶ್ರೀಕಂಠಸೂರಿ

(೧೦೯೯)

ಬಳ್ಳಾರಿ ಜಿಲ್ಲೆಯ ಹರಪನಹಳ್ಳಿ ತಾಲೂಕಿನ ಕುರುವತ್ತಿ ಗ್ರಾಮದ ಕಲ್ಲೇಶ್ವರದೇವರ ಗುಡಿಯ ಬಳಿ ನಿಂತಿರುವ ಕ್ರಿ. ಶ. ೧೦೯೯ರ ಒಂದು ಶಾಸನವನ್ನು ಶ್ರೀಕಂಠಸೂರಿ ಎಂಬ ಕವಿ ರಚಿಸಿದ್ದಾನೆ. ಊರಬಳಿ ತುಂಗಭದ್ರಾತೀರದಲ್ಲಿ ಸಾಕ್ಷಾತ್ ಸೋಮೇಶ್ವರನ ಉದ್ಭವವಾದುದನ್ನು ಕೇಳಿ, ಕುರುವತ್ತಿಯ ಊರೊಡೆಯನೂ ಮಹಾಜನಗಳೂ ಅತಿಸಂಭ್ರಮದಿಂದ ಆ ಸ್ಥಳಕ್ಕೆ ಹೋಗಿ ದರ್ಶನ ಪಡೆಯುತ್ತಾರೆ; ಆ ದೇವರಿಗೊಂದು ದೇಗುಲ ಮಾಡಿ, ದತ್ತಿಗಳನ್ನು ಬಿಡುವಾ ಎಂದು ವಿಚಾರಮಾಡುತ್ತಾರೆ; ಅದರ ಆಡಳಿತವನ್ನು ಎಂತಹರ ಕೈಗೊಪ್ಪಿಸಬೇಕೆಂದು ಆಲೋಚಿಸಿ, ಕಾಶ್ಮೀರದೇವ ವಂಶದ ಲಕುಳೀಶ ಪಂಡಿತರೇ ಅದಕ್ಕೆ ತಕ್ಕವರೆಂದು ಬಗೆದು ಅವರನ್ನಲ್ಲಿ ಸ್ಥಾನಾಚಾರ್ಯರನ್ನಾಗಿ ನಿಯಮಿಸುತ್ತಾರೆ. ಈ ಸಂಗತಿಯನ್ನೆಲ್ಲ ವಿವರವಾಗಿ ಬಣ್ಣಿಸುವ ಈ ಶಾಸನ ೮೧ ಸಾಲುಗಳುಳ್ಳದಾಗಿ, ೫೮ ಕನ್ನಡ ಪದ್ಯಗಳುಳ್ಳ ಚಂಪೂಕಾವ್ಯವಾಗಿದೆ. ಭಾಷೆ ತಿಳಿಯಾಗಿ, ಬಂಧ ಬಂಧುರವಾಗಿ ಸೊಗಸಾಗಿದೆ ಕಾವ್ಯ. ದೇವರಿಗೆ ಕೆಲವು ಸುಂಕಗಳನ್ನು ಬಿಟ್ಟರೆಂಬ ವಿಷಯವನ್ನು ಕೂಡ ಕವಿ ಪದ್ಯಗಳಲ್ಲಿಯೇ ತಿಳಿಸಿದ್ದಾನೆ.

ಇಡೀ ಶಾಸನವೆಲ್ಲ ನಾಡನುಡಿ ಕನ್ನಡದಲ್ಲಿಯೇ ಬರೆಯಲಾಗಿದೆ. ಆದರೆ, ಕವಿ ತನ್ನ ಹೆಸರನ್ನು ಮಾತ್ರ ಒಂದು ಸಂಸ್ಕೃತ ಪದ್ಯದಲ್ಲಿ ಹೇಳಿಕೊಂಡಿದ್ದಾನೆ. ಆ ಪದ್ಯ :

ವಿದ್ಯಾವಧೂಭಾಸುರಕರ್ಣಪೂರಃ
ಶ್ರೀ ಕಾಳಿದಾಸ ವಿಬುಧಾಸತೇಸ್ತನೂಜಃ
ಸೋಮೇಶಶಾಸನವಚೋರಚನಾಂ ವಿಧಾಯ
ಶ್ರೀಕಂಠಸೂರಿರಲಿಖದ್ವಿಬುಧೈರ್ವಿಚಾರ್ಯಮ್ ||

---

1 South Ind. Ins. Vol IX, Part I. Gen. No. 165.

'ಕಾಳಿದಾಸನೆಂಬ ಶ್ರೇಷ್ಠ ಬ್ರಾಹ್ಮಣನ ಮಗನಾದ, ಸರಸತಿಗೆ ಕಿವಿ ದೊಡವಿನಂತಿರುವ ಶ್ರೀಕಂಠಸೂರಿ ಸೋಮೇಶ್ವರನ ಈ ಶಾಸನವನ್ನು ಬರೆದನು; ಬಲ್ಲವರು ಬಗೆದು ನೋಡಿಕೊಳ್ಳುವುದು' ಎಂಬುದೀ ಪದ್ಯದ ತಾತ್ಪರ್ಯಾರ್ಥ. ಕನ್ನಡ ಶಾಸನದಲ್ಲಿ ಕವಿ ಕನ್ನಡದಲ್ಲಿಯೇ ಹೆಸರನ್ನು ಹೇಳಿಕೊಳ್ಳಬಹುದಿತ್ತು. ಆದರೆ, ಸಂಸ್ಕೃತದಲ್ಲಿಯೂ ತಾನು ಕಾವ್ಯರಚನೆ ಮಾಡಬಲ್ಲನೆಂಬುದನ್ನು, ಉಭಯಭಾಷಾಕವಿಯೆಂಬುದನ್ನು ತೋರಿಸಿಕೊಳ್ಳುವುದಕ್ಕಾಗಿ, ಉದ್ದೇಶಪೂರ್ವಕವಾಗಿ ಸಂಸ್ಕೃತ ಪದ್ಯದಲ್ಲಿ ಹೆಸರನ್ನು ಹೇಳಿಕೊಂಡಿರುವನೆಂದು ತೋರುತ್ತದೆ.

ಈ ಶ್ರೀಕಂಠಸೂರಿ ಕವಿಯು ಶಾಸನವಚೋರಚನೆಗೆ ಉದಾಹರಣೆ:

ಕುಪ್ಪಟೂರು

ಆ ನಾಡೊಳಗಗ್ರಹಾರಂ
ಭೂನಾರೀಹಾರಮಧಿಕವಿಬುಧಾಧಾರಂ
ಶ್ರೀನಾರಿಗಿರಲಗಾರಂ
ಭೂನಿಧಿ ಕುಪ್ಪಟೂರ್ ನೋಡೆ ಸೊಗಯಿಸುತಿರ್ಕುಂ ||

ಸೋಮೇಶ್ವರೋದ್ಭವ

ಶ್ರೀಭುವನಸಂಭವಸ್ಥಿತಿಲಯಂಗಳಿಗೊರ್ವನೆ ಕರ್ತೃವೆಂದು ಸಂ-
ದ ಭವಿನಿಕಾಯಸಂಸರಣ ಘೋರಮಹಾರ್ಣವ ಕರ್ಣಧಾರನೆಂ-
ದಭಿಯಿಪಂತೆ ದಕ್ಷಿಣಸುರಾಪಗೆಯೊಳ್ ನೆರೆಯಲ್ಕೆ ಬಂದನೊ-
ಲ್ದಭಿನವ ಸೋಮನಾಥನಮರೋತ್ಕರನಾಥನನಾಥನಮ್ಮಯಂ ||

ವ|| ಬಂದನೇಶ್ವರನುಂ ಭುವನಭಾಸ್ವರನುಂ ವಿಶ್ವೇಶ್ವರನುಮಪ್ಪಭಿನವ ಸೋಮೇಶ್ವರನಂ ಕಂಡು ನಿಟಿಲತಟಘಟಿತಕರಕಮಳಕುಟ್ಮಳರಾಗಿ, 'ಸ್ವಾಮಿ ದೇವರ್ಗಂಗಭೋಗಾದಿ ನಿಮಿತ್ತವಾಗಿ ವೃತ್ತಿಯಂ ಬೇರುವಮಪ್ಪ-ಡಾರ್ಯರುಮಾರ್ಯವೀರ್ಯರುಮಚಳಿತಧೈರ್ಯರುಂ ಬ್ರಹ್ಮಚರ್ಯವ್ರತ-ಧುರ್ಯರುಮಪ್ಪಾಚಾರ್ಯರಾಗಲ್ವೇಳ್ಕುಂ' . . . .

ಗವರೆಗಳಯ್ನೂರ್ವರುಮಭಿ-
ನವಸೋಮೇಶಂಗೆ ಮುಂದಿನಲು ಪಣವೊಂದಂ

ಧ್ರುವಮಾಗೆ ಪಸುಂಬೆಗೆ ಹಾ-
ಗವನೆಱಕತೆ ಕರ್ತೆಯಲ್ಲಿ ಬೇಳೆಯನಿತ್ತರ್ ||

ಅಂಗಡಿಯೊಳು ಸುಂಟಿಗೆ ಭ-
ತ್ತಂ ಗಾಣದೊಳೊಂದು ಸೊಟಿಗೆಯೆಣ್ಣೆಯನಿತ್ತ-
ರ್ಗಂಗಾತರಂಗಭಂಗಾ-
ಲಿಂಗಿತಜೂಟಂಗೆ ಪರದರುಂ ತೆಲ್ಲಿಗರುಂ ||

ಪೆಸಱುಪ್ಪು ಕಡಲೆ ಗೋಧುವೆ
ಮಿಸುಪೆಳ್ಳೆಂಬಿವಱ ಪೇಱು ಮೂವತ್ತರ್ಕೊಂ-
ದೆಸವ ದವಸಕ್ಕಮಾರ್ಪಿಂ
ದೊಸೆದಿರ್ಪತ್ತಕ್ಕೆ ಕೊಟ್ಟರೊಂದಂ ಮುದದಿಂ ||

## ೨೫. ಮಲ್ಲ

(೧೦೯೯)

ಚಿಕ್ಕಹಂದಿಗೋಳ ಎಂಬುದು ಧಾರವಾಡ ಜಿಲ್ಲೆಯ ಗದುಗು ತಾಲೂಕಿನಲ್ಲಿರುವ ಒಂದು ಗ್ರಾಮ. ಅಲ್ಲಿ ಹನುಮಂತದೇವರ ಗುಡಿಯ ಗೋಡೆಯಲ್ಲಿ ಶಾಸನಶಿಲೆಯೊಂದು ಸಿಕ್ಕಿದೆ.[1] ಕ್ರಿ. ಶ. ೧೦೯೯ರಲ್ಲಿ ಹುಟ್ಟಿದುದು ಆ ಶಾಸನ. ಕಲ್ಬರೆಹದ ೭೭ ಸಾಲುಗಳಲ್ಲುಳ್ಳ ಈ ಕಾವ್ಯ, ದತ್ತಿಗಳ ವಿಷಯವೊಂದನ್ನು ಹೊರತಾಗಿ ಬಹುಶಃ ಪೂರ್ಣ ಪದ್ಯಮಯವಾಗಿದೆ. ಇದು ಒಳಕೊಂಡಿರುವ ಕನ್ನಡ ಪದ್ಯಗಳ ಸಂಖ್ಯೆ ಒಟ್ಟು ೩೩.

ಇದರಲ್ಲಿ ಚಾಳುಕ್ಯ ತ್ರಿಭುವನಮಲ್ಲ ವಿಕ್ರಮಾದಿತ್ಯನ ಮಹಾಸೇನಾಪತಿಯಾಗಿದ್ದ ಅನಂತಪಾಲನ, ಆತನ ಕಾರ್ಯಸಿದ್ಧಿಗೆ ಧುರಂಧರನಾಗಿದ್ದ ಬೆಳ್ವಲದ ಅಧಿಕಾರಿ ಮಾಧವನ, ಆ ಮಾಧವನ ಮಗ ಪ್ರತಿಕಂಠಚಂದನ ಶೌರ್ಯಾದಿ ಗುಣಪ್ರಶಂಸೆಯ ಪದ್ಯಗಳು ಹಲವಾರಿವೆ. ಇವು ಮಲ್ಲನ ಕವಿತ್ವಶಕ್ತಿಯ ಪರಿಚಯವನ್ನು ಓದುಗರಿಗೆ ಮಾಡಿಕೊಡುತ್ತವೆ. ಮಾಧವನು ಅನ್ಯತಟಾಕದಲ್ಲಿ ( ಅಣ್ಣಿಗೆರೆ ಎಂಬುದನ್ನು ಕವಿ ಈ ತೆರನಾಗಿ ಸಂಸ್ಕೃತಕ್ಕೆ ರೂಪಾಂತರಿಸಿಕೊಂಡಿದ್ದಾನೆ; ಇದರಿಂದ ಐತಿಹಾಸಿಕ ದೃಷ್ಟಿಯಿಂದ ಅರ್ಥಾಂತರವುಂಟಾಗುವುದನ್ನು ಅವನು ಗಮನಿಸಿದಂತೆ ತೋರುವುದಿಲ್ಲ. ) ದೇವಾಲಯ, ಬ್ರಾಹ್ಮಣರಿಗೆ ಮನೆಗಳು, ಸತ್ರ, ಕೆರೆ ಮೊದಲಾದುವನ್ನು ಕಟ್ಟಿಸಿದನು. ಪ್ರತಿಕಂಠಚಂದನು ತಂದೆಯ ಹೆಸರಿನಲ್ಲಿ ಮಾಧವೇಶ್ವರ ದೇವಾಲಯವನ್ನೆತ್ತಿಸಿ, ಕೆರೆಯನ್ನು ನಿರ್ಮಿಸಿದನು; ಅವುಗಳಿಗೆ ದತ್ತಿಗಳನ್ನು ಬಿಟ್ಟನು. ಈ ವಿಷಯಗಳನ್ನು ಈ ಶಾಸನ ವಿವರಿಸಿದೆ.

ಶಾಸನದ ಕೊನೆಯಲ್ಲಿ ಕವಿ ತನ್ನ ಹೆಸರನ್ನು ಹೇಳಿಕೊಂಡ ಕಂದ ಪದ್ಯದಲ್ಲಿ ತನ್ನ ( ಪದ್ಯ ? ) ದ್ರುಹಿಣನೆಂಬ ಕವಿಯ ರಚನೆಯಂತೆಯೂ ಗದ್ಯ ಸಂಸ್ಕೃತ ಕಾದಂಬರೀ ಕರ್ತೃವಾದ ಬಾಣಕವಿಯ ಗದ್ಯದಂತೆಯೂ

---

1 Bom. Kar. Ins. Vol. I, Part II, Gen. No. 147.

ಮಿಗಿಲಾದುದೆಂದು ಹೇಳಿಕೊಂಡಿದ್ದಾನೆ. ಅಲ್ಲದೆ ಇವನು ತನ್ನನ್ನು 'ಆಲಿಖಿತ ಪಿತಾಮಹ' ಎಂದೂ ಎಂದುಕೊಂಡಿದ್ದಾನೆ. 'ಆಲಿಖಿತ' ಎಂಬುದನ್ನು 'ಶಾಸನ' ಎಂಬರ್ಥದಲ್ಲಿ ಕವಿ ಬಳಸಿದ್ದಾನೆ ಎಂದೆನಿಸುತ್ತದೆ. ಎಂದರೆ, ಶಾಸನರಚನಾ ವಿದ್ಯೆಯಲ್ಲಿ ಬ್ರಹ್ಮನೆಂಬುದು ಇವನ ಪ್ರಶಸ್ತಿ. ಈ ಪ್ರಶಂಸೆಗಳು ಸ್ವಯಂ ಉಪಾಚಿತವಲ್ಲ, ದೊರೆಯಲ್ಲಿ ಒಪ್ಪಿತವಾದುವೆಂದೂ ತಿಳಿಯಪಡಿಸಿದ್ದಾನೆ. ಇದರಿಂದ ರಾಜನೇ ಈ ರೀತಿಯಾಗಿ ಪ್ರಶಂಸಿಸಿ ಮಲ್ಲನನ್ನು ಸನ್ಮಾನಿಸಿರಬೇಕೆಂದು ತೋರುತ್ತದೆ.

> ದ್ರುಹಿಣವಿನಿರ್ಮಿತಮೆನೆ .
> . . ಣಯುತಂ ಬಾಣಗದ್ಯ[ವಾ]ಲಿಖಿತ ಪಿತಾ-
> ಮಹನೆಂದು ದೊರೆಯೊಳೊಪ್ಪಿರ-
> ಲಹರ್ನಿಶಂ ಬರೆದನೆ . . . ಯ ಮಲ್ಲಂ ||

ಒಂದು ಹಗಲು ಒಂದು ರಾತ್ರಿಯಲ್ಲಿ ಈ ಶಾಸನಕಾವ್ಯವನ್ನು ರಚಿಸಿದ ಮಲ್ಲನು ಆಶುಕವಿಯಾಗಿದ್ದನು. ಈ ಶಾಸನದಲ್ಲಿ 'ಮಲ್ಲ' ಎಂಬ ಹೆಸರಿನ ಉಲ್ಲೇಖವಿರುವ ಇನ್ನೆರಡು ಪದ್ಯಗಳಿಂದ ಈತನ ವಿಶೇಷ ಪರಿಚಯ ನಮಗಾಗುತ್ತದೆ. ಧರ್ಮಿಯಾದ (ದೇವಾಲಯ, ತಟಾಕಗಳನ್ನು ನಿರ್ಮಿಸಿ ದತ್ತಿಗಳನ್ನು ಬಿಟ್ಟ) ಪ್ರತಿಕಂಠಚಂದನಿಗೆ ಮಲ್ಲ ಎಂಬೊಬ್ಬ ತಮ್ಮನಿದ್ದನೆಂದು ಎರಡು ಪದ್ಯಗಳಲ್ಲಿ ಹೇಳಲಾಗಿದೆ :

> ಒಂದು : ದ್ವಿಜಕುಳತಿಳಕಂ ಚಂದ್ರಾ-
> ನುಜನುತ್ತಮಪುರುಷನುತ್ತಮೋತ್ತಮ[ನೀ*]ಪ-
> ದ್ಮಜ ಬಾಪ್ಪೆನವಿತ್ತದಿತಿಜ-
> ಕುಜನೆನಿಸಿದನರ್ಥಿಸಮಿತಿಗೆಲ್ಲಂ ಮಲ್ಲಂ ||

> ಎರಡು : ಜನಕಂ ಮಾಧವನಂಬಿಕೆ
> ಜನವಂದಿತೆ ರೇವಕಬ್ಬೆ ತಮ್ಮಂ ಮಲ್ಲಂ
> ವಿನಯನಿಧಿ ರೇವಣಂ ಮಿ-
> ತ್ರನೆನಲ್ ಕೃತಕೃತ್ಯನೆನಿಸಿ ಸಂದಂ ಚಂದಂ ||

ಈ ಮಲ್ಲನೂ ಶಾಸನಕವಿ ಮಲ್ಲನೂ ಒಬ್ಬನೇ ಆಗಿರಬೇಕು. ಪ್ರತಿ

ಕಂಠಚಂದನ ತಮ್ಮ ಮಲ್ಲ ಪದ್ಮಜ, ಶಾಸನಕವಿ ಮಲ್ಲ[ನ]ಲಿಖಿತ ಪಿತಾಮಹ ಎಂಬುದು ಇಲ್ಲಿ ಗಮನಾರ್ಹವಾಗಿದೆ. ಆದುದರಿಂದ, ಈ ಶಾಸನಕವಿ ಮಲ್ಲನ ತಂದೆ ಬೆಳ್ವೊಲದ ಅಧಿಕಾರಿಯಾಗಿದ್ದ ಮಾಧವ, ತಾಯಿ ರೇಕಬ್ಬೆ, ಕುಲ ಆತ್ರೇಯಗೋತ್ರದ ಬ್ರಾಹ್ಮಣಕುಲ-ಎಂದು ಈತನ ಪರಿಚಯ ಮಾಡಿಕೊಡಲು ಅಭ್ಯಂತರವಿಲ್ಲ. ಈತನು ಪಾಸಿಂಯೂ ಎಂದೆನಿಸಿದ್ದನು. ರಾಜಮಾನ್ಯ ಶಾಸನಕವಿಯಾಗಿದ್ದವನನ್ನು ತನ್ನ ತಮ್ಮನೆಂದು ಹೇಳಿಕೊಳ್ಳುವುದು ಪ್ರತಿಕಂಠಚಂದನಿಗೆ ಹೆಮ್ಮೆಯ ಮಾತಾಗಿರುವುದು ಸಹಜ.

ಮಲ್ಲನ ಕೆಲವು ಪದ್ಯಗಳು :

ನೆಱೆಯೆ ನೆಗರ್ತೆವೆತ್ತುದು ನಿಯೋಗಮಗುಂದಲೆಯಾಯ್ತು ತೇಜಮು-
ಜ್ಜೞಿದುದು ಮಿಕ್ಕ ಬಚ್ಚತಿಕೆ ಸ . ದಮಾದುದು ನನ್ನಿ ನಾಡೆ ಕ-
ಣ್ಗೊಱೆದುದು ರೂ ( — ( ದಱಿತಂ ದಳವೇಱೆದುದಕ್ಕರಂ ಪಗ-
ಣ್ಡೞಿದುದು ಪೌರುಷಂ ಸಫಳಮಾದುದು ಮಾನ್ಯತೆ ಮಾದಿರಾಜನೊಳ್ ||

ಗಗನತಳಂಬರಂ ನೆಗೆದ ಧಾಳಿಯ ಧೂಳಿಗೆ ಬೆರ್ಚಿ ದಾಳಿಗಂ
ತೆಗೆದು ವನಾಂತಮಂ ಪುಗೆ ಗುಹಾಂತರಮಂ ಪುಗೆ ಶೈಳಕುಂಜಮಂ
ಪುಗೆ ಪರಭೂಮಿಯಂ ಪುಗೆ ತಪೋವನಮಂ ಪುಗೆ ಸಿಂಧುಕೂಟಮಂ
ಪುಗೆ ಚಳದಿಂ ತಗುಳ್ದ ಭುಜಗರ್ವಮನಂತಮನಂತಪಾಳನಾ ||

ಪಲರಂ ಮೆಚ್ಚಿಸಿದಂ ನಿಯೋಗದೊಳನೇಕೋಪಾಯಚಾಣಕ್ಯನು-
ಜ್ಜ್ವಲತೇಜೋಮುಖಮುದ್ರಿತಪ್ರಚುರದೇಶದ್ರೋಹಸಂಚಾರಚಾ-
ಪಲನಾತ್ಮೀಕೃತಶಸ್ತ್ರಕೌಶಳ ( — — ಶೇಷವಿದ್ಯಾವಿನಿ-
ಶ್ಚಲನಾನಮ್ರನಿಜಪ್ರಜಾಮ್ರವನಮಾಳಾಮಾಧವಂ ಮಾಧವಂ ||

## ೪೩. ಚಂದ್ರಭಟ್ಟ

(೧೦೯೯)

ಧಾರವಾಡ ಜಿಲ್ಲೆಯಲ್ಲಿ ಕೊಟುಮಚಗಿ ಎಂಬುದು ಗದುಗು ತಾಲೂಕಿನ ಒಂದೂರು. ಅಲ್ಲಿಯ ಸೋಮೇಶ್ವರ ದೇವಾಲಯದಲ್ಲಿ ಶಾಸನದ ಕಲ್ಲು ನಿಂತಿವೆ. ಅದನ್ನು ರಚಿಸಿದ ಕವಿ ಮಾಧವಭಟ್ಟ ಎಂಬವನು. ಈ ಶಾಸನದ ಬರೆಹದ ಬಹ್ವಂಶ ನಷ್ಟವಾಗಿಹೋಗಿದೆ. ಅದರ ಕಾಲ ಕೂಡ ಸರಿಯಾಗಿ ಗೊತ್ತಾಗುವಂತಿಲ್ಲ. ಆ ಭಾಗದ ಲಿಪಿಯನ್ನು 'ಚಾಲುಕ್ಯ ವಿಕ್ರಮ ಕಾಲದ ೨..ಪೌಷ್ಯ ಶುದ್ಧ [೧]೧ ಆದಿತ್ಯವಾರ' ಎಂದು ಮಾತ್ರ ಓದಲು ಬಂದಿದೆ. ಶಾಸನ ಸಂಪಾದಕರು ಇದು ಚಾ. ವಿ. ವ. ೨೩ (ಕ್ರಿ. ಶ. ೧೦೯೯) ಎಂದು ಅಭಿಪ್ರಾಯಪಟ್ಟಿದ್ದಾರೆ. ಬೆಳ್ವಲ ಪುಲಿಗೆರೆ ನಾಡುಗಳನ್ನಾಳುತ್ತಲಿದ್ದ ಅನಂತಪಾಳರಸನ ವರ್ಣನೆ ಕೆಲವು ಪದ್ಯಗಳಲ್ಲಿರುವಂತೆ ನಷ್ಟಾವಶಿಷ್ಟ ಪಙ್ತಿಗಳಿಂದ ತಿಳಿದುಬರುತ್ತದೆ. ಆದರೆ ಯಾವೊಂದು ಪದ್ಯವೂ ಇಡಿಯಾಗಿ ದೊರೆಯುವಂತಿಲ್ಲ. ೪೭ ಕಂಡರಣೆಯ ಸಾಲುಗಳುಳ್ಳ ಈ ಶಾಸನದ ಪದ್ಯಸಂಖ್ಯೆ ಇಷ್ಟೆಂದು ಗುರುತಿಸುವುದು ಸಾಧ್ಯವಿಲ್ಲ.

ಶಾಸನದ ಕೊನೆಯಲ್ಲಿ ಕವಿ ತನ್ನ ಹೆಸರನ್ನು ಒಂದು ಕಂದಪದ್ಯದಲ್ಲಿ ಹೇಳಿಕೊಂಡಿದ್ದಾನೆ. ಅದೂ ಪ್ರಾಯಶಃ ಅರ್ಧಕ್ಕಿಂತ ಹೆಚ್ಚೇ ನಷ್ಟವಾಗಿದೆ. ಪದ್ಯದ ಅಳಿದುಳಿದು ಓದಲಾದ ಒಂದನೆಯ ಹಾಗೂ ನಾಲ್ಕನೆಯ ಸಾಲುಗಳನ್ನು ಮಾತ್ರ ಇಲ್ಲಿ ಕೊಟ್ಟಿದೆ:

೧: ಚತುರಧಿಕಶತಧರಾಮರ-
೪: [ತತಿಶಯದಿಂ] ಚಂದ್ರಭಟ್ಟ ಕವಿ ವಿರಚಿಸಿದಂ ||

# ೪೭. ಗುಣಪಾ . . . ರ್ಯ

( ಶತಮಾನ ೧೧ ? )

ಶಾಸನಕವಿ ಶ್ರೀಕಂಠಸೂರಿಯಿಂದ ವಿರಚಿತವಾದ ಕುರುವತ್ತಿ ಗ್ರಾಮದ ಶಾಸನ ( ಕ್ರಿ. ಶ. ೧೦೭೯ ) ದಲ್ಲಿ ಕೊನೆಯಲ್ಲಿ ಕಂಡರಣೆಕಾರನ ಹೆಸರನ್ನು ತಿಳಿಸುವ ಈ ಒಂದು ಕಂದಪದ್ಯವುಂಟು :

> ಗುಣಪಾ . . . . ರ್ಯ-
> ಪ್ರಣೀತಶಾಸ್ತ್ರೋಕ್ತಿಯಿಂದೆ ಕಲುವೆಸಸಂ ಲ-
> ಕ್ಷಣಯುಕ್ತಮಾಗಿರಲು ಧಾ-
> ರಿಣಿಯೊಳು ಗುಲುಗೋಜನಜೀವನೆಂದೆಳೆ ಪೊಗಳ್ಗುಂ ||

ಈ ಕಂದಪದ್ಯದಿಂದ ವಾಸ್ತುಶಿಲ್ಪವನ್ನು ಕುರಿತು ಪ್ರಸಿದ್ಧ ಶಾಸ್ತ್ರಗ್ರಂಥವೊಂದು ಇದ್ದಿತೆಂದೂ ಈ ಶಾಸನದ ಕಾಲದ ಹೊತ್ತಿಗೆ ಅದು ಜನಮಾನ್ಯವಾಗಿ ಅದಕ್ಕನುಸಾರವಾಗಿ ಗುಡಿ ಮೊದಲಾದುವನ್ನು ಕಟ್ಟುವುದು, ಕುರುವತ್ತಿಯ ಭಾಗದಲ್ಲಿಯಂತೂ ಪ್ರಚುರವಾಗಿದ್ದಿತೆಂದೂ ಗುಲುಗೋಜನೆಂಬವನು ಆ ಪದ್ಧತಿಯ ವಾಸ್ತುರಚನೆಯಲ್ಲಿ ಪ್ರವೀಣನೆಂದು ಖ್ಯಾತನಾಗಿದ್ದನೆಂದೂ ತಿಳಿಯುತ್ತದೆ. ಆದರೆ ಆ ಶಾಸ್ತ್ರಗ್ರಂಥದ ಕರ್ತೃವಿನ ಹೆಸರುಳ್ಳ ಮೇಲಣ ಕಂದದ ಮೊದಲನೆಯ ಪಙ್ಕ್ತಿಯಲ್ಲಿ ಕೆಲವು ಅಕ್ಷರಗಳು ನಷ್ಟವಾಗಿ ಹೋಗಿವೆ. ಆದುದರಿಂದ ಆ ಗ್ರಂಥಕರ್ತೃವಿನ ಹೆಸರು ' ಗುಣಪಾ...ರ್ಯ ' ಎಂದು ಮಾತ್ರ ತಿಳಿಯಬೇಕಾಗುತ್ತದೆ. ಈತನು ಈ ಶಾಸನದ ಜನನಕ್ಕಿಂತ ಪೂರ್ವದಲ್ಲಿ, ಈ ಹೊತ್ತಿಗೆ ಲೋಕಪ್ರಿಯವಾಗಲು ತಗಲುವ ಕಾಲದಷ್ಟು ಮಟ್ಟಿಗಾದರೂ ಪೂರ್ವದಲ್ಲಿ ಈ ಶಾಸ್ತ್ರಗ್ರಂಥವನ್ನು ರಚಿಸಿರಬೇಕೆಂದು ತೋರುತ್ತದೆ.

ಈ ಶಾಸನದಲ್ಲಿ ಗುಲುಗೋಜನನ್ನು—ಅವನ ವಾಸ್ತುವಿದ್ಯಾನೈಪುಣ್ಯವನ್ನು—ಹೊಗಳಿರುವುದರಿಂದ, ಪ್ರಸ್ತುತ ಶಾಸನಕ್ಕೆ ಸಂಬಂಧಪಟ್ಟ ಕುರುವತ್ತಿಯ ಅಭಿನವಸೋಮೇಶ್ವರನ ಗುಡಿಯನ್ನು ಆತನೇ ಅರ್ಥಾತ್ ಗುಣಪಾ . . . . ರ್ಯ ಪ್ರಣೀತಶಾಸ್ತ್ರೋಕ್ತಿಯಿಂದ ಕಟ್ಟಿರಬೇಕೆಂದು ಊಹಿಸಲೆಡೆಯಿದೆ.

# ೩೮. ಕಾಳಿದಾಸ

( ೧೧೦೨ )

ಈ ಕವಿ ಹೂಲಿಯವನು. ಯಾವೊಂದು ಶಾಸನವನ್ನಾಗಲಿ ಕಾವ್ಯ ವನ್ನಾಗಲಿ ಬರೆದವನೆಂದು ಕಾಣಿಸಿಕೊಂಡವನಲ್ಲ. ಒಂದೇ ಮಿತಿಯಂದು ಮೈದಾಳಿ ನಿಂತ ಎರಡು ಹೂಲಿಯ ಶಾಸನಗಳಲ್ಲಿ ಈತ ವರ್ಣಿತನಾಗಿದ್ದಾನೆ. ಈ ಎರಡೂ ಶಾಸನಗಳ ಹುಟ್ಟುವರ್ಷ ಕ್ರಿ. ಶ. ೧೧೬೨.[1] ಕಳಚುರ್ಯ ಬಿಜ್ಜಳನು ಆಳುತ್ತಿದ್ದ ಕಾಲ ಅದು. ಹೂಲಿ ಬೆಳಗಾವಿ ಜಿಲ್ಲೆಯ ಸವದತ್ತಿ ತಾಲೂಕಿನ ಒಂದು ಹಳ್ಳಿ. ಅಲ್ಲಿಯ ದಾಸಿರಾಜ ಹೆಗ್ಗಡೆ ಎಂಬಾತನು ಕೊಟ್ಟ ದಾನ-ದತ್ತಿಗಳನ್ನು ಎರಡೂ ಶಾಸನಗಳು ಉಲ್ಲೇಖಿಸುವುವು. ವಿರಕ್ತಮಠ ದಲ್ಲಿರುವ ಶಾಸನ ನಾಗರಖಂಡಿಯ ಕೇಶವದೇವಾಲಯಕ್ಕೆ ಭೂಗೃಹದಾನ ಗಳನ್ನಿತ್ತುದನ್ನು ಹೇಳುತ್ತದೆ; ಅಗಸ್ತ್ಯೇಶ್ವರ ದೇವಾಲಯದ ಮಂಟಪದ ಒಳಗಡೆ ಬಡಗಣ ಗೋಡೆಯಲ್ಲಿ ಕಟ್ಟಿದ ಶಾಸನ ನಾಗವಾವಿಯ ಜೀರ್ಣೋ ದ್ಧಾರ, ಧರ್ಮೋತ, ಅಗ್ಗಿಷ್ಟಿಗೆಯ ಆರಯಿಕೆ ಇವುಗಳಿಗಾಗಿ ಭೂದಾನ ಮಾಡಿದುದನ್ನು ತಿಳಿಸುತ್ತದೆ.

ಈ ಶಾಸನಗಳಲ್ಲಿ ಉಕ್ತನಾದ ದಾನಿ ದಾಸಿರಾಜನ ತಂದೆ ಕಾಳಿಮಯ್ಯ ಅಥವಾ ಕಾಳಿದಾಸೋತ್ತಮ. ಈತನೇ ನಮ್ಮ ಕಾಳಿದಾಸ ಕವಿ. ಇವನ ಪರಿಚಯವನ್ನು ಒಂದು ಶಾಸನ ಒಂದು ಕಂದಪದ್ಯದ ಮೂಲಕವೂ, ಒಂದು ಶಾಸನ ಒಂದು ವೃತ್ತಪದ್ಯದ ಮೂಲಕವೂ ಮಾಡಿಕೊಡುತ್ತಿವೆ. ಇವು ಗಳಿಂದ ಈ ಕಾಳಿದಾಸೋತ್ತಮನು ಒಳ್ಳೆಯ ಕಬ್ಬಿಗನೆಂದೂ ಸಚಿವೋತ್ತಮ ನೆಂದೂ ತಿಳಿದುಬರುತ್ತದೆ. ಆ ಎರಡು ಪದ್ಯಗಳನ್ನು ಇಲ್ಲಿ ಉದ್ಧರಿಸಿದೆ:

ಆ ವಿಭುವಿಂಗುದಯಿಸಿದಂ
ಶ್ರೀವನಿತಾಪ್ರಿಯತನೂಜನನ್ನಂ ರೂಪಿಂ

---

1 Epi. Ind. Vol. I, Page 53.

ಭೂವಳಯಪ್ರಸ್ತುತ್ಯನೊ-
ಳಾವಂ ದೊರೆ ಕಾಳಿಮಯ್ಯ ಸಚಿವೋತ್ತಮನೊಳ್ ||

ಅಕಳಂಕಂ ತನುವಾಗಿ ವರ್ತಿಸುವ ಚಂದ್ರಂ ಕಾಂತಿಯೊಂದೇಳ್ಗೆಯಿಂ
ಸಕಳವ್ಯಾಪಕನಾಗಿ ಜಾಡ್ಯತನಮುಂ ಬಿಟ್ಟಿರ್ದ ಪದ್ಮಾಸನಂ
ಸುಕವೀಂದ್ರತ್ವದೊಳೀಶನಿಂ ಕಿಡದ ಕಾಮುಂ ರೂಪಸಂಪತ್ತಿಯಿಂ
ಪ್ರಕಟಂಬೆತ್ತ ಚರಿತ್ರದಿಂ ಮನುವೆನಿಪ್ಪಂ ಕಾಳಿದಾಸೋತ್ತಮಂ ||

ಸುಕವೀಂದ್ರತ್ವದಲ್ಲಿ ಜಾಡ್ಯತನವನ್ನು ಬಿಟ್ಟಿದ್ದ-ವೇದಗಳನ್ನುಹಾಡಿದ-ಬ್ರಹ್ಮನೇ ಎಂಬಂತಿದ್ದ ಈ ಕಾಳಿದಾಸೋತ್ತಮನು ಮನುವಿನಂತೆ ಸಚ್ಚರಿತನಾಗಿದ್ದನು. ಹೂಲಿಯ ಸಾಸಿರ್ವರು ಲೋಕಪ್ರಖ್ಯಾತರಾದವರು; ಅವರೊಳಗೆ ಅಗ್ಗಳೆಯರು ಶಿವೆಯುಗೇರಿಯ ನೂರ್ವರು; ಅವರಲ್ಲಿ ಶ್ರೇಷ್ಠವಾದುದು ಭಾರದ್ವಾಜ ಗೋತ್ರದ ಮನೆತನ, ಆ ಮನೆತನದವನು ಈ ಕವಿ ಕಾಳಿದಾಸ. ಈತನ ತಂದೆಯ ಹೆಸರು ಮಾಳಸಯ್ಯ; ಹೆಂಡತಿಯ ಹೆಸರು ರೇವಿಯಕ್ಕ.

ಈ ಕಾಳಿದಾಸನ ಮಗ ದಾಸಿರಾಜನ ಮೂವರು ಮಕ್ಕಳು ಈ ಶಾಸನಗಳಲ್ಲಿ ವಿಶಿಷ್ಟ ಗುಣೋಪೇತರೆಂದು ವರ್ಣಿತರಾಗಿದ್ದಾರೆ. ಆದುದರಿಂದ, ಈ ದಾನಕಾಲದಲ್ಲಿ ( ಕ್ರಿ. ವ. ೧೧೬೩ ) ಕವಿಯ ಮೊಮ್ಮಕ್ಕಳು ಮೂವರೂ ತಮ್ಮ ಗುಣಗಳನ್ನು ಪ್ರಕಟಿಸುವಷ್ಟು ದೊಡ್ಡವರಾಗಿದ್ದರೆಂದು ತಿಳಿಯಬಹುದಾದುದರಿಂದ, ಇದಕ್ಕಿಂತ ಸುಮಾರು ೬೦ ವರುಷಗಳಷ್ಟು ಹಿಂದೆ ಕಾಳಿದಾಸನ ಪ್ರಬುದ್ಧ ಕಾಲವೆಂದು, ಅದು ಕ್ರಿ. ವ. ಸು. ೧೧೦೩ ಎಂದು ಎಣಿಸಲಾಗಿದೆ.

## ೪೩. ಮಲ್ಲಿಕಾರ್ಜುನ

(೧೧೦೨)

ಶಿಕಾರಿಪುರದ ೭೮ನೆಯ ಮತ್ತು ೯೯ನೆಯ ಶಾಸನಗಳನ್ನು ಈತನು ಬರೆದಿದ್ದಾನೆ.[1] ಆ ಶಾಸನಗಳ ಕೊನೆಯಲ್ಲಿ ಕವಿ ತನ್ನ ಹೆಸರನ್ನು ಹೀಗೆ ಹೇಳಿಕೊಂಡಿದ್ದಾನೆ :

ವಿನುತ ಮಧುರೋಕ್ತಿಯಿಂ ತ-
ನ್ನನತಿಶಯ ವಚೋವಿಭೂತಿಯಿದುವೆ ಯಶಶ್ಯಾ-
ಸನಮಾದುದೆಂಬಿನಂ ಶಾ-
ಸನಮಿನಿದಂ ಬರೆದನಾಶುಕವಿ ನಿಟಿಲಾಕ್ಷಂ ॥ ೧ ॥

ಕವಿನುತಮೆನಲೊರೆದತಿಪಟು
ಕವಿ ಸಾರಸ್ವತಮರೋದಯನ ಕಿಂಕರನೀ
ಶಿವಧರ್ಮಶಾಸನಮನಭಿ-
ನವಮಾಗಿರೆ ಮಲ್ಲಿಕಾರ್ಜುನಾರ್ಯಂ ಬರೆದಂ ॥ ೨ ॥

ಮೊದಲನೆಯದನ್ನು ೧೧೦೨ರಲ್ಲಿಯೂ ಎರಡನೆಯದನ್ನು ೧೧೧೨ರಲ್ಲಿಯೂ ಬರೆದನು. ಕೇದಾರೇಶ್ವರನಿಗೆ ದತ್ತಿಯನ್ನು ಕೊಟ್ಟಂತೆ ಇದರಲ್ಲಿ ಹೇಳಲಾಗಿದೆ. ಇನ್ನೊಂದೆಡೆಯಲ್ಲಿ ಇನ್ನೂ ಹೀಗೆ ಹೇಳಲಾಗಿದೆ :

ಪರಿಕಿಸೆ ಮಲ್ಲಿದೇವವಿಭುಗಾರ್ ಸಮನಿರ್ಬರುಮಿಕ್ಕೆಲಂಗಳೊ-
ಒರೆದುಪದಸಂತ್ಯದಿಂ ಬರೆವ ಬಾಜಿಪ ಬಾಜಿಪ ಕಬ್ಬಮೆಂತುಟಂ-
ತಿರೆ ಪೊಸಕಬ್ಬಮುಂ ನುಡಿವ ಭಾವಿಪ ಕೇಳ್ವ ಕಥಾಚತುಷ್ಕಮುಂ
ಧರೆ ಪರಿಕರ್ಮಮೆಂದೆನಿತುಮಂ ಗುಣಿಯಿಪ್ಪ ಮತಿಪ್ರಭಾವದೊಳ್
॥ ೩ ॥

---

1 Ep. car. VIII. (ಶಿಕ ೭೮).

ಈ ಮಲ್ಲಿದೇವನು ವಿಭುವೆಂದಿರುವಲ್ಲಿ ಅಧಿಕಾರಿಯಾಗಿದ್ದನೆಂದು ಊಹಿಸಬಹುದಾಗಿದೆ. ಅಸಾಧಾರಣ ಅವಧಾರಣ ಶಕ್ತಿಯುಳ್ಳವನಾಗಿದ್ದನೆಂದೂ ವ್ಯಕ್ತವಾಗುತ್ತದೆ. "ನಾನಾವಿಧಾವಧಾರಣಾಚಕ್ರವರ್ತಿ", "ಗೊಬ್ಬೂರ ಧಾರಣಾಸಾರ್ವಭೌಮ" ಎಂದು ಮುಂತಾಗಿಯೂ ವರ್ಣಿತನಾಗಿದ್ದಾನೆ. "ಶ್ರೀಮತ್ಸಹಜಸಾರಸ್ವತವಾಚಕವಾರಿಜಾಸನಂ", "ಸುಕವೀಂದ್ರ ಕ್ಷಣ್ಮುಖಂ" ಎಂದೂ ಮಲ್ಲಿಕಾರ್ಜುನಭಟ್ಟನು ಪರ್ಣಿತನಾಗಿದ್ದಾನೆ.

# ೫೦. ಅಚರಾಜ (ಮಲ್ಲಿನಾಥದೇವ)

(೧೧೦೪)

ಮಹಾಸಾಮಂತಾಧಿಪತಿ ಗೋವಿಂದರಸನು ಅಬ್ಬಲೂರಿನ ಬ್ರಹ್ಮೇಶ್ವರ ದೇವಸ್ಥಾನಕ್ಕೆ ಮುರಿಗನಹಳ್ಳಿಯನ್ನು ಸೋಮೇಶ್ವರಪಂಡಿತನ ಕಾಲಂಗರ್ಚಿ ಬಿಟ್ಟಂತೆ ಹೇಳಿದೆ.[1] ಶಾಸನಕಾಲ ಕ್ರಿ. ಶ. ೧೧೦೪. "ಸುಕರಸುಕವಿ ಯಪ್ಪಚರಾಜನುಂ ಸಹಜಕವಿ ಮಲ್ಲಿನಾಥದೇವನುಂ ಬರೆದರ್." ಎಂಬ ಕೊನೆಯಲ್ಲಿಯ ಮಾತು ಈ ಶಾಸನದ ಇಬ್ಬರ ಕರ್ತೃತ್ವವನ್ನು, ಇಬ್ಬರೂ ಪ್ರಾಸಾದಿಕ ಕವಿಗಳೆಂಬುದನ್ನು ಸೂಚಿಸುತ್ತದೆ.

ಕೆಲಬರ್ ತರ್ಕವಿಶಾರದರ್ ಕೆಲಬರಾತ್ಮಾಲಾಪ ಸಂಬೋಧಕರ್
ಕೆಲಬರ್ ನಾಟಕಕೋವಿದರ್ ಕೆಲಬರೊಳ್ಗಬ್ಬಂಗಳಂ ಬಲ್ಲವರ್
ಕೆಲಬರ್ ವ್ಯಾಕರಣಜ್ಞರಿಂತಿನಿತುಮಂ ಬಲ್ಲನ್ನರಿಲ್ಲೆಲ್ಲಮುಂ
ಸಲೆ ಸೋಮೇಶ್ವರಸೂರಿ ಬಲ್ಲನನಘಂ ನೈಯಾಯಿಕಾಗ್ರೇಸರಂ ||

1. Ep. In. V. 231 (೩೩೮೧)

# ೫೧. ಲಕ್ಷ್ಮಣ

( ೧೧೦೭ )

ಬೆಳಗಾವಿ ಜಿಲ್ಲೆಯ ಹೊಸೂರು ಗ್ರಾಮದ ಶಾಸನವೊಂದನ್ನು[1] ಲಕ್ಷ್ಮಣನೆಂಬವನು ರಚಿಸಿದ್ದಾನೆ. ಇದೊಂದು ಜಿನಶಾಸನ. ಶಾಸನಕವಿ ಲಕ್ಷ್ಮಣನ ತಂದೆ ವಿಬುಧವಂದ್ಯನಾದ ಅಗ್ಗಳದೇವನು. ಕೆಳಗಣ ಕಂದ ಪದ್ಯದಲ್ಲಿ ಈ ವಿಷಯ ಹೇಳಿದೆ:

ಅವರಿಸೆ ನಿಜಗುಣೋನ್ನತಿ
ಭೂವಳಯಮನ[ಸ*]ಧಿಪ[ನೂತ್ನ[2]] ಜಿನಶಾಸನಮಂ
ಶ್ರೀವಿಬುಧವಂದ್ಯನಗ್ಗಳ
ದೇವಪ್ರಿಯಸೂನು ಲಕ್ಷ್ಮಣಂ ವಿರಚಿಸಿದಂ ||

ಶಾಸನದ ಮೇಲ್ಭಾಗವು ಅಲ್ಲಲ್ಲಿ ಒಡೆದು ಹೋಗಿದೆ. ಸರಿಯಾಗಿ ದೊರೆತವುಗಳಲ್ಲಿ ಎರಡು ಪದ್ಯಗಳನ್ನು ಇಲ್ಲಿ ಕೊಟ್ಟಿದೆ:

ಸರಸೀಜೋದ್ಭವಗರ್ವಪರ್ವತಬೃಹದ್ದಂಭೋಳಿ ಚಾರ್ವಾಕಭೀ-
ಕರಗಂಧೇಭಗಜಾಂತಕಂ ಕಪಿಳಕಾಂತಾರಾಂತರೋಗ್ರಾಗ್ನಿ ದು-
ರ್ಧರ ಬೌದ್ಧಾಭ್ರಸಮೀರಣಂ ಪ್ರವಿಲಸನ್ನೈಯಾಯಿಕಧ್ವಾಂತ-ಘ
ಸ್ಮರಧೋದೋಮಣಿ ನೇಮಿಚಂದ್ರನೆಸೆದಂ ತ್ರೈವಿದ್ಯವಿದ್ಯಾಧರಂ ||

ದೊರೆವೆತ್ತಂ ನೇಮಿಚಂದ್ರಂ ಭುವನವಿದಿತರಾದ್ಧಾಂತವಾರಾಶಿ ಚಂದ್ರಂ
ಸ್ಮರರಾಜಾಂಭೋಜಚಂದ್ರಂ ಪ್ರಥಿತಬುಧಮಿಥುಸ್ವಾಮಿಹೃದ್ವ್ಯೋಮ
ಚಂದ್ರಂ
ದುರಘೌಘಧ್ವಾಂತಚಂದ್ರಂ ಸುಕೃತಸುರಪತಿಚ್ಚಂದ್ರನುದ್ಯತ್ತ್ವಕೋರೀ
ಪರಿಪೂರ್ಣಾನಂದಚಂದ್ರಂ ವಿಬುಧಬುಧಸಭಾನೀಕನೀರೇಜ ಚಂದ್ರಂ ||

---

1. ಶಿಲಾಶಾಸನಗಳ ಕೆಲವು ಕನ್ನಡ ಕವಿಗಳು ( ಡಾ. ಶ್ರೀನಿವಾಸ ರಿತ್ತಿ, ) ಕ. ಸಾ. ಪ. ಪ. ೫೩೩ ( Ann. Rep. on S. I. E. 1940-41. App. B. No. 16 )

# ೫೨. ನಾರಣದೇವ

(೧೧೦೯)

ಧಾರವಾಡ ಜಿಲ್ಲೆಯ ಹಾವೇರಿಯಲ್ಲಿರುವ ಕ್ರಿ. ವ. ೧೧೦೯ರ ೬ನೆಯ ವಿಕ್ರಮಾದಿತ್ಯನ ಕಾಲದ ಒಂದು ಶಾಸನವನ್ನು[1] ನಾರಣದೇವ ಎಂಬ ಕವಿ ರಚಿಸಿದ್ದಾನೆ. ಕೆಳಗಣ ಪದ್ಯದಿಂದ ಇವನು ವಿಶ್ವಾಮಿತ್ರಗೋತ್ರದ ಶಿವೋಪಾಸಕ ಬ್ರಾಹ್ಮಣನೆಂದು ಮಾತ್ರ ತಿಳಿಯುತ್ತದೆ. ಆ ಪದ್ಯವಿದು :

ಪ್ರಣುತಾರ್ಥಂ ಹೃದ್ಯಮೀ ಪದ್ಯನಿಚಯಮನೆ ಪೇಳ್ದಂ ಮನಂಗೊಂಡು ವಿದ್ವ
ದ್ಗಣಮತ್ಯಾನಂದದಿಂ ಬಣ್ಣಿಸೆ ಬರೆದನಿದಂ ಸತ್ಕವೀಂದ್ರಸ್ತುತಂ ನಾ-
ರಣದೇವಂ ಪಾರ್ವತೀವಲ್ಲಭಪದಯುಗಳಾರಾಧಕಂ ವಿಪ್ರವಂಶಾ
ಗ್ರಣಿ ವಿಶ್ವಾಮಿತ್ರಗೋತ್ರಾಂಬುರುಹವನಪತಂಗಂ ವಿಶುದ್ಧಾಂತರಂಗಂ ||

೬ನೆಯ ವಿಕ್ರಮಾದಿತ್ಯನ ದಂಡನಾಯಕ ಅನಂತಪಾಳನ ಕೈಕೆಳಗೆ ಅಧಿಕಾರಿಯಾಗಿದ್ದ ಮಹದೇವಭಟ್ಟನ ಮಗ ನಿಂಬರಾಜನು ಹಾವೇರಿಯ ಸಿದ್ಧೇಶ್ವರದೇವಾಲಯದಲ್ಲಿ ನೃತ್ಯ-ಗೀತ-ವಾದ್ಯಗಳ ಸೇವೆ ನಿರಂತರವಾಗಿ ನಡೆಯುವದಕ್ಕಾಗಿ ಕೊಟ್ಟ ಭೂದಾನಗಳನ್ನು ಈ ಶಾಸನವು ಉಲ್ಲೇಖಿಸುತ್ತದೆ. ಅವನ ಸುಂದರ ವ್ಯಕ್ತಿತ್ವ ಚಿತ್ರಣವನ್ನು ಕೆಳಗಣ ಪದ್ಯಗಳಲ್ಲಿ ಕಾಣಬಹುದು :

ಸರಸಿಜಸಂಭವಂ ಬರೆದು ನಿರ್ಮಿಸಿದಂ ಸ್ಮರನರ್ಕರಿಂದೆ ವಿ-
ಸ್ತರಿಸಿದನೆಯ್ದೆ ಸಂಪದವನುದ್ಭವಮುಂ ಸೊಬಗಂ ವಿಳಾಸಮುಂ
ಸರಸಕಳಾಪ್ರವೀಣತೆಯುಸೆಂಬಿನಮುನ್ನತಿವೆತ್ತ ಕಾಳಿಕ
ಬ್ಬರಸಿಯ ರೂಪನಾಂ ನೆಱೆಯೆ ಬಣ್ಣಿಪೆನೆಂಬವನೆಗ್ಗನಲ್ಲನೇ ||

---

1 ಶಿಲಾಶಾಸನಗಳ ಕೆಲವು ಕನ್ನಡ ಕವಿಗಳು (ಡಾ. ಶ್ರೀನಿವಾಸ ರಿತ್ತಿ,) ಕನ್ನಡ ಸಾಹಿತ್ಯಪರಿಷತ್ಪತ್ರಿಕೆ, ಸಂ. ೪೬, ಸಂ. ೨. ಡಿಸೆಂಬರ ೧೯೬೪. ಇದು ಸಿದ್ಧೇಶ್ವರದೇವಾಲಯದಲ್ಲಿದೆ. ( B K No. 80 of 1932-33

ಸತಿಹಿತನೇ ಮರುತ್ತನಯನಾಹವಧೀರನೆ ನಪ್ಪನಾಜಿ ವಿ
ಕ್ರತಿಶಯರೂಪನೇ ಕುಸುಮಸಾಯಕನುನ್ನತನೇ ಸುರಾಚಳಂ
ವಿತರಣಶೀಲನೆ ರವಿಜನುತ್ತಮನೇ ಮನುಮಾರ್ಗನೆಂದು ಪಂ
ಡಿತ ಜನಮೆಯ್ದೆ ಬಣ್ಣಿಪುದು ನಿಂಬನೇ ವಸುಧಾತಳಾಗ್ರದೊಳ್ ||

ಸಂಬಲಿಸಲ್ಕೆವೇಡ ಶಿಬಿ ಭಾನುಸುತ ಪ್ರಭು ಖೇಚರಾಧಿರಾ
ಜಂ ಬಲಿಯೆಂಬ ದಾನಿಗಳನಾದರದಿಂದಮೆ ವಂದಿ ಬೇಡು ನೀಂ
ಶಂಬರಸೂದನಪ್ರತಿಮರೂಪನನಪ್ರತಿಮಪ್ರತಾಪನಂ
ನಿಂಬನನಾನತದ್ವಿಟಕದಂಬನನುದ್ಘಗುಣಾವಳಂಬನಂ ||

## ೫೩. ಚಟ್ಟಪಾರ್ಯ

(೧೧೧೨)

ಧಾರವಾಡ ಜಿಲ್ಲೆಯ ಲಕ್ಷ್ಮೇಶ್ವರದ ಒಂದು ಶಾಸನವು[1] ಚಟ್ಟಪಾರ್ಯನು ಹೇಳಿದುದೆಂದು ಅದರ ಕೊನೆಯ ಗದ್ಯದಿಂದ ವಿದಿತವಾಗುತ್ತದೆ. ಚಾಳುಕ್ಯ ೬ನೆಯ ವಿಕ್ರಮಾದಿತ್ಯನ ದಂಡನಾಯಕ ಅನಂತಪಯ್ಯನು ಸೋಮೇಶ್ವರದೇವರ ಸೂಳೆಗೇರಿಗೆ ಕ್ರಿ. ಶ. ೧೧೧೨ರಲ್ಲಿ ಕೊಟ್ಟ ದತ್ತಿಗಳನ್ನು ಸಾರುವುದು. ೧೧ ಪದ್ಯಗಳನ್ನೊಳಗೊಂಡ ೪೪ ಸಾಲುಗಳು ಇದರಲ್ಲಿವೆ. ಈ ಚಟ್ಟಪಾರ್ಯ ಕವಿ [ಹೊಂಬಳ]ದವನೆಂದೂ ಕ[ನ್ನೆ]ಯದೇವರ ಮಗನೆಂದೂ ಕೊನೆಯ ಗದ್ಯದಲ್ಲಿಯೆ ವಿವರಿಸಿದೆ. ಅವನೆರಡು ಪದ್ಯಗಳು:

ಶ್ರುತಲಕ್ಷ್ಮಿ ಬುಧ[ಸಭಾ]ವು
ದ್ರುತಮಾದುದು ಸುಜನವೃತ್ತಿ ದುರ್ಜನಮುಖವು
ದ್ರುತಮಾದುದೀ ಜಗನ್ಮು
ದ್ರುತಮಾದುದು ಪೆಂಪನನ್ತದಂಡಾಧಿಪನಾ ||

ಅದಟರನಾಂತು ಕೊಲ್ವದಟನಣ್ಮಿದರಂ ಬಱಿಕೆಯ್ದು ಮಿರ್ತು ಮೀ
ಱಿದರನಡುರ್ತು ಪೊಯ್ವ್ವ ಸಿಡಿಲುದ್ಧತರಂ ನೋಡೆಪುಗ್ರರಾಡುವಂ
ಬುದನೆನೆ ಮತ್ತನಂತನೊಳನಂಕಪರಾಕ್ರಮನೊಳ್ ಪ್ರೌಢಪುರ್ಗೆ
ಯ್ದಿದಿ[ರಿ*?]ಡುವೊಡ್ಡಿ ನಿತ್ತರಿಪ ಕಾಡುವ ಮೊಯ್ಗಲಿಯಾರ್ಧರಿತ್ರಿಯೊಳ್ ||

1. B. K. I. IV, Gen. No. 74.

# ೩೪. ಅಯ್ಚರಾಜ

( ೧೧೧೩ )

ಈತ ಬರೆದುದು ಧಾರವಾಡ ಜಿಲ್ಲೆಯ ರೋಣ ತಾಲೂಕಿನ ಅಬ್ಬಿಗೇರಿ ಎಂಬೂರ ಕ್ರಿ. ಶ. ೧೧೧೩ರ ಒಂದು ಶಾಸನ.[1] ಆ ಕಾಲದಲ್ಲಿ ಅಬ್ಬಿಗೆಱೆ ( ಅಬ್ಬೀಗೇರಿ ) ಬೆಳ್ವಲ ಮುನ್ನೂರೆಂಬ ಪ್ರಾಂತದೊಳಗೆ ನರೆಯಂಗಲ್ಲು ( ನರೇಗಲ್ಲು ) ೧೨ ಎಂಬ ಕಂಪಣದೊಳಗೆ ಒಂದೂರಾಗಿತ್ತು. ಅಲ್ಲಿಯ ಬಸದಿ, ಬ್ರಹ್ಮಪುರಿ, ದೇವಾಲಯ ಮೊದಲಾದವುಗಳ, ಕಾರಣಾಂತರಗಳಿಂದ ಮುಗ್ಗ ಹೋಗಿದ್ದ ಪೂರ್ವದತ್ತಿಗಳನ್ನು ಅಬ್ಬಿಗೆರೆಯ ಹೆಗ್ಗಡೆ ಅಯ್ಚರಾಜ ಮುಂತಾದವರ ಬಿನ್ನಹದಂತೆ, ಮಹಾಮಂಡಳೇಶ್ವರ ಆಚರಸನು ಪುನರ್ಧರಣಂ ಮಾಡಿದುದನ್ನು ಈ ಶಾಸನ ಹೇಳುತ್ತದೆ. ಶಾಸನ ಚಂಪೂಕಾವ್ಯರೂಪದಲ್ಲಿದೆ. ಒಟ್ಟು ಶಿಲಾಲಿಪಿಪಙ್ಕ್ತಿಗಳು ೭೨.

ಶಾಸನದ ಕವಿ ಅಯ್ಚರಾಜನು ಜೈನಸಮಯದವನು ; ಬರ್ಮದೇವ ಎಂಬಾತನ ಮಗನು ; ಅಬ್ಬಿಗೆರೆಯ ಹೆಗ್ಗಡೆ ಅಯ್ಚರಾಜ ಈ ಕವಿಗೆ ಭಾವ-ಅಕ್ಕನ ಗಂಡ.

ಈ ಶಾಸನದ ಪೂರ್ವಾರ್ಧದ ಲಿಪಿ—ಸುಮಾರಾಗಿ ಎಲ್ಲಾ—ಓದಲಾಗದಷ್ಟು, ಓದಲಾದಷ್ಟು ಲಿಪಿಯೂ ಅರ್ಥ ಹೊಂದಿಕೆಯಾಗದಷ್ಟು ನಷ್ಟವಾಗಿದೆ. ಮಧ್ಯಭಾಗದಲ್ಲಿ ಅಲ್ಲಲ್ಲಿ ಕೆಲಕೆಲವು ಅಕ್ಷರಗಳು ಗುರುತಿಸಲಾರದಂತಾಗಿವೆ. ಅಲ್ಲಿ ಇಲ್ಲಿ ಹಲಕೆಲವು ಹಾಗೂ ಕೊನೆಕೊನೆಯಲ್ಲಿ ಆಯ್ದಾರು ಸಾಲುಗಳು ಮಾತ್ರ ಚೆನ್ನಾಗಿ ಉಳಿದುಕೊಂಡಿವೆ. ಸತ್ತುಕೆಟ್ಟು ಉಳಿದ ಆ ಭಾಗದಿಂದ ಓದಲಾದ ಕೆಲವು ಪದ್ಯಗಳನ್ನು ಓದಲಾದಂತೆ ಇಲ್ಲಿ ಕೊಡಲಾಗಿದೆ. ಇವುಗಳಲ್ಲಿ ಕವಿ ಅಯ್ಚರಾಜನ ಪರಿಚಯಾತ್ಮಕ ಪದ್ಯಗಳೂ ಇವೆ.

ಇದನಾಚಂದ್ರಾರ್ಕಂಬರ-
ಮುದಿತೋದಿತವಾಗಿ ನಡಸದೆ - . . .

---

1 Bom. Kar. Ins Vol. I, Part II, Gen. No. 163.

. . . . ಪಾಪದಿನಳಿ-
ವ ದುರಾತ್ಮಂ ನರಕದೊಳಗೆ ಗಳಗಳನಿಳಿಗುಂ ||

ಅರಸರ್ಗೆ ಸೇಸೆಯೆಂದರ-
ಸರ ಕಾಣಿಕೆಗಾಯಧರ್ಮಮುಣ್ಬಂದೆಱಿಯೆಂ-
ದರುವಣ ಮೇಗಳ್ಪಣವೆಂ-
ದರೆಗಾಣಿಯನಕ್ಕೆ ಕೊಂಡವರ್ಚಾಂಡಾಳರ್ ||

ಜಿನಪತಿ ದೆಯ್ವಂ [ ಪ್ರಭುವಾ-
ಚ* ] ನೃಪಾಳಂ ತಂದೆ ಬರ್ಮದೇವಂ ಭಾವಂ
ತನಗಾಯ್ಚರಾಜನೆನೆ ನೆಗ-
ೞ್ದನಯ್ಚರಾಜಂ ಸಮುದ್ರಮುದ್ರಿತಧರೆಯೊಳ್ ||

⏑ ⏑ ⏑ ⏑ – ⏑ – ⏑ ⏑ ⏑ ಬಿನ್ನಣವೊಪ್ಪುವ ಬಿನ್ನಣಂ ಸಮು-
ದ್ಭವಿಸಿದುವಣ್ಣ ನೀನದೆನೆಯೊಪ್ಪುವ ಬಿನ್ನಣವಿನ್ನೆಣೆ ಪೆಱಂ-
ಗಿವು ನೆಱೆ – ⏑ – ⏑ ⏑ ⏑ – ವಿಬುಧಾವಳಿ ಪೆಂಪುವೆತ್ತನ-
ರ್ಣವಪರಿವೇಷ್ಟಿತಾವನಿಯೊಳಯ್ಚಪರಾಜನದೇಂ ಕೃತಾರ್ಥನೋ ||

ಶಾಸನಮಾಚಂದ್ರಾರ್ಕಂ
ಶಾಸನಮೆನಲಾಚನೃಪನ ವಿಶದಯಶಃಶ್ರೀ-
ಶಾಸನಮನರ್ಥಿಯಿಂದೀ-
ಶಾಸನಮಂ ಬರೆದನಯ್ಚರಾಜಂ ಮುದದಿಂ ||

[ ಮಱೆ ] ವೆಸನೆನಗಾಯ್ತೀಗಳ್
ಕಱೆವೆಸನೇನೊಸೆದು ನಾಗಿಮಯ್ಯ . ದೇವಂ
ಕೆಱೆ ಧರ್ಮೇತ . . . .
ವಱಿಸಂ ಮೇಲ್ನೋಡಿ ನಡೆಯಿಪಂ ಧರ್ಮದನೋ ||

ಮಹಾಮಂಡಳೇಶ್ವರ ಆಚರಸ, ಕವಿಯ ಭಾವನಾದ ಹೆಗ್ಗಡೆ ಅಯ್ಚರಾಜ, ಕವಿ ಅಯ್ಚರಾಜ—ಇವು ಒಂದೇ (ಆಚ ?) ಹೆಸರಿನ ಮೂರು ವ್ಯಕ್ತಿಗಳನ್ನು ಬೇರೆಬೇರೆಯಾಗಿ ಗುರುತಿಸುವುದಕ್ಕಾಗಿ ರೂಢಿಗೆ ಬಂದ ಕರೆಹೆಸರಿನ ಮೂರು ರೂಪಗಳೆಂದು ತೋರುತ್ತದೆ.

## ೫೫. ನಾಗದೇವ

( ೧೧೧೭ )

ಬಿಟ್ಟಿಗ ಹೊಯ್ಸಳದೇವನ ಸಂಧಿವಿಗ್ರಹಿ ಪುಣಿಸಮಯ್ಯನ ವಂಶ ವರ್ಣನೆ ಚಾಮರಾಜನಗರ ( ಮೈಸೂರು ) ಶಾಸನವೊಂದರಲ್ಲಿ[1] ಬರುತ್ತದೆ. ಈ ಪುಣಿಸಮಯ್ಯನ ಕಿರಿಯ ಚಿಕ್ಕನಾದ ನಾಗದೇವ ( ರೂಢನಾಮ ನಾಕಣ ) ನನ್ನು 'ಕವಿತಾಗುಣಸಂಕಲನಾನನಂ' ಎಂದು ಕವಿಪರಮೇಷ್ಠಿ ಎಂಬ ಅರ್ಥ ಹೊರಡುವಂತೆ ವರ್ಣಿಸಿರುವುದರಿಂದ ಈತನು ಕವಿ ಎಂದು ಪ್ರತೀತಿ ಪಡೆದವನಾಗಿದ್ದನೆಂದು ತೋರುತ್ತದೆ. ಆದರೆ ಈತನ ಕೃತಿಯಾಗಲಿ ಶಾಸನವಾಗಲಿ ದೊರೆತಿಲ್ಲ. ಇದ್ದರೆ ಈ ಶಾಸನವೇ ನಾಗದೇವನದಿದ್ದಿರಬಹುದು. ಈ ಕವಿಯ ತಂದೆ ( ಹೊಯ್ಸಳರ ) ಮಹಾಮಾತ್ಯಕುಳೋದ್ಭವನಾದ ಪುಣಿಸಮ; ( ಈತನನ್ನು 'ಸಕಳಶಾಸನವಾಚಕ ಚಕ್ರವರ್ತಿ' ಎಂದು ಸಂಬೋಧಿಸಲಾಗಿದೆ. ) ತಾಯಿ ಪ್ರೋಚಲೆ; ಅಣ್ಣಂದಿರು ಚಾವಣ ( ಚಾಮರಾಜ ) ಮತ್ತು ಕೋರಪ ( ಕ. ಮರಯ್ಯ )[2]. ಅಲ್ಲಿಯ ವರ್ಣನೆಯಂತೆ ಕಣ್ಗೆ ಕಟ್ಟುವ ವಂಶವೃಕ್ಷವಿದು :




---

1 Ec. IV, Ch. 83   2. ಕೊಮರಯ್ಯ ( ಸಮರಯ್ಯ ) ?

# ೫೬. ಮಾದಿರಾಜ

( ೧೧೨೪ )

‘ರಾಯರಾಜ ಬಣ್ಣಿಳೂರಾಳ್ವ ಶ್ರೀವಾಸುದೇವರ್ಗೆ ತೆನ್ನಾಡ ತಿರುಕ್ಕಣಂ ಗೌಡನು’ ಪಟ್ಟಿಕೊಟ್ಟುದನ್ನು ವಿವರಿಸುವ ಶಾಸನವೊಂದು* ದಾವಣಗೆರೆ ಮುಸಾಫಿರ ಬಂಗಲೆಯಲ್ಲಿದೆ. ಅದರ ಕೊನೆಯಲ್ಲಿ ಉಕ್ತವಾದ ‘ಕವಿಮಾದಿರಾಜಂ ಬರೆದಂ’ ಎಂದಿರುವಲ್ಲಿ ‘ಬರೆ’ ಎಂಬುದು ‘ಪೇಳ್’ ಎಂಬ ಅರ್ಥವನ್ನೇ ಸೂಚಿಸುತ್ತದೆ ಎಂಬುದು ‘ಕವಿ’ ಎಂಬ ಪದದಿಂದ ಸುಸ್ಪಷ್ಟವಾಗಿದೆ. ಅದರ ನಾಲ್ಕು ಪದ್ಯಗಳು ಇವು:

† ಶ್ರೀವಲ್ಲಭನ[1] ಹಿತ[1] ಜಯ
ಶ್ರೀವಲ್ಲಭನುದಧಿಪರಿವೃತಾಖಿಳಧಾತ್ರೀ
ಶ್ರೀವಲ್ಲಭನ[2] ಮಳಯಶಃ[2]
ಶ್ರೀವಲ್ಲಭ ಚಕ್ರವರ್ತಿ ವಿಕ್ರಮಭೂಪಂ ‖ ೧ ‖

† ಮರು[3]ವಂ[3] ಗಂಗಕಳಿಂಗಗೌಡಮಗಧಂ ಪಾಂಚಾಳನೇಪಾಳ ಬ
ರ್ಬರ ಸೌರಾಷ್ಟ್ರವರಾಟಲಾಟ ಕರಹಾಟ[4]ಚ್ಚೇ[4]ದಿ ಕಾಶ್ಮೀರ ಗೂ-
ರ್ಜರ ಸಿಂಧುದ್ರವಿಳಾಂಧ್ರ ಮಾಳವ ತುರುಷ್ಕಾದಿ ಪ್ರಸಿದ್ಧಾವನೀ
ಶ್ವರರಂ ಸಾಧಿಸಿದಂ ಭುಜಾಸಿ ಬಳದಿಂ ಚಾಳುಕ್ಯಚಕ್ರೇಶ್ವರಂ ‖ ೨ ‖

ಶ್ರೀರಾಮಾಳಂಕೃತೋರಃಸ್ಥಳನಮಳವಚಃಶ್ರೀವಧೂಕರ್ಣಪೂರಂ
ವೀರಶ್ರೀಬಾಹುವಿಭ್ರಾಜಿತಮಣಿಮಯಕೇಯೂರನುದ್ಯದ್ಯಶೋವಿ
ಸ್ತಾರಂ ವೀರಾವತಾರಂ ಸಕಳಜ[ನನುತಂ ಸಜ್ಜನೌದಾರ್ಯ]ಸಾರಾ
ಪಾರಂ ಶ್ರೀರಾಯಪಾಂಡ್ಯೋಗ್ರಬಳಬುಜಬಳಾಟೋಪನುಗ್ರಪ್ರತಾಪಂ ‖ ೩ ‖

---

* Ep. Car. XI. ದಾವ ೨.

† ಈ ಎರಡು ಪದ್ಯಗಳು ದಾವಣಗೆರೆಯ ಇನ್ನೊಂದು ಶಾಸನದಲ್ಲಿಯೂ (೧೧೨೧) ಬಂದಿದ್ದು ಅಲ್ಲಿಯ ಪಾಠಗಳನ್ನು ಸ್ವೀಕರಿಸಿ ದಾವ. ೨ರ ಪಾಠಗಳನ್ನು ಕೆಳಗೆ ಕೊಟ್ಟಿದೆ.

೧. ಖಿಳ, ೨. ನಧಿಕಜಯ, 3. ಗಂ, 4. ಚ್ಛೇ.

ಸ್ವಸ್ತಿ ಶ್ರೀಮಹಿಮಾಸ್ಪದಂ ಪತಿಪದಾಬ್ಜಾರಾಧಕಂ [ಸರ್ವಲೋ
ಕ]ಸ್ತುತ್ಯಂ ಚಲದಂಕರಾಮನಭಯಂ ಗಂಭೀರರತ್ನಾಕರಂ
ಕಸ್ತೂರೀಧೃತಮಸ್ತಕಂ ಪತಿಹಿತವ್ಯಾಪಾರ . . . -
ವಿಸ್ತಾರೋರ್ಜಿತ ಭಾಸುರೋರ್ಜಿತಯಶಂ ವೈರೀಭಕಂಠೀರವಂ ||೪||

# ೫೭. ನಾಗಾರ್ಜುನಪಂಡಿತ

( ೧೧೨೫ )

ಈತನು ಕ್ರಿ. ಶ. ೧೧೧೫ರಲ್ಲಿ ಒಂದು ಶಾಸನವನ್ನು ಬರೆದಿದ್ದಾನೆ. ಅದು ಧಾರವಾಡ ತಾಲೂಕಿನ ಮುಗುದ ಎಂಬ ಹಳ್ಳಿಯಲ್ಲಿದೆ.[1] ಹಲಸಿಗೆ ಹನ್ನೆರಡು ಸಾವಿರದ ಪ್ರಾಂತದಲ್ಲಿ ಮಹಾರಾಜವಾಡಿ ನಾಡಿಗೆ ಸೇರಿದ ಮೂವತ್ತು ಹಳ್ಳಿಗಳಿಗೆ ಮುಖ್ಯ ಗ್ರಾಮವಾಗಿತ್ತು ಆ ಕಾಲದಲ್ಲಿ ಮುಗುದ. ಆ ಮೂವತ್ತರ ನಾಳ್ಗಾವುಂಡನಾದ ನಾಕರಸನ ತಮ್ಮ ಬಮ್ಮದೇವನೆಂಬವನು ಕೆರೆಗೆ ಗದ್ದೆಯನ್ನೂ ಮನೆಯನ್ನೂ ಬಿಟ್ಟಂತೆ ಆ ಶಾಸನದಲ್ಲಿ ಹೇಳಿದೆ.

ಈ ಶಾಸನವೊಂದು ನೀಳ್ಗಬ್ಬ ಅಥವಾ ಚಿಕ್ಕ ಚಂಪೂಕಾವ್ಯ. ಇದರ ಶಿಲಾಲಿಪಿಯ ವ್ಯಾಪ್ತಿ ೧೦೩ ಸಾಲುಗಳು. ಕನ್ನಡ ಪದ್ಯಗಳು ೪೦ ಇದರಲ್ಲಿವೆ. ನಾಕರಸನ ತಂದೆಯಾದ ಮಾರ್ತಂಡ, ತಾಯಿಯಾದ ಗೊಜ್ಜಿಯಕ್ಕ, ನಾಕರಸ, ಆತನ ತಮ್ಮನಾದ ಬಮ್ಮದೇವ ಇವರುಗಳ ವ್ಯಕ್ತಿತ್ವವನ್ನು ಈ ಕಾವ್ಯದಲ್ಲಿ ವಿಶೇಷವಾಗಿ ಬಣ್ಣಿಸಲಾಗಿದೆ. ಇಂತಹ ದೀರ್ಘ ಶಾಸನಕಾವ್ಯದ ಕರ್ತೃ ತನ್ನ ಹೆಸರನ್ನು ಹೇಳುವುದಕ್ಕೆ ಒಂದು ಕಂದಪದ್ಯವನ್ನೂ ರಚಿಸಿಲ್ಲ. ತನ್ನ ಹೆಸರಿನ ಹಿಂದೆ ಯಾವ ಪ್ರಶಸ್ತಿವಿಶೇಷಣವೊಂದನ್ನೂ ಹಚ್ಚದೆ, ಕೇವಲ "ನಾಗಾರ್ಜುನಪಂಡಿತರು ಪೇಳ್ದ ಕವಿತೆ" ಎಂದು ಶಾಸನದ ಕೊನೆಯಲ್ಲಿ ತಿಳಿಸಿದ್ದಾನೆ. ತನ್ನ ಕವಿತೆಯನ್ನು ಜನ ಕೊಂಡಾಡುತ್ತಿರಲೊಲ್ಲರೇಕೆ, ಸ್ವಪ್ರಶಂಸೆ ಈತನ ಸ್ವಭಾವಕ್ಕೆ ಒಗ್ಗದೆಂದು ತೋರುತ್ತದೆ.

ಕವಿಯ ಮತ ಯಾವುದೆಂದು ಶಾಸನದಲ್ಲಿ ಉಲ್ಲೇಖವಿಲ್ಲದಿದ್ದರೂ ಬಹುಶಃ ಜೈನವೇ ಇರಬೇಕೆಂದು ತೋರುತ್ತದೆ. ತನ್ನ ಮತ ಯಾವುದಿದ್ದರೂ ಜೈನರಾದ ನಾಗ್ಗಾವುಂಡರ ಮನೆತನದ ಪ್ರಶಸ್ತಿಪ್ರಧಾನವಾದ ಅವರ ದಾನದತ್ತಿಗಳನ್ನು ಉಲ್ಲೇಖಿಸುವ ಈ ಶಾಸನದ ಆರಂಭದಲ್ಲಿ ಜಿನಸ್ತುತಿಯ ಶ್ಲೋಕವನ್ನಿಕ್ಕದೆ, 'ನಮಸ್ತುಂಗಶಿರಶ್ಚುಂಬಿ' ಎಂಬ ಶಂಭುನಮನದ ಶ್ಲೋಕ

---

1 Bom. Kar. Ins. Vol. I, part II, Gen. No. 177.

ವನ್ನಿಕ್ಕಿದ್ದಾನೆ. ಇದಲ್ಲದೆ, ಈ ಶಾಸನದ ಇನ್ನೊ ಒಂದು ವಿಶೇಷವೆಂದರೆ, ಧರ್ಮವನ್ನು ಅಳಿದರೆ, ದಾನದತ್ತಿಗಳನ್ನು ಅಪಹರಿಸಿದರೆ ಆಗುವ ದುಷ್ಫಲಗಳನ್ನು ಸಾರಿಹೇಳುವಲ್ಲಿ ಜೈನರಿಗೂ ಶೈವರಿಗೂ ಕೂಡಿಯೇ ಅನ್ವಯಿಸುವಂತೆ ಎರಡು ಮಾತುಗಳನ್ನು ಹೇಳಿರುವುದು. ಈ ಧರ್ಮವನ್ನು ಅಳಿದವರಿಗೆ, ೧. ಲಿಂಗವನ್ನು ಒಡೆದ, ಗೋಕುಲವನ್ನು ಅಳಿದ, ೨. ಜಗತ್ತಿನೊಳಗಣ ಜೀವರಾಶಿಯನ್ನು ಕೊಂದು ಆನಂದದಿಂದ ನೆತ್ತರನ್ನು ಈಂಟಿದ ಪಾಪದಿಂದ ಒದಗುವ ಗತಿ ಆಗುವುದೆಂದು ಉಸಿರುವ ಎರಡು ಕಂದದ ನುಡಿಗಳೆಂದರೆ ಎರಡು ಮುತ್ತಿನ ಸರಗಳೇ ಆಗಿವೆ.

ಈ ಶಾಸನದ ಗದ್ಯಪದ್ಯಗಳ ಮಾದರಿ :

ಕೆಱೆಬಾವಿ ಬಸದಿ ದೇಗುಲ-
ಮಱವಂಟಿಗೆ ಸತ್ರವೆಂಬ ಧರ್ಮಮವಿನಿತುಂ
ನೆಱೆಪಿದುವು ಮುಗುಂದ ಮೂವ-
ತ್ತಱ ವಿಭು ಚಾವುಂಡರಾಯನಿಂದಂ ಜಗದೊಳ್ ||

*　　*　　*　　*

ವ|| ಅಂತೆನಿಸಿ ನೆಗರ್ದ ಸಾಮಂತಮಾರ್ತಂಡಂಗಂ 'ಮಹಾಸತಿಯುಂ ಪುಣ್ಯವತಿಯುಂ ಜಿನಶಾಸನದೇವತೆಯುಂ ಮಲೆಯ ಗಂಗೆಯುಮೆನಿಸಿ, ನೆಗರ್ದ ಶ್ರೀಮದ್ ಗೊಜ್ಜಿಕಬ್ಬೆ ಗಾವುಂಡಿಗಂ, ನಾರಾಯಣದೇವಂಗಂ ಶ್ರೀಯಾದೇವತೆಗಂ ಕಾಮದೇವಂ ಪುಟ್ಟುವಂತೆ, ಕೊಂತಿಗಂ ದೇವೇಂದ್ರಂಗವರ್ಜುನಂ ಪುಟ್ಟುವಂತೆ—

*　　*　　*　　*

ಅರಿಸಾಮಂತರ ರಕ್ತಮೆಂಬ ನವಸಂಧ್ಯಾರಾಗಮುರ್ವೀಳೆ ನಾ-
ಕ್ಷರನೀರೇಜವನಕ್ಕೆ ಪ್ರೊಱ್ದು ಹರುಷಂ ಶಿಷ್ಟೇಷ್ಟಚಕ್ರಾಂಕಮಾ-
ದರದಿಂ [ಪ್ರೊಂ]ದೆ ಮುಗುಂದನೆಂಬುದಯಶೈಳಸ್ಥಾನದೊಳ್ತೇಜಮಾ-
ಗಿರೆ ಚೆಲ್ವಾದುದು ನಾಕಿರಾಜವಿಭುವೆಂಬಾದಿತ್ಯನಿತ್ಯೋದಯಂ ||

ಪಡುದೊಡವುಟ್ಟಿ ಲಕ್ಷ್ಮಿಸಮಕಟ್ಟಿ ಗುಣಂ ಗುಡಿಗಟ್ಟಿ ಬೀರದೊ-
ಳ್ಪೊದವಿ ಪೊದಳ್ದು ವೈರಿಗಳನಾರ್ದಱೆಯಟ್ಟಿ ನೆಗರ್ತೆ ಕೀರ್ತಿವೊ-

ವೊರ್ಡದಲೆ ದಿಗಂತರಾಳಮನೆ ಮುಟ್ಟಿ ಚಲಂ ನೆಱೆಪುಟ್ಟಿ ನಾಕಿಗಾ
ಸ್ನತಿ ಪುಟ್ಟುವಂದದಿಂ ||
. . . . . . . . . . . . .

ವಿಸಸನದೊಳ್ತೋಳ್ಸಾಸಿರ-
ಬೆಸಕಮುಮಂ ನೊಸಲ ಕಣ್ಣುಮಂ ತೋಱುವನೆಂ-
ಬಸದೃಶಮೆನಿಸುವ ಬೀರದ
ಮಸಕಕ್ಕೆ ಪಿನಾಕಿಯೆನಿಸುವಂ ನಾಕರಸಂ ||

ನಾಕಂಗೆ ಜೈನಧರ್ಮಪ-
ತಾಕಂಗೆ ವಿರೋಧಿಸೈನ್ಯಸಂಹರಕೋಪೋ-
ದ್ರೇಕಂಗೆ ಸಮಸ್ತಗುಣಾ-
ನೀಕಂಗೆ ಸಮಾನರೊಳರೆ ಮಾನವನಿಕರಂ ||

* * * *

ಕೆಱೆಗೆಂದು ಬಿಟ್ಟ ಗದ್ದೆಗೆ
ತೆಱೆಯಂ ಕಾಗಿಣಿಯನಪ್ಪಡಂ ಕೊಂಡಾತಂ
ನೆಱೆ ಲಿಂಗಮನೊಡದಂ ಹೆ-
ಱೆಯುಲು ನೀರುಣ್ಬ ಗೋಕುಳಂಗಳನಳಿದಂ ||

ಇದನಾವನೊರ್ಬನಳಿದವ-
ನುದಧಿವೃತಾಖಿಳಧರಿತ್ರಿಯೊಳಗಣ ಜೀವಾ-
ಸ್ಪದಮನಳಿದರುಣಜಲಮಂ
ಪದಪಿಂದೀಂಟಿದನ ಗತಿಯನೆಯ್ದುದೆ ಮಾಣಂ ||

ಈ ಮುಗುವದಲ್ಲಿಯೇ, ಈ ನಾಕರಸನೇ ಮುಗುಂದ ಮೂವತ್ತ ನ್ನಾಳುತ್ತಿದ್ದಾಗ ಬರೆಯಿಸಿದ ಇನ್ನೊಂದು ಶಾಸನವಿದೆ. ಅದನ್ನೂ ಈ ನಾಗಾರ್ಜುನಪಂಡಿತ ಕವಿಯೇ ರಚಿಸಿದನೆಂದು ತಿಳಿಯುವುದಕ್ಕೆ ಆ ಶಾಸನ ದಲ್ಲಿ ಕುರುಹುಗಳಿವೆ. ಚಕ್ರವರ್ತಿ ಮಾಂಡಲಿಕ ಪ್ರಶಸ್ತಿಗಳ ಸಾಮ್ಯವಂತೂ ಸರಿ. ತರುವಾಯ, ಈ ಎರಡನೆಯ ಶಾಸನದಲ್ಲಿ ಬಂದಿರುವ ಆರಂಭದ ಏಳು ಪದ ಪ ಮೊದಲನೆಯ ಶಾಸನದಲ್ಲಿಯ ಪದ್ಯಗಳೇ ಆಗಿವೆ; ಮಾತ್ರವಲ್ಲ, ಅ ಪ ಕ್ರಮದಲ್ಲಿಯೇ ಇಲ್ಲಿಯೂ ಇವೆ. ಅಲ್ಲಿ ಇಲ್ಲಿ ೪-೬ ಕಡೆ ಒಂದೊಂದು

ಶಬ್ದದ ವ್ಯತ್ಯಾಸ ಉಂಟಷ್ಟೆ. ಕವಿ, ೧ನೆಯ ಶಾಸನದಲ್ಲಿಯ ನಾಕರಸನ ಪೂರ್ವಜರ ವರ್ಣನಪದ್ಯಗಳಲ್ಲಿ ಕೆಲವನ್ನು ಅಮುಖ್ಯವೆಂದು ಬಿಟ್ಟು, ಸಂಕ್ಷೇಪಿಸಿ, ಶಾಸನಕಾವ್ಯನಾಯಕನಾದ ನಾಕಗಾವುಂಡನ ವರ್ಣನೆಗೆ ಮಾತ್ರ ಅಲ್ಲಿಂದ ಪದ್ಯಗಳನ್ನು ತೆಗೆದುಕೊಳ್ಳದೆ ಹೊಸತಾಗಿ ರಚಿಸಿರುವಂತೆ ತೋರುತ್ತದೆ; ಅವನ ವಿಷಯದಲ್ಲಿ ಕವಿಗೆ ಉತ್ಸಾಹವಿರುವುದು ಸಹಜ. ಒಂದೇ ಕಾಲದ, ಒಬ್ಬನಿಗೇ ಸಂಬಂಧಿಸಿದ, ಹಲವಾರು ಪದ್ಯಗಳು ಉಭಯಸಾಮಾನ್ಯವಾಗಿರುವ, ಶೈಲಿಸಾಮ್ಯವಿರುವ ಎರಡು ಶಾಸನಗಳು ಭಿನ್ನಕರ್ತೃಕಗಳಾಗಿರುವುದಕ್ಕಿಂತ ಏಕಕರ್ತೃಕಗಳಾಗಿರುವ ಸಂಭವವೇ ಹೆಚ್ಚಾಗಿದೆ; ಹಾಗೆ ನಂಬಬಹುದು. ದುರ್ದೈವದಿಂದ ಈ ಎರಡನೆಯ ಶಾಸನ ಪೂರ್ಣವಾಗಿ ಅಚ್ಚಾಗಿಲ್ಲ; ೩೩ನೆಯ ಸಾಲಿನಲ್ಲಿ ನಾಕರಸನ ವರ್ಣನಪದ್ಯ ಒಂದು ಮಾತ್ರ ಮುಗಿದು, ಮುಂದಿನ ಭಾಗ ಏಕೋ ಅಚ್ಚಾಗದೆ ಪಕ್ಕನೆ ನಿಂತುಹೋಗಿದೆ.[1] ಪೂರ್ಣವಾಗಿದ್ದರೆ, ಇದು ನಾಗಾರ್ಜುನಪಂಡಿತರ ಕವಿತೆ ಎಂಬ ಉಲ್ಲೇಖವನ್ನು ಕಾಣಬಹುದಿತ್ತೇನೋ.

---

1 Bom. Kar. Ins. Vol. II, Gen. No. 211. ಹಾಗೆ ನೋಡಿದರೆ ಈ ಶಾಸನದ ಬರೆಹ ಅಚ್ಚಳಿಯದೆ ಇದೆ—ಒಡೆದಿಲ್ಲ, ಮುಕ್ಕಾಗಿಲ್ಲ, ಕೆತ್ತಿಲ್ಲ. ಶಾಸನ ಸಂಪಾದಕರು 'ಕಾಲ-ದಾನೋಲ್ಲೇಖವಿಲ್ಲ' ಎಂಬ ಹೊರತು, ಶಾಸನ ಅರಕಳೆಯಾಗಿರುವ ಬಗೆಗೆ ಏನನ್ನೂ ಹೇಳದಿರುವುದು, ಆ ವಿಷಯವನ್ನೇ ಎತ್ತದಿರುವುದು ಜಿಜ್ಞಾಸುಗಳಿಗೆ ಅಸಮಾಧಾನಕರವಾದ ಒಂದು ಆಶ್ಚರ್ಯವಾಗಿದೆ.

# ೫೮. ಚಂದ್ರಭಟ್ಟ

(೧೧೨೫)

ಧಾರವಾಡ ಜಿಲ್ಲೆಯ ಹಾನುಗಲ್ಲ ತಾಲೂಕಿನ ಬಾಳೂರು ಗ್ರಾಮದ ಶಾಸನವನ್ನು[1] ಚಂದ್ರಭಟ್ಟನೆಂಬವನು ರಚಿಸಿದ್ದಾನೆ. ಕ್ರಿ. ವ. ೧೧೨೫ರ ಈ ಶಾಸನವು ಚಂಪೂಕಾವ್ಯವಾಗಿ ೬೯ ಸಾಲುಗಳಲ್ಲಿ ಹರಡಿದೆ. ಬಾಳಿಯೂರ ಬಮ್ಮಗಾವುಂಡನು ಸೋಮೇಶ್ವರದೇವರಿಗೆ ಗದ್ದೆಯನ್ನು ಹಾಕಿಕೊಟ್ಟಂತೆಯೂ ಅಯ್ವತ್ತೊಕ್ಕಲು ತೆಲ್ಲಿಗರು ನಂದಾದೀವಿಗೆಗೆ ಎಣ್ಣೆಯನ್ನು ಕೊಟ್ಟಂತೆಯೂ ಇದರಲ್ಲಿ ಹೇಳಿದೆ. ಚಕ್ರವರ್ತಿ-ಮಾಂಡಲಿಕರ ವರ್ಣನೆ, ದೇಶ-ಪುರವರ್ಣನೆ ವಿಸ್ತಾರವಾಗಿವೆ. ಕವಿಯ ಹೆಸರು ಶಾಸನಾರಂಭದಲ್ಲಿಯೆ ಒಂದು ಸಂಸ್ಕೃತ ಶ್ಲೋಕದಲ್ಲಿ ಬಂದಿದೆ :

ಸ್ವಸ್ತಿಮಭ್ಯುದ್ಯತೇ ಕಾವ್ಯಂ ರತ್ನಾಳಂಕೃತಭೂಷಣಂ
ವಿದ್ಯಭಾವಿತವಿಖ್ಯಾತ[ಂ*] ಚಂದ್ರಭಟ್ಟಕವಿಶ್ರುತಂ ||

ಈ ಶಾಸನದ ಗದ್ಯಪದ್ಯಮಾದರಿ :

ಬಳವದ್ಭೂಪಾಳನಾರಾಯಣಬಳವದು ಭೂಪಾಳತಾರಾಭ್ರಚಂದ್ರಂ
ಬಳವದ್ಭೂಪಾತಥಾಭಾಸ್ಕರ ಬಳವದು ಭೂಪಾಳವಿದ್ಯಾಧರೇಂದ್ರಂ
ಬಳವದ್ಭೂಪಾಳ ಕಂಜಾಸನ ಬಳವದು ಭೂಪಾಳಚಾಳುಕ್ಯರುದ್ರಂ
ಬಳವದ್ಭೂಪಾಳಚೂಡಾಮಣಿಪದಕಿರಣಂ ವಿಕ್ರಮಾದಿತ್ಯದೇವ ||

ಮೇರುಗಿರಿಯಿಂದೆ ತೆಂಕಣ
ವಾರಿಧಿ ಪರಿವೃತವಸುಂಧರಾವನಿತೆಯ ವಿ
ಸ್ತಾರಮುಖ ಭರತವರ್ಷ ವಿ(ದಿ)
ರಾರಾಜಿಸುತಿರ್ಪುದೆಸೆವ ಕುಂತಳವಿಷಯ[ಂ*]

---

1 K. I. Vol. V, Gen. No. 20.

ಆ ವಿಷಯವಿಳಾಸಿನಿಯ ವದನಕಮಳಕ್ಕೆ ಮಣಿದರ್ಪಣವಿರ್ಪಂತಿರ್ಪುದ ನೇನೆಂದೊಡೆ—

ಬೇೞ್ಕೊಂಡುದ್ದಾ ಸಿ ಬೇೞ್ಕೊಂಡಖಿಳಲಕುಮಿ[2] ಬೇೞ್ಕೊಂಡುವಿಸ್ತಾರಪೂರಂ
ಬೇೞ್ಕೊಂಡುತ್ಸಾಹಸಂಪತ್ಪ್ರದಪರಮಣಿ ಬೇೞ್ಕೊಂಡು ಲಾವಣ್ಯಪುಣ್ಯಂ
ಬೇೞ್ಕೊಂಡೈಶ್ವರ್ಯರಾರಾಜಿತದತಿಶಯ[3] ಬೇೞ್ಕೊಂಬನಂ ಪಾನುಗಲ್ಲ
ಯೊಳ್ಬೇೞ್ಕೆಂ ಬೀೞ್ಕೆತ್ತೋ ಚೆಲ್ವಂ ತ[ದು*]ನುಹಿಗೆ ಮಹಾಕೋಟಿ ಕಂಗೆಡ್ಡ
ಮಾಗಲ್ ॥

ಅಂತಾ ದೇಶಾಧೀಶ್ವರನ ಸಕಳ ಗುಣಗಣಾಳಂಕೃತಮು[ಂ*] ವೀರಮಾಹೇಶ್ವರನ ವೀರಾವತಾರಮು[ಂ*] ಬನವಾಸೀಪುರವರಾಧೀಶ್ವರನ ವಿತರಣ ವಿನೋದಮು[ಂ*] ಮಾರ್ಕೋಳ್ವರ ಗಂಡನತರ್ಕ್ಯವಿಕ್ರಮೋಪಕ್ರಮಮು[ಂ*] ಮಂಡಳಿಕದೇವೇಂದ್ರನಭಿನವವಿಭವಪ್ರಭಾವಮುಂ ಕಾದಂಬಕಂಠೀರವನ ಕ್ಷಾತ್ರವೃತ್ತಿಯುಮದೆಂತೆಂದೊಡೆ —

---

2 ಮೂ, ಲಕ್ಷ್ಮಿ. 3. ಮೂ + ಬಿದು.

# ೫೯. ಭಾಸ್ಕರ

(೧೧೨೬)

ಹೈದರಾಬಾದು ಜಿಲ್ಲೆಯ ಪಟಂಚೆರು ಗ್ರಾಮದ ಒಂದು ಶಾಸನವು[1] ಚಾಳುಕ್ಯ ೩ನೆಯ ಸೋಮೇಶ್ವರನು ತನ್ನ ಪಟ್ಟಬಂಧೋತ್ಸವ ಸಮಯದಲ್ಲಿ (ಚಾ. ವಿ. ವ. ೫೧ ಫಾಲ್ಗುಣ ಶುದ್ಧ ೭) ಈ ಮೊದಲು (ಚಾ. ವಿ. ವ. ೫೧, ಕಾರ್ತಿಕ ಬ. ೯) ತನಗೆ ವಿಜಯಯಾತ್ರೆಗೆ ಲಗ್ನವನ್ನು ಕೊಟ್ಟ ಜೋಯಿಸಿಗ ನನ್ನೆಯಭಟ್ಟನನ್ನು ನೆನೆದು ಪೊಟ್ಟಳಗೆರೆಯಲ್ಲಿ ಒಪ್ಪುವ ಚಿಂತಾಮಣಿಪುರದಲ್ಲಿ ಕೊಳಗದಾಯವನ್ನು ಕೊಟ್ಟನೆಂದು ಉಲ್ಲೇಖಿಸುತ್ತದೆ. ಚಾಳುಕ್ಯವಂಶೋನ್ನತಿಯನ್ನು ಹೇಳುವ ಎಂಟು ಹತ್ತು ಪದ್ಯಗಳನ್ನೊಳಗೊಂಡ ಈ ಶಾಸನವನ್ನು ಸರಸಕವೀಂದ್ರನಾದ ಭಾಸ್ಕರನೆಂಬವನು ರಚಿಸಿದನೆಂದು ಕೆಳಗಣ ಪದ್ಯದಿಂದ ತಿಳಿಯುತ್ತದೆ:

ನಿರತಿಶಯೋನ್ನತಮತಿಭಾ
ಸ್ಕರ ಸರಸಕವೀಂದ್ರರಚಿತ ಶಾಸನಮಂ ಬಿ
ತ್ತರದಿಂ ಪ್ರತಿಕಂಟಿಂ ಸಾ
ಕ್ಷರನಿಳಯಂ ತಿದ್ದಿ ಭಾಸ್ಕರಯ್ಯಂ ಬರೆದಂ ||

ಅದನ್ನು ತಿದ್ದಿ ಬಿತ್ತರಿಸಿ ಬರೆದವನೂ ಒಬ್ಬ ಭಾಸ್ಕರಯ್ಯ. ಎಂದರೆ ಈ ಶಾಸನ ಈ ರೂಪುಗೊಳ್ಳುವಲ್ಲಿ ಬರೆಹಗಾರ ಭಾಸ್ಕರಯ್ಯನ ಕೈಯೂ ಆಡಿದೆ ಎಂದು ತೋರುತ್ತದೆ.

ಈ ಶಾಸನದ ಕೆಲವು ಪದ್ಯಗಳು :

ಶ್ರೀಮಚ್ಚಾಳುಕ್ಯವಂಶೋದ್ಭವನನುಪಮಕೀರ್ತ್ತಿಧ್ವಜಂ ಚಾಪದಂಡ ಶೌರ್ಯೋ
ದ್ದಾಮಂ ವೀರಾರಿಭೂಭೃತ್ಪ್ರಕರನಿಶಿತವಜ್ರಾಯುಧಂ ಕ್ಷತ್ರವಿದ್ಯಾ
ಧಾಮಂ ರಟ್ಟಾನ್ವಯಾಯ ಪ್ರಬಳತರ[ತ]ಮಸ್ತೋಮಮಾರ್ತಂಡತೇಜಃ
ಸ್ತೋಮಂ [ತಾ]ನೆಂಬಿನಂ ಮಿಕ್ಕೆಸೆದನಸಮಬಳಂ ತೈಲಪಕ್ಷೋಣಿಪಾಳಂ ||

---

1 Andhra Pradesh Govt. Archaeological series, No. 3. Hd. 1.

ಮುಳಿವೆತ್ತಿತ್ತಿದ ತೋಳಬಾಳಜಳದಿಂ ಮೆಯ್ಗೊಂಡ ಮಿತ್ರಾಂಗನಾ
ಕುಳಬಾಷ್ಪದ್ರವದಿಂ ತಳಿರ್ತು ರಿಪುಸೇನಾಚಕ್ರರಕ್ತಾಂಬುವಿಂ
ಬಳೆದತ್ತೀಗಳುಪಾಹಿತಾಹಿತಗಳತ್ಕಾಳಿಂಗಮಾತಂಗಸಂ
ಕುಳದಾನಪ್ಲವದಿಂ ಪರಾಕ್ರಮವನಂ ಭೂಲೋಕಮಲ್ಲಾಂಕನಾ ||

ನರನಾಥಂ ನನ್ನಿಯ ಭ
ಟ್ಟರಿಗೆ ಮನೋಮುದದಿ ನೆನೆದು ಪೊಟ್ಟಳಿಗೆರೆಯುಳ್
ಕರವೊಪ್ಪುವ ಚಿಂತಾಮಣಿ
ಪುರದಲ್ಲಿಯೆ ಕೊಳಗದಾಯುಮಂ ಸಲೆ ಕೊಟ್ಟಂ ||

# ೭೦. ಮಲ್ಲಿನಾಥ

(೧೧೩೮)

ಕಡೂರು ಜಿಲ್ಲೆಯ ಮೂಡಗೆರೆ ತಾಲೂಕಿಗೆ ಸೇರಿದ ಹಂತೂರು ಗ್ರಾಮದ ಶಾಸನವೊಂದನ್ನು[1] 'ಶ್ರೀಮಲ್ಲಿನಾಥಂ ಬಿರುದಲೇಖಕ ಮದನ ಮಹೇಶ್ವರಂ' ಬರೆದಿಪ್ಪಾನೆಂದು ಅಲ್ಲಿ ತಿಳಿಸಲಾಗಿದೆ. ಇದು ಕ್ರಿ. ವ. ೧೧೩೦ರ ಶಾಸನ. ಇದಕ್ಕಿಂತ ಒಂದು ವರುಷ ಹಿಂದಿನ (ಕ್ರಿ. ವ. ೧೧೨೯) ಮಲಧಾರಿದೇವರು ಸಲ್ಲೇಖನವಿಧಿಯಿಂದ ದೇಹವಿಟ್ಟುದನ್ನು ತಿಳಿಸುವ ೭೩ ಪದ್ಯಗಳನ್ನೊಳಗೊಂಡ ೨೩ ಸಾಲುಗಳ ಸಂಸ್ಕೃತಶಾಸನವೊಂದು ಶ್ರವಣ ಬೆಳ್ಗೊಳದಲ್ಲಿದೆ.[2] ಅದರ ಕೊನೆಯಲ್ಲಿ 'ಶ್ರೀಮನ್ಮಲಧಾರಿದೇವರ ಗುಡ್ಡಂ ಬಿರುದಲೇಖಕ ಮದನಮಹೇಶ್ವರಂ ಮಲ್ಲಿನಾಥಂ ಬರೆದಂ' ಎಂದು ಹೇಳ ಲಾಗಿದೆ. ಈ ಇಬ್ಬರೂ ಮಲ್ಲಿನಾಥರು ಅಭಿನ್ನರೆಂಬುದು ಸ್ಪಷ್ಟವಾಗಿ ಗೋಚರಿಸುತ್ತದೆ. ಶ್ರವಣಬೆಳ್ಗೊಳ ಶಾಸನದ ಸಂಪಾದಕರು, ಬರೆದಂ ಎಂಬುದಕ್ಕೆ ಕವಿತೆ ಕಟ್ಟಿದನು ಎಂದು ಅರ್ಥಯಿಸಿದ್ದಾರೆ. 'ಬಿರುದ ಲೇಖಕ ಮದನಮಹೇಶ್ವರಂ' ಎಂಬಲ್ಲಿಯ ಬಿರುದು ಕೂಡ 'ಶಾಸನಕರ್ತೃ' ಎಂಬ ಅರ್ಥವನ್ನೇ ಧ್ವನಿಸುತ್ತದೆ. ಆದುದರಿಂದ ಈ ಮಲ್ಲಿನಾಥನನ್ನು ಶಾಸನ ಕರ್ತೃವೆಂದೇ ಎಣಿಸಬೇಕು. ಹಾಗೆಯೆ ಇವನು ಉಭಯಭಾಷಾಕವಿ.

ಹರಿಯಬ್ಬರಸಿ ಹಂತಿಯೂರಲ್ಲಿ—ಇಂದಿನ ಹಂತೂರಲ್ಲಿ— ಚೈತ್ಯಾಲಯ ವನ್ನು ಕಟ್ಟಿಸಿ ದತ್ತಿಬಿಟ್ಟುದನ್ನು ತಿಳಿಸುವ ಹಂತೂರು ಶಾಸನದ ಗದ್ಯಪದ್ಯ ಗಳ ಮಾದರಿ ಇಲ್ಲಿದೆ :

ಕಳಕೆ ಬಯಲುಗೆಕ್ಕತುಳ
ಕ್ಕೆಳೆಯೊಳ್ಮಾರ್ಜಾಂಪರಿಲ್ಲದಾ ದಿಗಧಿಪರಂ
ಸೆಳೆದು ನೆಲಕ್ಕಿಕ್ಕಲುಕಾ
ವಳಿಪುದು ರಿಪುಕುಮಾರ ಭೈರವನ ಮನ ||

---

1 Ep. Car. VI, ಮೂಡಗೆರೆ ೨೨.

2 Ep. Ind. III, page 189, Sravanabelgola Epitaph of Mallisena.

ಆವಂಗಮಾವ ಧನಮುಮ
ನೀವ ಮಹಾದಾನಿ ಯುದ್ಧವಿಜಯಮನಾ ಮಾ
ದೇವಂಗಮಿಱಿಯದದಟರ
ದೇವಂ ಬಲ್ಲಾಳದೇವನಪ್ರತಿಮ ಬಳಂ ||

ಅಂತೆನಿಸಿ ನೆಗರ್ದ ಶ್ರೀಮತ್ಕುಮಾರ ಬಲ್ಲಾಳದೇವನಗ್ರಾನುಜೆ ಹರಿಯಬ್ಬರಸಿಯೆಂತಪ್ಪಳೆಂದಡೆ—

ಸರಸ್ವತಿಯಂತೆ ಸತ್ಕಳಾನ್ವಿತೆ, ಸೀತೆಯಂತೆ ವಿನೀತೆ, ಸುಸೀಮಾದೇವಿಯಂತೆ ಸುಶೀಲೆ, ರುಗ್ಮಿಣಿಯಂತೆ ಗುಣಾಗ್ರಣಿ,

ಅನಲ್ಪಕಲ್ಪಲತಾಶಾಖಾನೀಕದಂತಸೂನದಾನಜನಿತ ಜನಮನಃ ಪುಳಕೆಯುಂ, ಭಗವದರ್ಹತ್ಪರಮೇಶ್ವರ ಚರಣನಖಮಯೂಖಲೇಖಾವಿಳಸಿತ ಲಲಾಟಪಳಕೆಯುಂ, ಚಾತುರ್ವರ್ಣವರ್ಣಿತಾಗಣ್ಯಪುಣ್ಯಜನಶಿಖಾಮಣಿಯುಂ ಸಮ್ಯಕ್ತ್ವಚೂಡಾಮಣಿಯುಮೆನಿಸಿ - - - -

## ೬೧. ಮಹಬಳದೇವ

(೧೧೨೯)

ಹೊಯ್ಸಳ ಮಾಂಡಳಿಕ ಬರ್ಮರಸನು ಅರಗಟ್ಟದ ಕೆರೆಯನ್ನು ಕಟ್ಟಿಸಿ, ಶಿವಾಲಯವನ್ನೆತ್ತಿಸಿ ದತ್ತಿಬಿಟ್ಟಂತೆ ಹೇಳುವ ಒಂದು ಶಾಸನ[1] ತರೀಕೆರೆ ತಾಲೂಕಿನ ಬುಕ್ಕಾಂಬುಧಿಯಲ್ಲಿದೆ. ಅದರಲ್ಲಿ ವೀರನಾರಸಿಂಹನ ವರ್ಣನೆಯ ಪದ್ಯಗಳು ಎರಡು, ಕೆರೆಯ ವರ್ಣನೆಯ ಪದ್ಯವೊಂದು ಇವೆ. ಕೊನೆಯ ಕಂದಪದ್ಯದಲ್ಲಿ ಮಹಬಳದೇವನ ವರ್ಣನೆಯಿದೆ :

ಓಂ ನಮ || ಗಿರಿಜಾರಮಣಪದಾರ್ಚಿತ(ರ್ಚಕ)
ಪರಮತಪೋಧನ ಸುರೇಶಮುನಿಪತಿಸುತನುಂ
ಗುರುಚರಣಕಮಳಭೃಂಗಂ
ಧರೆಯೊಳ್ ಪ್ರಖ್ಯಾತ-ವಿಬುಧ ಮಹಬಳದೇವಂ ||

ಈ ಸುರೇಶ ಮುನಿಪತಿಯ ಮಗನಾದ ಮಹಬಳದೇವನು ಶಾಸನವನ್ನು ರಚಿಸಿದಂತೆಯಾಗಲಿ, ಬರೆದಂತೆಯಾಗಲಿ ಹೇಳಿಲ್ಲವಾದರೂ ಇವನಿಗೆ ಕವಿಸಂಕೇತದ ಬಿರುದು-ವಿಶೇಷಣಗಳ ಉಲ್ಲೇಖವಿಲ್ಲವಾದರೂ, ಈ ಪದ್ಯದ ತರುವಾಯ ಬಂದಿರುವ ಕೆಲವು ದಾನಿಗಳಲ್ಲಿ ಚಟ್ಟ, ಮಾದಿ, ಮಾಚ ಇವರ ಹೆಸರುಗಳು ಮಾತ್ರವಿದ್ದು ಪ್ರಖ್ಯಾತ ವಿಬುಧ ಮಹಬಳದೇವನ ಹೆಸರು ಇಲ್ಲದಿರುವುದು ಗಮನಾರ್ಹವಾಗಿದೆ. ಇದರಿಂದ ಈ ಮಹಬಳದೇವನೇ ಪ್ರಸ್ತುತ ಶಾಸನದ ಕರ್ತೃವೆಂದೂ ಅದನ್ನು ಸ್ಪಷ್ಟವಾಗಿ ಹೇಳದೆ ಸುಮ್ಮನೆ ತನ್ನ ಹೆಸರು-ದೆಸೆಯನ್ನು ಉಲ್ಲೇಖಿಸಿದ್ದಾನೆ ಎಂದೂ ಊಹಿಸಬಹುದಾಗಿದೆ.

ಅಲ್ಲಿಯ ಕೆರೆಯ ವರ್ಣನ ಪದ್ಯವಿದು :

ಅರಘಟ್ಟಪುರತಟಾಕಂ
ಸುರನದಿ ದುಗ್ಧಾಬ್ಧಿ ಸಕಲತೀರ್ಥೋದಕದಿಂ

---

1 Ep. Car. VI, ತರೀಕೆರೆ ೬೩.

ಪಿರಿದೆನಿಸಿ ಪರಿದು ನೆಲಸಿದ
ಸರವರ ರಾಮೇಶತೀರ್ಥನಾಮಮೆನಿಕ್ಕುಂ ||

ಈ ಅರಘಟ್ಟವೇ ಮುಂದೆ ವಿಜಯನಗರ ಕಾಲದಲ್ಲಿ ಬಕ್ಕಾಂಬುಧಿ ಯಾಗಿ ನಾಮಾಂತರ ಹೊಂದಿರಬಹುದಲ್ಲವೆ?

# ೬೨. ಮೂಕಣಪಂಡಿತ

( ೧೧೩೪ )

ಮೂಕಣಪಂಡಿತನು ಹಾವೇರಿಯ ಒಂದು ಶಾಸನವನ್ನು[1] ರಚಿಸಿದ್ದಾನೆ. ಶಾಸನದ ಕೊನೆಯಲ್ಲಿ 'ಲಸಚ್ಛಾಸನ ಕೃತಿ ವಿಶ್ವಗುಣನಿಧಿ ಸುಕವಿ . . . ಕಿರಿಯ ಮೂಕಣಪಂಡಿತರ ಕಥನಂ' ಎಂದು ಮಾತ್ರವಿದೆ. ಈ ಕವಿ ವಿಶ್ವಗುಣನಿಧಿ ಸುಕವಿ ಇತ್ಯಾದಿ ಪ್ರಶಸ್ತಿಗಳುಳ್ಳವನೆಂಬುದರ ಹೊರತು ಅವನ ವಿಶೇಷ ಪರಿಚಯವಾಗುವುದಿಲ್ಲ. '. . . ಕಿರಿಯ' ಎಂಬುದು ಅವನ ಊರಾಗಿರಬೇಕೆಂದು ತೋರುತ್ತದೆ; ಆದರೆ ಅದು ಸ್ಪಷ್ಟವಿಲ್ಲ.

ಚಾಲುಕ್ಯ ಭೂಲೋಕಮಲ್ಲನಾಳಿಕೆಯ ೮ನೆಯ ವರ್ಷದ ಆನಂದ ಸಂವತ್ಸರದಲ್ಲಿ ( ಕ್ರಿ. ಶ. ೧೧೩೪ ) ಹುಟ್ಟಿದ ಈ ಶಾಸನವು ಕದಂಬ ಮಲ್ಲಿಕಾರ್ಜುನನು ಹಾವೇರಿಯ ಹೆಗ್ಗೆರೆಯ ಜೀರ್ಣೋದ್ಧಾರಕ್ಕೆ ಕೆಲವೊಂದು ದತ್ತಿಗಳನ್ನು ಬಿಟ್ಟಂತೆ ಹೇಳಿದೆ. ಅದರಲ್ಲಿಯ ಕೆಲವೊಂದು ಸುಂದರ ಪದ್ಯಗಳು ಇಲ್ಲುಂಟು :

ಬನವಸೆನಾಡದು ಕಂದ
ರ್ಪನ ಜನನಾಗಾರಮದುವೆ ರತಿಗೆ ಮನೋನಂ
ದನಮೆಂದೊಡೊಳುಪನಿನ್ನಾ
ವನೊ ಪೊಗಳಲು ನೆಱೆವನದೞ ಮಹಿಮೋನ್ನತಿಯ [೦*] ||

ಆ ನಾಡೊಳಗ್ರಹಾರಂ
ಭೂನಾರೀಕುಚತಟಾಗ್ರಹಾರಂ ವಿಮಳ

---

1 ಶಿಲಾಶಾಸನಗಳ ಕೆಲವು ಕನ್ನಡಕವಿಗಳು ( ಡಾ. ಶ್ರೀನಿವಾಸ ರಿತ್ತಿ, ) ಕ. ಸಾ. ಪ. ಪತ್ರಿಕೆ, ಸಂ. ೪೩. ಸಂ. ೨ ಡಿಸೆಂಬರ್ ೧೯೫೮. ( B. K. 104 of 1932–33 ).

ಶ್ರೀನಿಳಯಂ ಸದ್ವಿದ್ಯಾ
ಸ್ಥಾನಂ ಪಾವರಿ ನಿರಂತರಂ ರಂಜಿಸುಗುಂ ||

ಎಳಮಾವಿಂಡಬ್ಜ ಷಂಡಂಗಳಿನಳಿಕುಳಝುಂಕಾರದಿಂ ಸಾರಪುಂಸ್ಕೋ
ಕಿಳಮಂದ್ರಾರಾವದಿಂ [ಪುಂ]ಬಳಿಯ ಸವಳಿನಿಂ ಸುತ್ತಿಪರ್ವುತ್ತುಕೋದ್ಯ
ತ್ಫಳಮುಂ ತಾಳ್ದಿರ್ದ ಪೂಗೀವನದಿನೆಲೆಯುತ್ತೋಟಂಗಳಿಂ ಕಾಯ್ತು ತೆಂಗಿಂ
ಫಳಮಂ ಪೇಱಿರ್ದ ರಂಭಾವನದಿನೆಸೆವ ವುದ್ಯಾನಲಕ್ಷ್ಮೀನಿವಾಸ[ಂ*] ||

## ೬೩. ಸಾಂತಮಹಂತ

( ೧೧೩೮ )

ಮೈಸೂರು ಜಿಲ್ಲೆಯ ನಾಗಮಂಗಲ ತಾಲೂಕಿನ ಲಾಲನಕೆರೆಯಲ್ಲಿರುವ ಒಂದು ಶಾಸನವನ್ನು[1] ಸಾಂತಮಹಂತನೆಂಬವನು ರಚಿಸಿದ್ದಾನೆ. ದಂಡಾಧೀಶ ಏಚದೇವನು ಹೊಯ್ಸಳ ಬಿಟ್ಟಿದೇವನನ್ನು ಮೆಚ್ಚಿಸಿ ನಾನಲ (ಲಾಲನ) ಕೆರೆಯ ಗೌಂಡಿಕೆಯ ಉಂಬಳಿಯನ್ನು ಪಡೆದುದನ್ನು ಈ ಶಾಸನ ಹೇಳುತ್ತದೆ. ಕೇವಲ ಪದ್ಯಮಯವಾದ ಇದರಲ್ಲಿ ೧೩ ಕಂದಗಳೂ ೭ ವೃತ್ತಗಳೂ ಇವೆ. ಆರಂಭ ಶಿವಸ್ತುತಿಯ ಕಂದಪದ್ಯದಿಂದಾಗುತ್ತದೆ. ಕೊನೆಯ ಪದ್ಯದಿಂದ ಕವಿ ಸೋಮಿಯಕ್ಕನ ಕಿರಿಯ ಮಗನಾದ ಸಾಂತಮಹಂತನೆಂದು ತಿಳಿಯುತ್ತದೆ. ಆ ಪದ್ಯವಿಂತಿದೆ:

ಕ್ಷಿತಿವಿನುತೆ ಸರ್ಬದೇವ  
ನು(ಸ್ತು)ತಿ ಸಸ್ತುತಿ ಸೋಮಿಯಕ್ಕನಣುಗಿನ ಪುತ್ರಂ ॥  
ಸತುಕವಿ ಸಾಂತಮಹಂತಂ  
ಸ್ಥಿತಿಸಾರಂ ಪೇಳ್ದನಲ್ತಿಯಿಂ ಸಾಸನಮಂ ॥

ಕವಿನಾಮ ನಿರ್ದೇಶದ ಈ ಪದ್ಯಕ್ಕಿಂತ ಒಳಗಣ ಪದ್ಯಗಳು ಸಹಜಸುಂದರವಾಗಿ ಹರಿದುದನ್ನು ಕಾಣಬಹುದು. ವರ್ಣನೆಯಲ್ಲಿಯೂ ಕಲ್ಪನೆಯ ಬೆಳಕು ಗೋಚರಿಸುತ್ತದೆ. ಶಿವ, ವಿನಯಾದಿತ್ಯ, ಕೆಳೆಯಬ್ಬೆ, ಎಚಿಯಂಗ ಇವರ ವರ್ಣನ ಪದ್ಯಗಳನ್ನು ಇಲ್ಲಿ ಉದಾಹರಿಸಿದೆ:

ಪತ್ತಿರೆ ಗಂಗೆಯ ಹನಿಗಳು  
ಮುತ್ತಿನ ಬಾಸಿಗಮೆನಿಸಿ ವಾಸುಗಿ ಸುಖದಿಂ  
ಸುತ್ತಿರ್ದ ಜೂಟದಾ ದೇ  
ವೋತ್ತಮನೆಮಗೊಸೆದು ಕೊಡುಗೆ ಸುಖಸಂಪದಮಂ ॥

---

[1] Ec. IV, ನಾಗಮಂಗಲ ೨೨.

ಆದಿತ್ಯರೆನಿಬರಾದೊಡೆ
ಮೇದಿನಿಯೊಳಗಿವನ ತೇಜಮಧಿಕಮೆನುತ್ತಂ
ಕಾದಲು ವೈರಿಗಳಮ್ಮದ
ಯಾದವಕುಳತಿಳಕ ವೀರವಿನಯಾದಿತ್ಯಂ ||

ಕೆಳೆಗಂಗೆಯೊಳಮಳತೆಯಿಂ
ಕೆಳೆ ಸೊಬಗಿಂ ಗಿರಿಜೆಯೊಡನೆ ಸಿರಿಯೊಡನೆಂದುಂ
ಕೆಳೆ ನಿಜಪತಿಯಭಿವೃದ್ಧಿಗೆ
ಕೆಳೆಯಬ್ಬೆಗೆ ನಾಮಮಾದುದಿಂತನ್ವರ್ಥಂ ||

ಪಱಿಪಱಿಸಿ ಮುಳಿದು ಕಾಯ್ಪಿಂ
ದುಱಿದೆತ್ತಿದ ವೀರವೈರಿವರ್ಗದ ಬಾಯ್ ಪೊ
ನ್ನೊಱೆಯಾಗಿ ಕಟ್ಟಿದಲಗಂ
ಕಿಱುಪನೆ ರಣಮುಖದೊಳದಟನಿಂದೆಱೆಯಂಗಂ ||

# ೭೪. ಬಲದೇವ

( ೧೧೩೮ )

ಧಾರವಾಡ ತಾಲೂಕಿನ ಮಾದನಭಾವಿಯ ಒಂದು ಶಾಸನವನ್ನು[1] ಬಲದೇವನು ಬೆಸಗೆಯ್ದ(ಪೇಳ್ದ)ನೆಂದು ಶಾಸನದ ಕೊನೆಯ ಪದ್ಯದಿಂದ ತಿಳಿಯುತ್ತದೆ. ಈತನು ಕಣಿಯ ಚಾವುಂಡನ ಮಗನು; ಶಿವೋಪಾಸಕನು; ಮಂದೂರವನು. ಮಂದೂರು ಈಗಿನ ಮಾದನಭಾವಿಯೆ ಆಗಿರಬೇಕು.

ಈ ಶಾಸನದ ಹುಟ್ಟು ಕ್ರಿ. ವ. ೧೧೩೮ರಲ್ಲಿ ಆಯಿತು.[2] ಇಡಿಯ ಶಾಸನವು ಗದ್ಯದಲ್ಲಿಯೆ ಇದೆಯೆಂದು ಹೇಳಬಹುದು. ಕೊಂಕಣಚಕ್ರವರ್ತಿ ಜಯಕೇಶಿದೇವರಸರೂ ಪಟ್ಟಮಹಾದೇವಿ ಮೈಳಲದೇವಿಯರೂ ಮಂದೂರ ಸ್ವಯಂಭುಕಲಿದೇವರಿಗೆ ಭೂಮಿಯನ್ನು ಬಿಟ್ಟಂತೆ ಇದರಲ್ಲಿ ಹೇಳಿದೆ. ಶಾಸನವನ್ನು ಮಾಡಿಸಿದವನು ಸಂಕರಬಮ್ಮಯ ನಾಯಕ. ಫಲಶ್ಲೋಕದ ತರುವಾಯ ಕೆಳಗಣ ಮೂರು ಪದ್ಯಗಳು ಮಾತ್ರ ಬಂದಿವೆ:

ಪರಮ ಸ್ವಯಂಭು ಕಲಿದೇ
ವರಿಗೀ ಶಾಸನಮನೆಸೆಯೆ ತಾಂ ಮಾ[ಡಿ]ಸಿದಂ
ವರಗುಣನಿಧಿ ನೆಗರ್ದ[ಸಂ]
ಕರ ಬಮ್ಮಯ ನಾಯಕಂ ಕೃತಾರ್ಥಂ ಜಗದೊಳ್ ||

ರೂವಾರಿಕುಮುದ ಚಂದ್ರಂ
ಭಾವಕರೂವಾರಿವಾರಿಜಕ್ಕಂ ಮತ್ತಂ (ಮಿತ್ರಂ ? )
ರೂವಾರಿವಾರಿಜೋದ್ಭವ
ನೀ ವಸುಮತಿಯೊಳಗತಿಪ್ರಚಂಡಂ ಚೌಂಡಂ ||

---

1 B. K. I. IV.

2 ಶಾಸನದಲ್ಲಿ ಚಾ. ವಿ. ವ. ೬೨ ಎಂದಿರುವುದು ತಪ್ಪಾಗಿರುವುದೆಂದೂ ಅದರಲ್ಲಿಯ ವಿವರಗಳು ೧೧೩೮ಕ್ಕೆ ಸರಿಹೊಂದುವವೆಂದೂ ಸಂಪುಟದ ಸಂಪಾದಕರಾದ ಶ್ರೀ ಗಾಯಿಯವರು ಅಭಿಪ್ರಾಯಪಟ್ಟಿದ್ದಾರೆ.

ಸಲೆ ಮುಂದೂರ ಗವುಂಡನಾ ಕಣಿಯ ಚಾವುಂಡಂಗೆ ಸತ್ಪುತ್ರನೀ
ಬಲದೇವಂ ಶಿವಪಾದಪದ್ಮಮಧುಪಂ ಮುಂದೂರೊಳಂ ಕಂಭುವೀ
ಕಲಿದೇವಂಗತಿಭಕ್ತಿಯಿಂದೆ ಬೆಸಗೆಯ್ದೀ ಶಾಸನಂ ನಿಲ್ಕೆ ಶಾಂ
ನೆಲನುಂ ನೇಸರುಮುಳ್ಳಿನಂ ತೊಳಗದಿನ್ನಾಚಂದ್ರತಾರಂಬರಂ ॥

# ೭೫. ಸೋಮೇಶ್ವರಭಟ್ಟ

(೧೧೩೯)

ಹಾಸನಜಿಲ್ಲೆ ಚೆನ್ನರಾಯಪಟ್ಟಣ ತಾಲೂಕಿನ ನೌಲೆ ಗ್ರಾಮದ ಶ. ವ. ೧೦೬೦ರ ಶಾಸನವೊಂದರ[1] ಮೊದಲ ೧೪ ಸಾಲುಗಳು ಪೂರಾ ಸವೆಸಿ ಹೋಗಿವೆ; ಮುಂದಣ ೮ ಸಾಲುಗಳೂ ಅಲ್ಲಲ್ಲಿ ಮುಕ್ಕಾಗಿವೆ; ೧೮ನೆಯ ಪಙ್ತಿಯಲ್ಲಿ ವೀರಬಲ್ಲಾಳನಾಳಿಕೆಯ ಉಲ್ಲೇಖವಿದೆ. ಶಾಸನದ ಮೊದಲ ಮುಕ್ಕಾಲು ಭಾಗವು ಪದ್ಯರಹಿತವಾದ ಕನ್ನಡ ಗದ್ಯದಲ್ಲಿದ್ದು ಮುಂದೆ ಎರಡು ಮೂರು ಸಂಸ್ಕೃತ ಪದ್ಯಗಳುಂಟು. ಕೊನೆಯಲ್ಲಿ

"ಹಸ್ತಿತಡಾಗನಿವಾಸಿನೋ ಜಾತವೇದಭಟ್ಟೋಪಾಧ್ಯಾಯ ಪುತ್ರಸ್ಯಾಭಿನವಸರ್ವಜ್ಞ ಸೋಮೇಶ್ವರಭಟ್ಟಸ್ಯ ಕೃತೀ॥ ಆದಿವರ್ಣನವ . . . ನ ನಾಗಣ ಬರೆದ ॥"

ಎಂದಿದೆ. ಇದರಿಂದ ಸಂಸ್ಕೃತ ಪದ್ಯಗಳನ್ನು ಆನೆಕೆರೆಯ ಜಾತವೇದ ಭಟ್ಟೋಪಾಧ್ಯಾಯರ ಮಗನಾದ ಅಭಿನವಸರ್ವಜ್ಞ ಬಿರುದಾಂಕಿತನಾದ ಸೋಮೇಶ್ವರ ಭಟ್ಟನು ರಚಿಸಿದಂತೆಯೂ ಕನ್ನಡ ಗದ್ಯಭಾಗವನ್ನು ನಾಗಣ ಬರೆದಂತೆಯೂ ತಿಳಿಯುತ್ತದೆ. ಗದ್ಯವಿಂತಿದೆ:

"ಶ್ರೀವಜ್ರೇಶ್ವರದೇವರ ಶ್ರೀನರಸಿಂಹದೇವರ ಸನ್ನಿಧಾನದೊಳು ಕಟ್ಟು ಗುತ್ತಗೆ ಪಿಂಡಾದಾನ ಸರ್ಬಬಾಧೆ ಪರಿಹಾರವಾಗಿ ಗ ೫೦೦ ಪ್ರತಿ ಸಂವತ್ಸರ ತೆತ್ತು ವಿಪುಳದ . ಮೂಲ್ಯಂತಾಗಿ ಧಾರಾಪೂರ್ವಕಂ ಮಾಡಿಕೊಟ್ಟರು. ಇಂತೀ ದತ್ತಿಯನು ಆವನಾನೊಬ್ಬನು ಲೋಭದಿ ಮೋಹದಿಂದಂ ಕೆಡಸಿದನಾದಡೆ 'ಸ್ವದತ್ತಂ . . . ಕ್ರಿಮಿಃ' ಎಂಬ ನರಕವನೆಯ್ದುವರು; ಅಂತಲ್ಲದೆ ರಕ್ಷಿಸಿದಡೆ 'ದಾನಂ ವಾ . . . ದಚ್ಯುತಂ ಪದಂ' ಎಂದು ಉತ್ತಮ ಪದವಿಯನೆಯ್ದುವರು."

---

1 Ec. V-2, ಚೆನ್ನರಾಯಪಟ್ಟಣ ೨೧೧.

ಮಾದರಿಗೊಂದು ಸಂಸ್ಕೃತ ಪದ್ಯ :

ತತಃ ಪುನಃ

ಆಸೀದ್ಬಲ್ಲಾಳದೇವೇ ಪರಿಣತವಯಸಿ ಸ್ಥಾಪ್ಯರಾಜ್ಯೇ ನೃಸಿಂಹಂ
ಸ್ವೆಯಾರ್ತೇ ತಸ್ಯ ರಕ್ಷನ್ ಶಿರಸಿ ವಿನಿಹಿತಂ ಶಾಸನಂ ಸರ್ಬಮಾಪ್ಯ
ವೀರಶ್ರೀನಾರಸಿಂಹಸ್ಥಿರಪದಕಮಳಂ ಸಮ್ಯಗಾಶ್ರಿತ್ಯತಿಷ್ಠನ್
ಕಾಂಕ್ಷತ್ಯಾಸ್ಥೇ ಸುಕೀರ್ತಿಂ ದಶದಿಶಿ ವಿತತಾಂ ರಾಜ್ಯಲಕ್ಷ್ಮೀಂ
ಸಮಗ್ರಾಂ ||

# ೭೭. ಶಂಕರವಿಬುಧ

( ೧೧೪೧-೫೦ )

ಉತ್ತರಕನ್ನಡ ಜಿಲ್ಲೆಯ ಕೋಡಕಣಿ ಗ್ರಾಮದಲ್ಲಿ ಒಂದು ವೀರಗಲ್ಲಿದೆ. ಅದರಲ್ಲಿಯ ಉಲ್ಲೇಖದ ಮೇರೆಗೆ ಶಕವರುಷ ೧೦೭೨ ದುರ್ಮತಿ ·ಸಂವತ್ಸರದಲ್ಲಿ ಅದು ಹುಟ್ಟಿದೆ. ಈ ದುರ್ಮತಿ ಸಂವತ್ಸರವು ಶ. ವ. ೧೦೬೩ ರಲ್ಲಿಯೇ ಸಂದುಹೋಗಿರುವುದರಿಂದ ಸಂವತ್ಸರದ ಪ್ರಕಾರ ಇದರ ಕಾಲ ಕ್ರಿ. ವ. ೧೧೪೧ ಆಗುತ್ತದೆ; ಶಕವರುಷದ ಪ್ರಕಾರ ಕ್ರಿ. ವ. ೧೧೫೦ ಆಗುತ್ತದೆ ಇದರ ಕರ್ತೃ ಶಂಕರವಿಬುಧ. ಈತನು ತನ್ನನ್ನು 'ಸತ್ಕವೀಂದ್ರ' ಎಂದು ಹೊಗಳಿಕೊಂಡಿದ್ದಾನೆ. ಇವನು ಈ ವೀರ ಶಾಸನವನ್ನು ಕ್ರಿ. ವ. ೧೧೪೧ ರಲ್ಲಿಯೇ ( ಇದು ಸರಿಯಲ್ಲವಾದರೆ ಕ್ರಿ. ವ. ೧೧೫೦ರಲ್ಲಿ ) ರಚಿಸಿರಬೇಕು.

## ೬೭. ಮುಖ್ಯಪಂಡಿತ

( ೧೦೪೭ )

ಧಾರವಾಡ ಜಿಲ್ಲೆಯ ಶಿರಹಟ್ಟಿ ತಾಲೂಕಿನ ಲಕ್ಷ್ಮೇಶ್ವರದಲ್ಲಿರುವ ಚಾಳುಕ್ಯ ೨ನೆಯ ಜಗದೇಕಮಲ್ಲನ ಕಾಲದ ಒಂದು ಶಾಸನದ ಕರ್ತೃವೀತ. ಈ ಶಾಸನ ಹುಟ್ಟಿದುದು ಕ್ರಿ. ಶ. ೧೦೪೭ರಲ್ಲಿ.[1] ಚಂಪೂಕಾವ್ಯ ರೂಪದ ಈ ಶಾಸನದ ಹಬ್ಬುಗೆ ಕಲ್ಬರಹದ ೬೫ ಸಾಲುಗಳು. ೩೧ ಕನ್ನಡ ಪದ್ಯಗಳು ಇದರಲ್ಲಿ ಅಳವಟ್ಟಿವೆ. ಪುಲಿಗೆರೆ ( ಲಕ್ಷ್ಮೇಶ್ವರ ) ನಾಡ ಹೆಗ್ಗಡೆಯಾಗಿದ್ದ ಮೇಚರಸನು ಶ್ರೀ ಸೋಮನಾಥದೇವರ ಸ್ಥಾನಾಚಾರ್ಯರಾಗಿದ್ದ ಜ್ಞಾನ ಸೋಮಪಂಡಿತದೇವರಿಗೆ ನೂರುಮತ್ತರ ಭೂಮಿಯನ್ನು ದತ್ತಿಯಾಗಿ ಬಿಡಿಸಿಕೊಟ್ಟಂತೆ ಇದರಲ್ಲಿ ಹೇಳಿದೆ. ಶಾಸನವು ಸಾಹಿತ್ಯಕದೃಷ್ಟಿಯಿಂದ, ಕಾವ್ಯಗುಣ ದೃಷ್ಟಿಯಿಂದ ಸುಂದರವಾಗಿದೆ. ಕವಿ ತನ್ನ ಹೆಸರನ್ನು, ಪ್ರಶಸ್ತಿ ತನಗೆ ಹೆಚ್ಚೂ ಬೇಡ, ಕಡಿಮೆಯೂ ಬೇಡ ಎಂಬಂತೆ, ಪದ್ಯದಲ್ಲಿ ಹೇಳಿದರೆ ಪಾದಪೂರಣಕ್ಕಾಗಿ ಪ್ರಶಂಸೆಯ ಮಾತು ಮತ್ತೊಂದೆರಡು ಬಂದಾವೆಂದೋ ಏನೋ, "ಶ್ರೀಮತ್ಕರ್ಣಾಟಸುಕವಿ ಮುಖ್ಯಪಂಡಿತರ ಕವಿತೆ" ಎಂದು ಮಾತ್ರ ತಿಳಿಸಿ ಶಾಸನವನ್ನು ಮುಗಿಸುತ್ತಾನೆ.

ಈ ಶಾಸನಕವಿ ತನ್ನ ಅಂಕಿತನಾಮವನ್ನು ಹೇಳಿಕೊಂಡಿಲ್ಲ. ವೃತ್ತಿ ಮೂಲಕವಾದ ರೂಢ(ಅಡ್ಡ)ನಾಮದಿಂದಲೇ ತನ್ನ ಪರಿಚಯ ಮಾಡಿಕೊಟ್ಟಿದ್ದಾನೆ. ಇದರಿಂದ ಕವಿ ಆಪುರ ಅಥವಾ ಅದರ ಹತ್ತಿರದ ಯಾವುದೋ ದೂರ ಪಾಠಶಾಲೆಯಲ್ಲಿ ಉಪಾಧ್ಯಾಯನಾಗಿದ್ದನೆಂದು ತೋರುತ್ತದೆ; ಬಹುಶಃ ಮುಖ್ಯಪಂಡಿತನೇ ಆಗಿದ್ದಿರಬೇಕು. ಅವನು ಹೇಳಿಕೊಂಡಿರುವಂತೆ 'ಕರ್ಣಾಟ ಸುಕವಿ' ಎಂಬ ಬಿರುದಿತ್ತೆಂದು ತೋರುವುದು. ಈತನನ್ನು ಪಂಡಿತ ( ಅಥವಾ ಮುಖ್ಯಪಂಡಿತ ) ಎಂದು ಕರೆಯುವುದೇ ಜನಗಳಲ್ಲಿ ರೂಢವಾಗಿರಬಹುದು.

ಈ ಶಾಸನದೊಳಗಿನ ಕೆಲವು ಪದ್ಯಗಳು ಮತ್ತು ಒಂದು ಗದ್ಯ :

ಕಂ. ಅಹಿಪೋರಗಸ್ವರದ ತಾಪಮಡಂಗಿತು ನಾಗರಾಜನು-
ತ್ತಮಮಣಿಮಸ್ತಕಕ್ಕೆ ನೋಟ ಹಿಂಗಿದುದಾದಿಗಿಭಕ್ಕೆ ಕಂಠಭಾ-

1 Epi. Ind. Vol. XVI, Page 46.

ರಮದುಡುಗಿತ್ತಿನಲ್ವಸುಮತೀತಳಮಂ ಜಗದೇಕಮಲ್ಲನ-
ಶ್ರಮದೊಳೆ ತಾಳ್ದಿದಂ ನಿಜಭುಜದ್ರಢಿಮಪ್ರಬಳಪ್ರದೇಶದೊಳ್ ||

*　　*　　*　　*

ಭರತಾವನಿಯೊಳು ಕುಂತಳ
ಧರಿತ್ರಿ ರಂಜಿಸುವುದಲ್ಲಿ ಪುರಿಕರದೇಶಂ
ಕರಮೊಪ್ಪುಗುಮಾ ವಿಷಯಾಂ-
ತರರಾಜಪ್ರಾಜಧಾನಿ ಪುರಿಕರನಗರಂ ||

*　　*　　*　　*

ಆ ಧರ್ಮಭೂಮಿ ನೂಱುಮತ್ತರ್ಕೆಯ್ಯ ಸೀಮೆಯೆಂತೆಂದಡೆ: ಈಶಾನ್ಯದ ಸೀಮೆ : ಇಟ್ಟಗೆಯ ಹಾಳಹೊಲದ ಬಡಗಣ ಹೊರೆಯ ಕಿನ್ನರಿಗಲ್ ; ಮೂಡಣ ಸೀಮೆ : ಇಟ್ಟಗೆವೊಲದ ನೀರ್ವರಿಯ ಹಳ್ಳಂ ಮೇರೆ; ಆಗ್ನೇಯದ ಸೀಮೆ : ಕಾಂತರಿಕೆಯ ಹಾಳ ಮೂಡಣ ಹಳ್ಳದಡಿಯ ಕಿನ್ನರಿಗಲ್ಲು ಮೇರೆ ; ನೈರೃತ್ಯದ ಸೀಮೆ : ಬೆನಕನ ಕೊಳದ ತೆಂಕಣ ಕಿನ್ನರಿಗಲ್ಲು ಮೇರೆ ; ವಾಯುವ್ಯದ ಸೀಮೆ : ಸಿಟ್ಟೂರ ಹೊಲದ ತೆಂಕಣ ಮೇರೆಯ ನಟ್ಟ ಕಿನ್ನರಿಗಲ್ಲು. ಇತಿ ಚತುಃಸೀಮಾಸಮಾಪ್ತಾ.

ಕಳಸದ ನೂಱು ಮತ್ತರೊಳಗುತ್ತಮಭೂಮಿಯನಿತ್ತನೀ ಯಶ-
ಸ್ತಿಳಕನೆನಿಪ್ಪ ಮೇಚಣಚಮೂಪತಿ ನಂದಿಯ ಬಾವಿಗಾಱು ನಿ-
ರ್ಮಳಗುಣಯುಕ್ತೆ ಗೌರಲೆಯ ಬಾವಿಗೆ ಮತ್ತರದಾಱಿನಲ್ಕೆ ಭೂ-
ತಳನುತನಂತು ಪನ್ನೆರಡು ಮತ್ತರುಮಂ ಶಿವಪಾದಶೇಖರಂ ||

# ೨೮. ಕಲಿದೇವಪಂಡಿತ

( ೧೧೪೮ )

ಬೆಳಗಾವಿ ಜಿಲ್ಲೆಯ ಸವದತ್ತಿ ತಾಲೂಕಿನ ಸಿರಸಂಗಿ ಎಂಬೂರೊಳಗೆ ಚಾಳುಕ್ಯ ಎರಡನೆಯ ಜಗದೇಕಮಲ್ಲನಾಳಿಕೆಯ ಕಾಲದ ಶಾಸನವೊಂದುಂಟು. ೧೧೪೮ ನೆಯ ಕ್ರಿಸ್ತಾಬ್ದದಲ್ಲಿ ಅದರ ಜನನವಾಗಿದೆ.[1] ಇದನ್ನು ರಚಿಸಿದವನು ಕಲಿದೇವಪಂಡಿತನೆಂಬ ಕವಿ. ತಾನು ಭುವನಚಂದ್ರಸಿದ್ಧಾಂತದೇವನ ಶಿಷ್ಯನೆಂದು ಹೇಳಿಕೊಂಡು ಗುರುವನ್ನು ನೆನೆದಿದ್ದಾನಲ್ಲದೆ ಕವಿ ತನ್ನ ಕುರಿತು ಹೆಚ್ಚಾಗಿ ಹೇಳಿಕೊಂಡಿರುವುದಿಲ್ಲ.

" ಶ್ರೀಮದ್ಭುವನಚಂದ್ರಸಿದ್ಧಾಂತದೇವರ ಗುಡ್ಡಂ ಕಲಿದೇವ ಪಂಡಿತರು ಪೇಳ್ದರು. ಧರೆಯ ರೂವಾರಿಚಕ್ರವರ್ತಿ ಸುಮತೋಜರ ಕಂಡರಣೆ. " ಎಂದು ಶಾಸನದ ಕೊನೆಯಲ್ಲಿದೆ. ಕಂಡರಣೆಕಾರನನ್ನು ಬಹುವಚನದಲ್ಲಿ ಉಲ್ಲೇಖಿಸಿರುವಲ್ಲಿ ವಿದ್ಯಾಗೌರವದೃಷ್ಟಿ ಕಂಡುಬರುತ್ತದೆ.

೫೫ ಪಙ್ತಿಗಳಲ್ಲಿ ಹಬ್ಬಿರುವ ಈ ಶಾಸನಕಾವ್ಯದಲ್ಲಿ ರಿಸಿಶೃಂಗಪುರದ ಅಥವಾ ಸಿರಿಸಿಂಗಿ ( ಸಿರಸಂಗಿ )ಯ ಆರುವರು ಗಾವುಂಡಗಳ ಮನೆತನದವರು ಗ್ರಾಮೇಶ್ವರದೇವರಿಗೂ ಊರ ಕೆರೆಗೂ ದತ್ತಿಗಳನ್ನು ಬಿಟ್ಟ ವಿಷಯ ಹೇಳಿದೆ. ಆ ಆರು ಮನೆತನಗಳ ( ತೊರಹರ, ಆರಿಂದರ, ಮುರಿಯರ, ಸಾಗುಳರ ಮತ್ತು ಇನ್ನೆರಡು ಕುಳಗಳ ) ವ್ಯಕ್ತಿಗಳ ಹಿರಿಮೆಯ ವರ್ಣನೆ ಇಲ್ಲಿ ಮುಖ್ಯವಾಗಿ ಸಮಾವೇಶಗೊಂಡಿದೆ. ಕಾವ್ಯರಚನೆ ಮನೋಹರವಾಗಿದೆ. ಇದರೊಳಗೆ ಊರ ವರ್ಣನೆಯಲ್ಲಿ ಒಂದು ಪದ್ಯ ಇಂತಿದೆ :

ಸುತ್ತಿದ ಬೆಟ್ಟದಿಂದೆಸೆವ ನಂದನದಿಂ ಪಲವುಂ ತಟಾಕದಿ-
ಮುತ್ತಮಮಪ್ಪ ದೇವಗೃಹಸಂಕುಳದಿಂ ವರದಿವ್ಯತೀರ್ಥದಿಂ
ವೃತ್ತಪಯೋಧರಾಂಗನೆಯರಿಂ ಸುಕವೀಶ್ವರತಂಡದಿಂದೆ ಲೋ-
ಕೋತ್ತರಮಾಯ್ತು ಬೆಳ್ವಲದೊಳೀ ರಿಸಿಶೃಂಗಪುರಂ ಮನೋಹರಂ ||

---

1 Kar. Ins. Vol. I.

ಇಲ್ಲಿ 'ತಂಡ' ಎಂಬ ಪದಪ್ರಯೋಗದಿಂದ, ಸಿರಸಂಗಿಯಲ್ಲಿ ಆ ಕಾಲದಲ್ಲಿ ತಾನಲ್ಲದೆ ಕಡಿಮೆಯೆಂದರೆ ಮೂವರು ಅಥವಾ ಹೆಚ್ಚಿಗೆ ಜನರು ಒಳ್ಳೆಯ ಕವಿಗಳಿದ್ದರು ಎಂದು ಕವಿ ಧ್ವನಿತಗೊಳಿಸಿದ್ದಾನೆ. ತನಗೊಂದು ಪ್ರಶಸ್ತಿಯನ್ನು ಜೋಡಿಸಿಕೊಳ್ಳದಿದ್ದರೂ ಅವರನ್ನು (ಇಲ್ಲಲ್ಲದೆ ಇನ್ನೊಂದು ಪದ್ಯದಲ್ಲಿಯೂ) ಸುಕವೀಶ್ವರರೆಂದು ಗೌರವಿಸಿದ್ದಾನೆ. ಈ ಕವಿಗಳಿಗೆಲ್ಲ ಅರುವರು ಗೌಡರು ಪೋಷಕರಾಗಿದ್ದರು. ಈ ಶಾಸನದಿಂದೆತ್ತಿದ ಇನ್ನು ಕೆಲವು ಪದ್ಯಗಳು ;

ಕಿಱುಮುಱುಕನಾಗಿ ಸಿರಿ ಕಂ-
ದೆಱೆದಂತಿರೆ ಬಾಗಣಬ್ಬೆ ಗ್ರಾಮೇಶ್ವರಮಂ
ನೆಱೆ ಮಾಡಿಸಿದಳು ಗಿರಿಸುತೆ-
ಯೆಱೆಯಂಗಂ ಚೆಲ್ವನಪ್ಪ ಕಲ್ವೆಸದಿಂದಂ ||

ಪರಹಿತರೆಂದು ನೀತಿವಿದರೆಂದು ಗುಣೋರ್ಜಿತರೆಂದು ಸತ್ಕಳಾ-
ಪರಿಣತರೆಂದು ಸತ್ಯಪರರೆಂದು ದಯಾನ್ವಿತರೆಂದು ಸತ್ಕವೀ-
ಶ್ವರಜನಸೇವ್ಯರೆಂದು ಶರಣಾಗತರಕ್ಷಣದಕ್ಷರೆಂದು ಬಿ-
ತ್ತರಿಪುದು ಕೂರ್ಮೆಯಿಂದೆ ಪಿರಿಸಿಂಗಿಯ ಗೌಡುಗಳಂ ಜಗಜ್ಜನಂ ||

ಗಡಿಯಂಕಮಲ್ಲರೆನಿಪ್ಪರ್
ತೊಡರ್ದರ ಜವರೆನಿಪರಾಶ್ರಿತರ್ಬೇಡಿದಡಂ
ಕುಡುವರ್ತಿಗಂಡರೆನೆ ಪೆಸ-
ರ್ವಡೆದರ್ಪಿರಿಸಿಂಗಿಯಱುವರೊಳ್ಪಂ ಮೆಚ್ಚಿದರ್ ||

# ೭೯. ಸರ್ವಜ್ಞ ಪಟ್ಟವರ್ಧನ

(೧೧೪೭)

ನರುಗುಂಡದ ಕ್ರಿ. ಶ. ೧೧೪೭ರ ಶಾಸನವು[1] ಅರಸರ ಆಳಿಕೆ, ತಿಥಿ ಮಿತಿಗಳ ಹೊರತು ಉಳಿದೆಲ್ಲ ವಿವರಗಳನ್ನೂ ಪದ್ಯದಲ್ಲಿಯೇ ತಿಳಿಸುತ್ತದೆ. ವಿಸ್ತಾರವಾದ ವರ್ಣನೆಗಳೂ ಇವೆ. ೮೩ ಸಾಲುಗಳುಳ್ಳ ಈ ಪದ್ಯಮಯ ವಾದ ಈ ಶಾಸನದಲ್ಲಿ ಕೀರ್ತಿನಾರಾಯಣ ದೇವರಿಗೆ ಶಂಕರನಾರಾಯಣ ಎಂಬ ಸೋದರರು ಭೂಮಿಯನ್ನು ಬಿಟ್ಟಂತೆ ಹೇಳಿದೆ. ಕೊನೆಕೊನೆಯಲ್ಲಿ ಶಾಸನಕವಿಯನ್ನು ಹೆಸರಿಸುವ ಕಂದಪದ್ಯವಿದೆ :

ರಸದಿಂ ಶಬ್ದದಿನರ್ಥದಿ
ನೆಸೆದಿರೆ ಶಾಸನಕೆ ಕಾವ್ಯಮಂ ಸೇವ್ಯಮೆನಲ್
ಪೊಸದೇಸೆ ಪಸುರಿಸಲ್ ವಿರ
ಚಿಸಿದಂ ಸರ್ವಜ್ಞ ಪಟ್ಟವರ್ಧನ ವಿಬುಧ[ಂ*] ||

ಸರ್ವಜ್ಞನೆಂಬುದು ಕವಿಯ ಇಟ್ಟ ಹೆಸರೋ ವಿಶೇಷಣವೋ ತಿಳಿಯದು. ಪಟ್ಟವರ್ಧನ ಎಂಬುದು ಮಾತ್ರ ಮನೆತನದ ಹೆಸರಾಗಿದೆ. ಈತನು ಕಾವ್ಯಲಕ್ಷಣಯುಕ್ತವಾಗಿ ಶಾಸನವನ್ನು ರಚಿಸಿರುವಂತೆ ಹೇಳಿಕೊಂಡಿದ್ದಾನೆ.

ಅವನ ಕೆಲವು ಪದ್ಯಗಳು :

ಬೆಳೆವುದು ಮತ್ತಕೋಟಿಯು
ನಳುಂಬಮಾಗಲ್ಕೆ ಕೆಯ್ವೊಲಂ ಬಹುಧಾನ್ಯಾ
ವಳಿಯುಂ ಶ್ರೇಯಃಫಳಮಂ
ಬೆಳೆವುದು ತದ್ಗ್ರಾಮಪಾಳಕರ್ಗನವರತ[ಂ*]

1 K. I. (K. R. I.) Vol. V.

ಮೊರೆವ ಮದಾಳಿವೋಲು ಜಡಿವುನ್ಮದ ಕೋಕಿಳವೋಲು ಪಾಠಮಂ
ಪರಿವಡಿಗೆಯ್ವ ರಾಜಶುಕವೋಲು ಮನೋಹರಯಾನದಿಂದೆ ಸಂ-
ಚರಿಪ ಮರಾಳವೋಲು ನಲಿದಾಡುವ ಮತ್ತಮಯೂರವೋಲು ನೋ
ಳ್ಪರ ಮನಮಂ ಪಳಂಚಲೆಯುತೀ ನಱುಗುಂದವೆ ರಂಜಿಕುಂ ಕರಂ ||

ರಸವನ್ಮಾಕಂದ ಜಂಬೂ ಪನಸ ಕದಳ ಖ[ರ್ಜೂ*]²ರ ಜಂಬೀರ ನಾ
ರಸಮುದ್ಯನ್ನಾಳಿಕೇರ ಪ್ರಕರ ಫಳರಸಾಸ್ವಾದನಂ ತುಷ್ಟಿಯಂ ಪು-
ಟ್ಟಿಸೆ ಶಾಖಾಚ್ಛಾಯೆ ತಣ್ಪಂ ಕುಡೆ[ಸು*]ಮುದಮ[ನಾ*]² ಪದ್ಮಿನೀ
ಸೌರಭಂ ಪಿಂ-
ಗಿಸುಗುಂ ತದ್ಗ್ರಾಮದುದ್ಯಾನದೊಳಧಿಕಪಥಶ್ರಾಂತಿಯಂ

# ೨೦. ಮಧುಸೂದನದೇವ

( ೧೧೪೮ )

ಹರಿಹರದಲ್ಲಿರುವ ಒಂದು ದೊಡ್ಡ ( ಹರವು ೯ ಅಡಿ × ೩ ಅಡಿ ೮ ಅಂಗುಲ; ಪಙ್ಕ್ತಿ ೧೦೫ ) ಶಿಲಾಶಾಸನವನ್ನೂ[1] ಬಳ್ಳಾರಿ ಜಿಲ್ಲೆಯ ಹಡಗಲಿ ತಾಲೂಕಿನ ಕೊಟ್ಟಕಲ್ಲಿನಲ್ಲಿರುವ ೬೮ ಸಾಲುಗಳ ೨೮ ಪದ್ಯಗಳನ್ನುಳ್ಳ ಶಾಸನವನ್ನೂ[2] ಮಧುಸೂದನದೇವನು ರಚಿಸಿದ್ದಾನೆ. ಈತನು ವೀರಪಾಂಡ್ಯನ ಆಶ್ರಿತನಾಗಿದ್ದನು. ಈ ವಿಷಯವನ್ನು ತಿಳಿಸುವ ಈ ಕೆಳಗಣ ಪದ್ಯವು ಎರಡು ಶಾಸನಗಳಲ್ಲಿಯೂ ಬಂದಿದೆ. ಅದನ್ನು ಹರಿಹರಶಾಸನದ ಪಾಠದಂತೆ ಕೊಟ್ಟು ಕೊಟ್ಟಕಲ್ಲುಶಾಸನದ ಪಾಠಾಂತರಗಳನ್ನು ಅಡಿಯಲ್ಲಿ ಸೂಚಿಸಲಾಗಿದೆ.

ಶ್ರೀವೀರಪಾಂಡ್ಯದೇವ ಮ
ಹೀವಲ್ಲಭಮಹಿತಪಾದ ಪರಮಾರಾಧ್ಯರ್[3]
ಶ್ರೀವಿ[4]ಭವ[4]ಮಧುಸೂದನ
ದೇವರ್ವಿರಚಿಸಿದರೆಸೆಯೆ ಶಾಸನಕೃತಿಯಂ ||

ಎರಡೂ ಶಾಸನಗಳು ಒಂದೇ ವರುಷದವು. ಹರಿಹರದ ಶಾಸನವು ವೀರಪಾಂಡ್ಯನು ಸಮಸ್ತದಾನಗಳನ್ನು ನೆರವೇರಿಸಿ ಶ್ರೀಶಂಕರನಾರಾಯಣ ದೇವರಿಗೆ ಗುತ್ತಿವೂರನ್ನು ಬಿಟ್ಟಂತೆ ಹೇಳುತ್ತದೆ. ಕೊಟ್ಟಕಲ್ಲು ಶಾಸನವು ಜಗದೇಕಮಲ್ಲನಾಳಿಕೆಯನ್ನು ಉಲ್ಲೇಖಿಸಿ ಕೊಟ್ಟಗನೂರನ್ನು ಕೋಟಿಶಂಕರ ದೇವರಿಗೆ ಬಿಟ್ಟುದನ್ನು ಹೇಳುತ್ತದೆ. ಎರಡೂ ಶಾಸನಗಳ ಬರೆಹಗಾರನೂ ಒಬ್ಬನೇ–ವೀರಪಾಂಡ್ಯನ ಸಂಧಿವಿಗ್ರಹಿ ಶಂಕರದೇವ. ಎರಡೂ ಶಾಸನಗಳಿಂದ ಕೆಲವು ಪದ್ಯಗಳನ್ನು ಇಲ್ಲಿ ಎತ್ತಿಕೊಟ್ಟಿದೆ:

---

1. Ep. car. XI, ದಾವಣ ೪೧.
2. S. I. I. Vol. IX, Part I, No. 254.
3. ರ್ ಇಲ್ಲ.
4. ತರ.

## ಹರಿಹರ

ಮಕರಬ್ರಾತಾಭಿಘಾತೋಚ್ಚಳಿತಕಮಠಸಂಘಟ್ಟಸಂಸ್ಪರ್ಧಿಮೀನ
ಪ್ರಕರಪ್ರಕ್ಷೋಭಿತೋದ್ವೃತ್ತರಳತರ ತರಂಗೋತ್ಕರಂ ಕ್ಷಿಪ್ತಮುಕ್ತಾ
ನಿಕರಂ ಕಣ್ಗೆಯ್ದೆ ಚೆಲ್ವಂ ಪಡೆದುದವಿರಳೋತ್ತಾಳಕಲ್ಲೋಳಮಾಳಾ
ಧಿಕಸಂಘರ್ಷಪ್ರಜಾತಪ್ರಬಳಘನಘನಧ್ವಾನರೌದ್ರಂ ಸಮುದ್ರಂ ||

ಅದು ನಾನಾನಕ್ರ ಚಕ್ರಕ್ರಮ ಕರಿಮಕರೋಡ್ಡೀನಪಾಠೀನಪುಚ್ಛ
ಚ್ಛದ ವಾತಾಘಾತ-ಭೀತಾಚಳ ಚಳನ ಚಳತ್ತುಂಗರಂಗತ್ತರಂಗೌ
ಘದುರಂತಪ್ರಾಂತಮುಜ್ಜೃಂಭಿತಬಹಳತಡಿಜ್ಜಾಳಲೀಳಾವಿನೀಳಾಂ
ಬುದಬಿಂಬಾಡಂಬರಂ ಕಣ್ಗೆಸೆವುದು ಲಹರೀಲೋಳಬಾಳಪ್ರವಾಳಂ ||

ಎನಿಸಿದ ಚಾಳುಕ್ಯನೃಪಾ
ಳನನಚ್ಚಿನ ಕಟ್ಟಿದಲಗಿನಂತೆಸೆದಂ ಕೂ
ರ್ಪಿನ ಬಲ್ಪಿನ ತೇಜದ ಮಾಂ
ತನದೊಳ್ಪಿಂ ವೀರಪಾಂಡ್ಯದೇವನರೇಂದ್ರಂ ||

ಕರವಾಳಾಘಾತಶಾತಾಹಿತಕರವಿಲುಠದ್ದಂತಶತ್ಕಂಗಳಿಂ ತ-
ತ್ಪರಿಬರ್ಹೋದ್ದಾಮಹೇಮಾಭರಣಕಿರಣದಿಂ ತತ್ಪತಾಕಾಸ್ತ
ವರ್ಮಾಂ
ಬರಚಿತ್ರೋದ್ಯೋತದಿಂ ತದ್ರುಧಿರವಿಸರಕಾಸಾರಿಕಾಪೂರದಿಂ ಪಾಂ
ಡುರಿತಂ ಪೇಶಂಗಿ ಕರ್ಬುರಿತವರುಣಿತಂ ವೀರಪಾಂಡ್ಯಾಜಿರಂಗಂ ||

## ಕೊಟ್ಟಕಲ್ಲು

ಶ್ರೀಕಾಂತಾಂಭೋಜಗರ್ಭದ್ಯುಮಣಿ ಮಣಿಕಿರೀಟಾಂಶುಪುಷ್ಪಾಂಘ್ರಿ
ಪೀಠಂ
ಶ್ರೀಕಂಠಂ ನಾಕಸಿಂಧೂಚ್ಚಳದಮಳಲಸತ್ಫೇನಪುಂಭತ್ತಸೂನಂ
ಲೋಕೇಶಂ ವಿಕ್ರಮಾದಿತ್ಯರಸನಭಿಮತಾರ್ಥಂಗಳಂ ಮಾಳ್ಕೆನಿಚ್ಚಂ
ಭೂಕೃಷ್ಣಾಧ್ವಾತ್ಮಸೂರ್ಯೋದಕಪವನವಿಧುವ್ಯೋಮಗಾತ್ರಂ
ತ್ರಿಣೇತ್ರಂ ||

ಸ್ಥಿರತೇಜೋಜಾಳಮೆಂಟುಂ ದೆಸೆಗೆ ಪಸರಿಸಲ್ವೈರಿವೀರಾಂಧಕಾರಂ
ಪರೆದೋಡಲ್ಕಾನತಾಸ್ಯಾಂಬುರುಹವನವದಾನಂದಮಂ ತಾಳೆ ವಿದ್ವಿ
ಟ್ತರುಣೀನೇತ್ರೋತ್ಪಳಂಗಳ್ಕೊರಗೆ ನಿಜ ಚಮೂಚಕ್ರವಾಕೋ-
ತ್ಕರಂ ರಾ
ಗರಸಾಂಭೋರಾಶಿಯೊಳ್ನರ್ತಿಸೆ ಧರೆಗೆಸೆವಂ ವಿಕ್ರಮಾದಿತ್ಯದೇವಂ ||

# ೨೧. ಸೂರಿಲಿಯ ಮುಖ್ಯಪಂಡಿತ

( ೧೧೪೮ )

ಗದುಗು ತಾಲೂಕಿನ ಹೊಸೂರು ಎಂಬ ಗ್ರಾಮದಲ್ಲಿ ಶಿವಾಲಯದ ಗೋಡೆಯೊಳಗೆ ಕಟ್ಟಿರುವ ಒಂದು ಶಿಲಾಶಾಸನದ[1] ಕೊನೆಕೊನೆಯಲ್ಲಿ 'ಸೂರಿಲಿಯ ಮುಖ್ಯಪಂಡಿತರ ಕವಿತೆ' ಎಂದಿರುವುದನ್ನು ಕಾಣುತ್ತೇವೆ. ಇದು ಕ್ರಿ. ಶ. ೧೧೪೮ ರಲ್ಲಿ ಹುಟ್ಟಿದ ಶಾಸನ. ಇದನ್ನು ನೋಡಿದಾಗ ಇದಕ್ಕಿಂತ ಒಂದು ವರುಷ ತಾನೆ ಮೊದಲು (೧೧೪೭) ಹುಟ್ಟಿದ ಲಕ್ಷ್ಮೇಶ್ವರ ಶಾಸನದ 'ಶ್ರೀಮತ್ಕರ್ಣಾಟಸುಕವಿ ಮುಖ್ಯಪಂಡಿತರ ಕವಿತೆ' ಎಂದಿರುವುದು[2] ನೆನಪಾಗುತ್ತದೆ. ಈ ಎರಡೂ ಶಾಸನ ಸ್ಥಳಗಳ ಅನತಿದೂರತ್ವ, ಕವಿಗಳ ಹೆಸರುಗಳಲ್ಲಿಯ ಸಾಮ್ಯ, ರಚನೆಯ ಸಮಕಾಲೀನತ್ವ ಇವುಗಳನ್ನು ಲಕ್ಷಿಸಿದರೆ ಎರಡೂ ಶಾಸನಗಳು ಏಕ ಕರ್ತೃಕಗಳಾಗಿರಬಹುದೋ ಎಂದೆನಿಸುತ್ತವೆ. ಆದರೆ, ಲಕ್ಷ್ಮೇಶ್ವರ ಶಾಸನದಲ್ಲಿ ಕವಿ ಹೇಳಿಕೊಂಡಿರುವ 'ಶ್ರೀಮತ್ಕರ್ಣಾಟಸುಕವಿ' ಎಂಬ ಬಿರುದನ್ನು ಮರುವರುಷವೇ ಹೊಸೂರು ಶಾಸನದಲ್ಲಿ ಬಿಟ್ಟುಕೊಟ್ಟಿರುವುದು ಸಹಸಾ ಸಂಭವನೀಯವಲ್ಲ. ಅದಿಲ್ಲದೆ ತನ್ನ ಊರ ಹೆಸರನ್ನು ಮಾತ್ರ ಹೇಳುತ್ತಾನೆಂದರೆ ಇಬ್ಬರೂ ಭಿನ್ನವ್ಯಕ್ತಿಗಳಾಗಿರಬೇಕು. ಲಕ್ಷ್ಮೇಶ್ವರದವನು ಸೂರಿಲಿಯವನೆಂಬುದಕ್ಕಾಗಲಿ ಹೊಸೂರವನು 'ಕರ್ಣಾಟಸುಕವಿ' ಎಂಬುದಕ್ಕಾಗಲಿ ಆಯಾ ಶಾಸನಗಳಲ್ಲಿ ಸೂಚನೆ ದೊರೆಯುತ್ತಿಲ್ಲ.

ಹೊಳ್ಳಗಾವುಂಡನು ಮೂಲಸ್ಥಾನ ದೇವರಿಗೆ ಕೊಟ್ಟ ದಾನಗಳನ್ನು ಉಲ್ಲೇಖಿಸುವ ಹೊಸೂರು ಶಾಸನದ ಸೂರಿಲಿಯ ಮುಖ್ಯಪಂಡಿತನ ಕೆಲವು ಪದ್ಯಗಳನ್ನು ಇಲ್ಲಿ ಎತ್ತಿಕೊಟ್ಟಿದೆ :

---

1 B. K. I. IV, No. 30

2 'ಮುಖ್ಯಪಂಡಿತ'— ನೋಡಿರಿ.

ಪರವನಿತಾಕೇಕರ ಭೀ
ಕರ ಬಾಣಂ ನಡೆದ ಶೌಚಗುಣವಿದು ಲೋಕೋ
ತ್ತರವೀ ಹೊಲ್ಲ ಗವುಂಡನ
ದೊರೆಯಾರಿತರರ್ಪರಾಂಗನಾಪುತ್ರಕನೊಳ್ ||

ಕಾಂತದ ಮೊಗ್ಗರಂ ಹರಿಗೆಯೊಡ್ಡಣನೆತ್ತಿದ ವಾಜಿರಾಜಿ ಮಾ
ಱಾಂತಡೆ ಕಾಳ್ರಕ್ಕಸನಿವಂ ಜವನಂತವನೆಂದರಾತಿ ವಿ
ಭ್ರಾಂತಿಯುನೆಯ್ದೆ ಕೊಲ್ವ ಗೆಲುವದ್ಭುತವೀರನೊಳುಂ ಪರಾಂ ವಿ
ಕ್ರಾಂತ ಹೊಲ್ಲನೊಳ್ ರಿಪುಹೃದಿಸ್ಥಳಸೆಲ್ಲನೊಳಾಜಿಮಲ್ಲನೊಳ್ ||

ಬೆಡವಂ ತಾಪಸನಂದನಕ್ಕರಿಗನಾಲೇಖ್ಯಂ ನಟಂ ಗಾಯಕಂ
ನುಡಿಕಾಱಂ ಕವಿ…. ………..ಪೌರಾಣಿಕಂ ಪಂಡಿತಂ
……..ಯೆಂದಿಂತಿವರ್ಗನ್ನದಾನದೊದವಿಂ ಗಂಗೇಶ್ವರಾರ್ಯಂ ಜಸಂ
ಬಡೆದಂ ಪಾಶುಪತಪ್ರಸಿದ್ಧ ತಪಮೂಲಸ್ಥಾನ ಯೋಗಿಶ್ವರಂ ||

ಜಳಧಿವೃತಾವನೀವಧುಗೆ ಕುಂತಳದಂತೆ ವಿರಾಜಿಸಿತ್ತು ಕುಂ
ತಳವಿಷಯಂ ತದುವಣೆಯೊಳುಜ್ವಳ ಧರ್ಮನಿವಾಸಭೂಮಿ ಬೆ
ಳ್ವೊಲಮತಿಸೇವ್ಯಮಾ ಜನಪದಾನನದಂತೆವೊಲಿಂತು ನೋಳ್ಪಡಂ
ಸಲೆ ಮುಳುಗುಂದ ಹನ್ನೆರಡುಮೊಪ್ಪುಗುಮುತ್ತಮು
ಭೋಗಭೂಮಿವೋಲ್ ||

# ೭೨. ನಾಗರಾಶಿಪಂಡಿತ

( ೧೧೫೬ )

ಹಾಸನ ತಾಲೂಕಿನ ಚಿಕ್ಕಕಡಲೂರು ಗ್ರಾಮದಲ್ಲಿ ಗೋವಿಂದಪುರದ ಮಹಾಜನಗಳು ದಾನ ಕೊಟ್ಟುದನ್ನೂ ಶಿವಶಕ್ತಿಪಂಡಿತರ ಮೊಮ್ಮಗ ಹೊಲಜೀಯನು ಕಲಿದೇವ ದೇವಾಲಯುವನ್ನು ಕಟ್ಟಿಸಿದುದನ್ನೂ ಉಲ್ಲೇಖಿಸುವ ಶಕವರ್ಷ ೧೦೭೮ರ ಶಾಸನವೊಂದಿದೆ.* ೩' ೭''×೨' ೩'' ಅಳತೆಯ ಕಲ್ಲಿನಲ್ಲಿ ೩೪ ಸಾಲುಗಳಾಗಿ ಹಬ್ಬಿರುವ ಈ ಶಾಸನದ ಆರಂಭದಲ್ಲಿ ವಿಷ್ಣು-ವರ್ಧನನ ವಂಶವೃಕ್ಷವನ್ನು ಚುಟುಕಾಗಿ ತಿಳಿಸುವ ಎರಡು ವೃತ್ತಗಳು ಮಾತ್ರ ಇವೆ. ಉಳಿದುದು ಗದ್ಯ. ಕೊನೆಯಲ್ಲಿ ಈ ಶಾಸನವಂ ಬರೆದ ಮುದುಗೆಱೆ ನಾಗರಾಶಿಪಂಡಿತ ಎಂದು ಬರುತ್ತದೆ. ಪದ್ಯಗಳಿಂತಿವೆ:

ಮುರಹರನಾಭಿಪಂಕಜದೊಳುದ್ಭವಿಸಿರ್ದ ಪಿತಾಮಹಂಗೆ ಸ
ಚ್ಚರಿತ ಪವಿತ್ರನತ್ರಿಮುನಿ ಪುಟ್ಟಿದನಾಮುನಿರಾಜನಂದನಂ
ವರಗುಣಿ ಸೋಮನಾಥನ ಮಗಂ ಬುಧನಾತ್ಮಜಂ ಜಗೋ
ದ್ಧರನೆನಿಪಂ ಪುರೂರವನ ತತ್ಸುತನಾಯುವೆನಿಪ್ಪನೊಪ್ಪಿದಂ
ಆತನ ಮೊಮ್ಮಗಂ ನಹುಷನಾನಹುಷಂಗೆ ಯಯಾತಿ ಪುಟ್ಟಿದಂ
ಭೂತಳಸೇವ್ಯನಾತನ ಸುತಂ ಯದು ಯಾದವವಂಶಸಂಭವಂ
ನೀತಿವಿದಂ ನೆಗರ್ತೆಪಡೆದಂ ವಿನಯಾರ್ಕ [v-v] ನಂದ· ೦
ಖ್ಯಾತಿಯನಾಂತೆಱಿಂಗನೆಸೆವಾತ್ಮಜನೂರ್ಜಿತ ವಿಷ್ಣುಭೂಭುಜಂ ||

ಈ ಶಾಸನವು ತೀರ ಚಿಕ್ಕದಾಗಿದ್ದರೂ ಪದ್ಯಭೂಯಿಷ್ಠವಾಗಿರ-ದಿದ್ದರೂ ನಾಗರಾಶಿಪಂಡಿತನು ಕೇವಲ ಬರೆಹಗಾರನಲ್ಲ, ಶಾಸನವನ್ನು ರಚಿಸಿದವನೂ ಹೌದು ಎಂಬುದನ್ನು ಇದೇ ತಾಲೂಕಿನ ಮುದುಗೆರೆ-ಗ್ರಾಮದ ಶಕ ೧೦೭೭ ರ ಶಾಸನದ* ಸಂಗತಿಗಳು ಬಲಪಡಿಸುತ್ತವೆ.

---

* EC V-2, Hn. 85.
* EC V-2, Hn. 69

ಪೆರ್ಗಡೆ ಎೞೆಯಮಯ್ಯನು ಎೞಂಗೇಶ್ವರ ದೇವಾಲಯವನ್ನೆತ್ತಿಸಿ ದತ್ತಿಗಳನ್ನು ಕೊಟ್ಟುದನ್ನು ವಿವರಿಸುವ ಆ ಶಾಸನವು ಸಾಕಷ್ಟು ದೊಡ್ಡದೂ ಪದ್ಯಭೂಯಿಷ್ಠವೂ ಆಗಿದೆ. ಎೞೆಯಮಯ್ಯನ ವಂಶದ ಅಗ್ಗಳಿಕೆ ಅಲ್ಲಿ ಬಹು ವಿಸ್ತಾರವಾಗಿ ವರ್ಣಿತವಾಗಿದೆ. ಮುದುಗೆಱೆ ನಾಗರಾಶಿಪಂಡಿತನನ್ನು ಅಲ್ಲಿ ನಾವು ಕಾಣುತ್ತೇವೆ. ಸ್ಥಾನಪತಿಯಾಗಿದ್ದ ಲಾಕುಳಶೈವನಾದ ಆತನ ವ್ಯಕ್ತಿತ್ವವನ್ನು ನೋಡಿ :

ಅಲ್ಲಿಗೆ ಮುನಿಪತಿ ಕೀರ್ತಿ[ಯು]
ವಲ್ಲಿಯೆ ಮಿಸುಪಂತೆ ಧವಳತನು ಕೆಂಜಡೆ ಸುಲಿ
ಪಲ್ಲು ವರಮುದ್ರೆ ಲಾಕುಳ
ಸಲ್ಲಿಕ್ಷಣವೊಗೆದನಂದು ಮುದುಗೆಱೆಮುನಿಪ ||

ಆ ಮುನಿಪನೇ ಮುದುಗೆಱೆಯ "ಸ್ವಸ್ತಿ ಯಮನಿಯಮ........ ಸಕಲಶಾಸ್ತ್ರಯಂತ್ರತಂತ್ರಪ್ರವೀಣರುಂ ಪರಚಿತ್ತಜ್ಞಾನರುಂ............ ಅಪ್ಪ ಶ್ರೀಮತು ನಾಗರಾಶಿಪಂಡಿತರು;" ಅವರ ಪಾದಪ್ರಕ್ಷಾಳನಂಗೆಯ್ದು ದಾನಗಳನ್ನು ಕೊಡಲಾಗಿದೆ. ಈ ಮುನಿಪನೇ ಮುದುಗೆರೆ ಶಾಸನವನ್ನೂ ರಚಿಸಿರುವ ಸಂಭವ ಹೆಚ್ಚಾಗಿರುವುದರಿಂದ ಅದರ ಎರಡು ಪದ್ಯಗಳನ್ನು ಪರಿಕಿಸಬಹುದು:

ನುಡಿ ಕನಕಾದ್ರಿಯೊಳ್ಪುದುಮುಜಂ ಕಪದಕ್ಷರವಾರ್ಪು ಬೇರ್ಪುದಂ
ಕುಡುವ ಸುರದ್ರುಮಕ್ಕೆ ಪಡಿ ಮಾರ್ಪ ಪರಾರ್ಥತೆ ಪೇಚರಂಗೆ ನೂ
ರ್ಮಡಿ ಸತಿಭಕ್ತಿಮಾರುತಸುತಂಗೆ ಪದಿರ್ಮಡಿಯೆಂದೊಡಣ್ಣ ಪೆ
ಗ್ಗಡೆಯೆಱಗಂಗೆ ಪಾಸಟಿಯೆ ಮುತ್ತಿನ ಮಾನವರೀಧರಿತ್ರಿಯೊಳ್ ||

ಎಱಗಂ ಸತೀವಿಲಾಸ
ಕ್ಕೆಱಗಂ ಸತ್ಪುಣ್ಯವಲ್ಲದದಱಿಂ ಪಾಪ
ಕ್ಕೆಱಗನೆನೆ ಪೆಮ್ಮೆವಡೆದಿ
ರ್ದೆಱೆಯಮವೆರ್ಗಡೆಯ ಸರಿಯೆ ಮುತ್ತಿನ ಮನುಜರ್ ||

## ೭೩. ಬೀವಣ

(೧೧೫೭)

ಧಾರವಾಡ ಜಿಲ್ಲೆಯ ಅಣ್ಣಿಗೇರಿಯಲ್ಲಿರುವ ಕಳಚುರ್ಯ ಬಿಜ್ಜಳನ ಕಾಲದ [ಕ್ರಿ. ವ. ೧೧೫೭] ೫೫ ಸಾಲುಗಳ ಶಾಸನವು[1] ಬಹಳವಾಗಿ ಕೆಟ್ಟು ಹೋಗಿದೆ; ಒಂದು ಪದ್ಯವೂ ಇಡಿಯಾಗಿ ಸಿಕ್ಕುವುದಿಲ್ಲ. ಕೆಳಗೆ ಕೊಟ್ಟಿರುವ ಎರಡು ಕಂದ ಪದ್ಯಗಳು ಶಾಸನದ ಕೊನೆಯಲ್ಲಿವೆ. ಅದರಲ್ಲಿ ಮೊದಲನೆಯದರಲ್ಲಿ ಕಂಡುಬರುವ ಬೀವಣ [ಭೀಮಣ] ವಿಬುಧನು ಈ ಶಾಸನದ ಕವಿಯಾಗಿರಬೇಕೆಂದು ತೋರುತ್ತದೆ.

ಜನನುತ........ಸಾಸಿರ್ವರಿ
......ಕೈಕೊಂಡನಿಶಂ ಬೀವಣವಿಬುಧಂ
ಮನವೊಸೆದೆಡೆ.........
.... ... .... .... ... .... .... ಗಳ ||

ಭೂವಿನುತ [ಸವಣಬ*]ಲ್ಲರ
ದೇವಂ ಜಿನ್ಸೋಜನಾತನಾತ್ಮಜನಾಸ
ದ್ಭಾವದಿ ಕಣ್ಡರಿಸಿದನಾ
...........ಕೀರ್ತಿ ನಿರುಪಮಂ ರಾಜೋಜಂ||

---

1 BKI. Vol. II, Gen. No. 86.

# ೭೪. ಬಿಂದಯ್ಯ

( ೧೧೬೦ )

ಹಾಸನಜಿಲ್ಲೆಯ ನಾಗಮಂಗಲ ತಾಲೂಕಿನ ಕೊಪ್ಪದ ಗ್ರಾಮದಲ್ಲಿ ಗುಹೆಯ ಭಟ್ಟಾರಕನ ಪ್ರಶಸ್ತಿಶಾಸನವಿದೆ.[1] ಆದರಲ್ಲಿ ಮೂರು ಕಂದ ಪದ್ಯ-ಗಳಿವೆ; ಮೂರೂ ಗೊಹೆಯ 'ಭಟ್ಟಾರಕರನ್' ಎಂದು ಮುಗಿಯುತ್ತವೆ. ಕೆಳಗಡೆ 'ಏಳಚಾರ್ಯರ ಶಿಷ್ಯನಾದ ಬಿಂದಯ್ಯ ಬರೆದ' ಎಂದು ಹೇಳಿದೆ. ಚಟ್ಟದ ಕಲ್ಲ ನಟಸೇವ್ಯನ ಪ್ರಶಸ್ತಿಯ 'ಅಚಲನ್' ಕವಿಯೆಂದು ಸ್ಪಷ್ಟವಾಗಿ ತೋರಿಬರುವಂತೆ, ಈ ಪ್ರಶಸ್ತಿ ಶಾಸನವನ್ನು ಬರೆದ ಬಿಂದಯ್ಯನೂ ಕವಿಯಾಗಿರುವ ಸಂಭವ ಹೆಚ್ಚಾಗಿದೆ. ಆ ಪ್ರಶಸ್ತಿ ಪದ್ಯಗಳಿವು:

ತಳಮಳಗನಾಗಿ ಪುಲಿಗಳ
ಗಳಗರ್ಜನೆಗಾದಮಳ್ಕಿ ಗುಹೆಯಿಂದಮಣಂ
ತಳರದೆ ನೆಲಸಿಪ್ಪ ಮನೋ
ಬಳಮುರ್ಬಿಗಗುರ್ವು ಗೊಹೆಯ ಭಟ್ಟಾರಕರನ್ ||

ಪಕ್ಷೋಪವಾಸಿಗಳ್ವಾ
ಪಕ್ಷಯಕರ ಮೂರ್ತಿಗಳ್ಗ ಹಾವಾಸಿಗಳ
ತ್ಯಕ್ಷುಣ್ಣ ಚರಿತರಿವರೆಂ
ದೀಕ್ಷಿತಿ ಪೊಗಟ್ದಪುದು ಗೊಹೆಯ ಭಟ್ಟಾರಕರನ್ ||

ಪಡೆದುದು ನೊಟಂಬವಾಡಿಯು
ಮೊಡನೊಡನೀ ದಡಿಗವಾಡಿಯುಂ ಧರ್ಮಮನೋ
ಗಡಿಸದ ತಪದಿಂ ಭುವನಮ
ನಡಿಗೆಱಗಿಸಿ ನೆಗಟ್ದ ಗೊಹೆಯ ಭಟ್ಟಾರಕರನ್ ||

---

1. Ec. IV, ನಾಗ. 67.

## ೭೫. ದೇವಭದ್ರಮುನಿ

( ೧೧೬೧ )

ತುಮಕೂರು ಜಿಲ್ಲೆಯ ಚಿಕ್ಕನಾಯಕನಹಳ್ಳಿ ತಾಲೂಕಿಗೆ ಸೇರಿರುವ ಹೆಗ್ಗೆರೆ ಗ್ರಾಮದ ಶಾಸನವೊಂದನ್ನು[1] ಈ ದೇವಭದ್ರಮುನಿ ಬರೆದಿದ್ದಾನೆ. ಸಂಸ್ಕೃತ ಪಂಡಿತನಾಗಿದ್ದ ಈತನಿಗೆ . ಆ ಭಾಷೆಯಲ್ಲಿಯೂ ಕಾವ್ಯರಚನೆ ಮಾಡಬಲ್ಲ ಪರಿಣತಿಯಿತ್ತು. ಪ್ರಸ್ತುತ ಶಾಸನದಲ್ಲಿ, ಹೊಯ್ಸಳ ನರಸಿಂಹನ ಸಾಮಂತನಾದ, ಕರ್ನಾಟಕಾಮಿನೀಶಶಿವದನಮಣಿಮಯಮುಕುರನೆನಿಸಿದ್ದ ಬಿಟ್ಟಿದೇವನು ಕ್ರಿ. ವ. ೧೧೬೧ ರಲ್ಲಿ ಹೆಗ್ಗೆರೆಯ ಚೆನ್ನಪಾರ್ಶ್ವದೇವರ ಬಸದಿಗೆ 'ಸವಣುಗೆಜ್ಜೆ'ಯನ್ನು ಮಾಡಿಸಿ ಬಿಟ್ಟುದನ್ನು, ಇನ್ನಿತರರು ಭೂದಾನವಿತ್ತುದನ್ನು ಹೇಳಿದೆ.

ಕವಿ ತನ್ನ ಹೆಸರನ್ನು ಹೇಳಿಕೊಂಡಿರುವ ಶಾಸನದ ಕೊನೆಯ ಕಂದ ಪದ್ಯ ಇಂತಿದೆ:

ಉಚಿತಪದಾಳಂಕಾರಂ
ಪ್ರಚುರರಸಂ ನೆಗಳಲಿಂತು ಜಿನಶಾಸನಮಂ
ರಚಿಯಿಸಿದಂ ಹರಹಾಸ-
ದ್ರುಚಿರಯಶಂ ದೇವಭದ್ರಮುನಿಪೋತ್ತಂಸಂ ||

ಇಲ್ಲಿ ಕವಿ ತನ್ನೀ ಶಾಸನಕವಿತಾರಚನೆ ಉಚಿತವಾದ ಪದಗಳಿಂದಲೂ ಅಲಂಕಾರಗಳಿಂದಲೂ ಪ್ರಚುರವಾದ ರಸಗಳಿಂದಲೂ ಹೆಸರಾದುದೆಂದು ಹೇಳಿ ಹೆಮ್ಮೆಪಟ್ಟುಕೊಂಡಿರುವುದು ವೃಥಾ ಏನೂ ಅಲ್ಲವೆಂದು ಹೇಳಲಡ್ಡಿಯಿಲ್ಲ. ೭೭ ಸಾಲುಗಳನ್ನುಳ್ಳ ಈ ಶಾಸನದ ರುವ ಪದ್ಯಗಳ ಸಂಖ್ಯೆ ೧೯. ಅವುಗಳ ಪೈಕಿ ನಾಲ್ಕು ಕನ್ನಡ ಪದ್ಯಗಳನ್ನಾಯ್ದು ಇಲ್ಲಿ ಕೊಟ್ಟಿದೆ. ಕವಿ ಎಂದು ಕೊಂಡುದಕ್ಕೆ ನಿದರ್ಶನವಾಗಿ, ಒಳ್ಳೆಯ ಕವಿತ್ವದ ಪ್ರತಿಭೆ ಇವುಗಳಲ್ಲಿ ಹೊಮ್ಮಿರುವುದನ್ನು ಕಾಣಬಹುದು.

---

1 Epi. Car. Vol. XII, Page 218.

### ಹೊಯ್ಸಳ ಮಲೆರಾಜರಾಜ :

ಅರಪುರದೊಳ್ಧಗದ್ಧಗಿಲು ಧಂಧಗಿಲೆಂಬುದರಾತಿಭೂಮಿಪಾ-
ಳರ ಶಿರದೊಳ್ಗಿರಿಲ್ಗಿರಿ ಗರಿಲ್ಗಿರಿಲೆಂಬುದು ವೈರಿಭೂತಳೇ-
ಶರ ಕರುಳೊಳ್ಚಿಮಿಲ್ಚಿಮಿ ಚಿಮಿಲ್ಚಿಮಿಲೆಂಬುದು ಕೋಪವಹ್ನಿ ದು-
ರ್ಧರತರವೆಂದೊಡಳ್ಕುಱದೆ ಕಾದುವರಾರ್ಮಲೆರಾಜರಾಜನೊಳ್ ||

ಈ ಪದ್ಯ ಶ್ರವಣಬೆಳುಗೊಳದ ಕ್ರಿ. ಶ. ೧೧೨೩ ರ ಒಂದು ಶಾಸನದಲ್ಲಿಯೂ[1] ಬಂದಿದೆ. ಆ ಮತ್ತು ಈ ಪದ್ಯಗಳಲ್ಲಿ ಕಂಡುಬರುವ ಮುಖ್ಯವಾದ ವ್ಯತ್ಯಾಸವೆಂದರೆ, ಅಲ್ಲಿ ಪದ್ಯದ ಕೊನೆಗೆ 'ಎಱೆಯಂಗದೇವನ' ಎಂದಿದ್ದುದು ಇಲ್ಲಿ 'ಮಲೆರಾಜರಾಜನೊಳ್' ಎಂದಾಗಿರುವುದಿಷ್ಟೆ. ಎರಡೂ ಪದ್ಯಗಳ ನಾಯಕ ಒಬ್ಬನೇ— ವಿಷ್ಣುವರ್ಧನನ ತಂದೆ. 'ಉಚಿತಪದಾಳಂಕಾರಂ....' ಇತ್ಯಾದಿಯಾಗಿ ತನ್ನ ಶಾಸನ ಕಾವ್ಯದ ಹಿರಿಮೆಯನ್ನು ಹೇಳಿಕೊಂಡ ದೇವಭದ್ರಮುನಿ ಅದನ್ನೇಕೆ ಎತ್ತಿಕೊಂಡ ಎಂಬುದೊಂದು ಪ್ರಶ್ನೆ. ಈತನ ಅಭಿಮಾನ ಪ್ರಾಮಾಣಿಕವಾದುದೆಂದು, ಅಲ್ಲಿಂದಿಲ್ಲಿಂದ ಪದ್ಯಗಳನ್ನಾಯ್ದು ತನ್ನ ಶಾಸನವನ್ನು ಅಲಂಕರಿಸಿಕೊಂಡಿರಲಿಕ್ಕಿಲ್ಲವೆಂದು ತಿಳಿದರೆ—ಹೀಗೆ ತಿಳಿಯುವುದು ಕೇವಲ ಸಹಾನುಭೂತಿ ಎಂದೆನಿಸದಿದ್ದರೆ—ಆ ಶ್ರವಣಬೆಳುಗೊಳದ ಶಾಸನವೂ ದೇವಭದ್ರಮುನಿಯದೇ ಆಗಿದ್ದು ತನ್ನ ಪದ್ಯವನ್ನೇ— ಅದು ಸುಂದರವಾಗಿರುವುದರಿಂದ— ಈ ಪೆಗ್ಗೆರೆಯ ಶಾಸನದಲ್ಲಿಯೂ ಸೇರಿಸಿಕೊಂಡಿರುವುದು ಸ್ವಾಭಾವಿಕವೆಂದು ತೋರುತ್ತದೆ.

### ಸಾಮಂತ ಬಿಟ್ಟಿದೇವ :

ನಲಿದುಲಿದಟ್ಟಿ ಕೊಂಡು ಕವಿತಪ್ಪ ವಿರೋಧಿಬಲಕ್ಕೆ ಘಾತಿಯಿಂ
ನೆಲವೊಲಸೆನ್ನದಲ್ಲದಿದು ಪೆರ್ಬಲವೆನ್ನದೆ ದೋಃಪ್ರತಾಪದಿಂ
ಗಿಲಿಗಿಲಿಗಂಬವಾಡಿಸುವನಾಹವದೊಳ್ಕಲಿ ಬಿಟ್ಟಿದೇವನಿ-
ನ್ನಿಲೆ ಗಳವಂಗೆ ಸಂಗರದೊಳಾಂಪನೆ ಗಾಂಪನವಾರ್ಯವೀರ್ಯನೊಳ್ ||

---

1. ಶ್ರವಣಬೆಳ್ಗೊಳದ ಶಾಸನಗಳು (Epi. Car.) ಪು. 58.

ಬಾಳಂ ತೂಗದಿರುಳ್ಳದಂ ಕವರ್ದುಕೊಳ್ಳುದ್ವಲ್ಲಭರ್ನಿನ್ನ ಕೀ-
ಳಾಳೋಳಿಂಗೆಸೆಯಲ್ಲರೇಕೆ ಮುನಿವೈ ನೀಕಾರಣಂ ಬೇಡ ನಿ-
ನ್ನಾಳೋಪಕ್ಕೆ ದೆಗೆಟ್ಟರೆಂದು ನುಡಿಗುಂ ತದ್ವೈರಿಕಾಂತಾಜನಂ
ಹೇಳೇನೆಂಬುದೊ ಬಿಟ್ಟಿದೇವನಲಘುದೋರ್ವಿಕ್ರಮಕ್ರೀಡೆಯಂ ||

**ಸಾಮಂತ ಚಟ್ಟನ ಸತಿ :**

ಸ್ಥಿರ[1] ಗಂಭೀರ ಉದಾತ್ತ ಸದ್ಗುಣಸದಾಚಾರತ್ವಮೆಂಬಿಗುಣೋ-
ನ್ನತಿಯುಂ ತಾಳ್ದಿ ಮಹೇಶ್ವರಾಗಮ ಜಿನಶ್ರೀಧರ್ಮ ಸದ್ವೈಷ್ಣವಾ
ಶ್ರಿತ ಬೌದ್ಧಾಗಮಮೆಂಬ ನಾಲ್ಕು ಸಮಯವ್ಯಾಪಾರಮಂ ಮಾಳ್ಪ ಸಂ-
ಗತಚಾತುರ್ಯೆಗೆ ಕಾಂತೆ ಶಾಂತಲೆಗೆ ಪೇಳಾರುಂ ಸಮಂ ಬಪ್ಪರೆ ||

**ಸಂಸ್ಕೃತಕವಿತ್ವಕ್ಕೆ ಉದಾಹರಣೆ :**

ಹೆಗ್ಗೆರೆ ಶಾಸನದಲ್ಲಿಯ ೧೯ ಪದ್ಯಗಳೊಳಗೆ ಎರಡೇ ಎರಡು ಪದ್ಯಗಳನ್ನು—ತಾನು ಉಭಯ ಭಾಷಾಕವಿಯೆಂಬುದನ್ನು, ಸಂಸ್ಕೃತದಲ್ಲಿಯೂ ಕವಿತಾರಚನಸಮರ್ಥನೆಂಬುದನ್ನು ತೋರುವ ಮಟ್ಟಿಗೆ ಮಾತ್ರ— ಸಂಸ್ಕೃತದಲ್ಲಿ ರಚಿಸಿದ್ದಾನೆ. ಅವುಗಳಲ್ಲಿಯ ಅಪ್ರತಿಮ ಕಲ್ಪನಾವಿನ್ಯಾಸದ ಶಾರ್ದೂಲ ವಿಕ್ರೀಡಿತನವನ್ನು ನೋಡಿ :

ನೋ ತೀಬ್ರೋ ಬಡಬಾನಳೋ ಜಳನಿಧೇರಪ್ಯಾಪಿ ಸಪ್ಪಾವತೋ
ಭಗ್ನಾಭೀಳಲಲಾಟಲೋಚನಬೃಹದ್ಭಾನುರ್ಯತಃ ಶ್ರೂಯತೇ
ಕಾಮೋಽನಂಗ ಇತಿ ತ್ರಿಲೋಚನಗಳೇ ಸ್ವಸ್ಥಂ ಚ ಹಾಳಾಹಳಂ
ತಾನೇವಂ ದಹತಿ ಪ್ರತಾಪದಹನಸ್ತೇ ವಿಷ್ಣುಭೂಪಾಳಕ ||

ದೇವೋ ದೇವಸದೃಕ್ಷಭೋಗನಿಲಯಸ್ಸಂಪೂರ್ಣಲಕ್ಷ್ಮೀಧವೋ
ದೇವ ತ್ವದ್ದ್ವಿಪರಾಜರಾಜಿತಮಹೀಕಾಂತಾಪ್ರಿಯೋಽಸೌ ಬಭೌ
ದೇವಃ ಶತ್ರುಧರಾಪತಿಪ್ರಕರಕುಂಭಿಚ್ಛಾತಕಂಠೀರವೋ
ದೇವ ಶ್ರೀನರಸಿಂಹಭೂಪ ವಿಜಯಶ್ರೀಶ ಪ್ರಭೂತೋ ಭವ ||

---

1 ಇಲ್ಲಿ ಯಾರಿಂದ ಏನಿದ್ದುದು ಏನಾಗಿ ಪ್ರಾಸ ತಪ್ಪಿದೆಯೊ ತಿಳಿಯದು. 'ಸ್ಫುತ್ರ' ಎಂದಿದ್ದಿರಬಹುದೆಂದು ತಿಳಿದರೆ ಹೇಗೆ? 'ಸ್ಥಿತ' ಇರಬಹುದೊ ?

# ೨೬. ನಾಗಾರ್ಜುನ

( ೧೧೬೧ )

ನಾಗಾರ್ಜುನನು ಕಳಚುರಿ ಬಿಜ್ಜಳನ ಕಾಲದವನು. ಕ್ರಿ.ಶ. ೧೧೬೧ ರಲ್ಲಿ ಈತನಿಂದ ವಿರಚಿತವಾದ ಶಾಸನವೊಂದು ಲಕ್ಷ್ಮೇಶ್ವರದಲ್ಲಿದೆ.[1] ಶಾಸನದ ಆರಂಭದ ಭಾಗ ನಶಿಸಿದೆ. ೩೮ ಸಾಲುಗಳುಳ್ಳ ಇದರಲ್ಲಿ ೧೫-೧೬ ಪದ್ಯಗಳಿದ್ದಂತೆ ತೋರುತ್ತದೆ. ಇಂದ್ರೇಶ್ವರದೇವರಿಗೆ ಕೊಟ್ಟ ದಾನಗಳನ್ನು ತಿಳಿಸುವ ಈ ಶಾಸನದ ಕೊನೆಯಲ್ಲಿ 'ನಾಗಾರ್ಜುನ ಕವಿತ್ವಂ' ಎಂಬುದಾಗಿ ಕವಿಯ ನಾಮನಿರ್ದೇಶವಿದೆ. ಈತನ ಕೆಲವು ಪದ್ಯಗಳಿವು:

ಮಸಕಂಗೊಂಡೋಪನಾವಂ ಜಗದೊಳೆಸಿತು [ಮಂ] ಗುರ್ಜರೋರ್ವೀಶನಂ ತ
ರ್ಜಿಸಿದಂ ಕಾಳಿಂಗನಂ ಭಂಗಿಸಿದನತಿಬಳೋದ್ವೃತ್ತನಪ್ಪಂಧ್ರನಂ ಬಂ
ಧಿಸಿದಂ ಪಾಂಡ್ಯೇ[ಶನಂ] ಖಂಡಿಸಿದನಟಸಿಂ ಚೋಳಭೂಪಾಳನಂ ರೂ
ಳಿಸಿದಂ ಸಾಮಾನ್ಯನೇ ಬಿಜ್ಜಳನೃಪತಿಲಕಂ ಶೌರ್ಯಕಂಠೀರವೇಂದ್ರಂ ||

ಕಳಚುರಿಯ ಕುಳಾಧಿಪ ರಾ
ಜ್ಯಲತೈಕಾಲಂಬರೆನಿಸಿ ರಾಜಾಧ್ಯಕ್ಷರ್
ಸಲೆ ನೆಗಳ್ದಿರ್ದ್ದ ಸಜ್ಜನ
ಕುಲಚೂಡಾಮಣಿಗಳರ್ಥಿಚಿಂತಾಮಣಿಗಳ್ ||

[ಗಣ][2] ಪದ ಪಯೋಜಭೃಂಗಂ
ಗಣಚರಣಸರೋಜವರರಜಸ್ಸಂಜನಿತಂ
ಗಣಪದಶೇಖರನನುಪಮ
ಗಣಪುತ್ರಂ ಭಾಯಿದೇವನೆಸೆದಂ ಧರೆಯೊಳ್ ||

---

1 BKI. vol. IV. No. 157.

2 ಇಲ್ಲಿಯ ನಷ್ಟವಾದ ಅಕ್ಷರಗಳನ್ನು ಶಾಸನಸಂಪಾದಕರು [ಶಿವ] ಎಂದೂ ಊಹಿಸಿಕೊಟ್ಟಿದ್ದಾರೆ.

## ೭೭. ಶಾಂತಿನಾಥ

( ೧೧೭೪ )

ಮೈಸೂರು ಜಿಲ್ಲೆಯ ನಾಗಮಂಗಲ ತಾಲೂಕಿನ ಲಾಲನಕೆರೆ ಗ್ರಾಮದಲ್ಲಿರುವ, ಮಹಾಪ್ರಧಾನ ಹೆಗ್ಗಡೆ ಕಂಟಿಮಯ್ಯ ಚೊಕ್ಕಣ್ಣ ಮೊದಲಾದವರು ಸೇರಿ ಮಧುಕೇಶ್ವರದೇವರ ಸೇವಾರ್ಥವಾಗಿ ದತ್ತಿಗಳನ್ನು ಬಿಟ್ಟ ವಿಷಯವನ್ನು ತಿಳಿಸುವ ಕ್ರಿ. ಶ. ೧೧೭೪ರ ಒಂದು ಶಾಸನವನ್ನು[1] ಶಾಂತಿನಾಥನೆಂಬವನು ರಚಿಸಿದಂತೆ

ದಕ್ಷಿಣ ಹೆಮ್ಮನ ಮಮ್ಮಂ
ಲಾಕ್ಷಣಕವಿ ಶಾಂತಿನಾಥ ಕವಿಕುಳತಿಳಕಂ
ದಾಕ್ಷಿಣ್ಯನಿಧಿ ಗುಣೋತ್ಕರ
ಶಿಕ್ಷಾಗುರು ಹೇಳ್ದನರ್ತಿಯಿಂ ಶಾಸನಮಂ ||

ಎಂಬ ಪದ್ಯದಿಂದ ತಿಳಿಯುತ್ತದೆ. ಲಾಕ್ಷಣಕವಿ ಎನಿಸಿದ ಈ ಶಾಂತಿನಾಥ ಕವಿ ದಕ್ಷಿಣ ಹೆಮ್ಮನ ಮೊಮ್ಮಗನು; ಒಬ್ಬ ಉಪಾಧ್ಯಾಯನು. ಇಲ್ಲಿಯ 'ದಕ್ಷಿಣ' ಎಂಬ ಪದಕ್ಕೆ 'ದಕ್ಷಿಣ ಭೂಮಿ'[2] ಎಂದೋ 'ತೆನ್ನಾಡು'[3] ಅರ್ಥವಿಸಬಹುದು. ಚಿತ್ರದುರ್ಗ ತಾಲೂಕಿನ ಗಂಜಿಗಟ್ಟೆಗ್ರಾಮದ ಶಾಸನವೊಂದರಲ್ಲಿ (೧೨೦೬) ಹೊನುಕುಂದ ಎಂಬ ಗ್ರಾಮವನ್ನು 'ಶ್ರೀಮದುತ್ತರಭೂಮಿ' ಯಲ್ಲಿ ಎಣಿಸಲಾಗಿದೆ. ಹಾಗೆ ಈ ಲಾಲನಕೆರೆಯ ಭಾಗವು 'ದಕ್ಷಿಣ ಭೂಮಿ' ಯಲ್ಲಿ ಇದ್ದಿರಬೇಕು. ಇನ್ನು ಹಾಸನ–ತುಮಕೂರು ಭಾಗದ ಕೆಲವು ಶಾಸನಗಳಲ್ಲಿ 'ತೆನ್ನಾಡು' ಎಂಬುದು ಕಂಡುಬರುತ್ತದೆ. ಈ ತೆಂಕಣನಾಡೂ ದಕ್ಷಿಣಭೂಮಿಯೂ ಏಕಾರ್ಥದ ಪ್ರಯೋಗಗಳೆಂಬುದು ನಿರ್ವಿವಾದ. ಅರ್ಥಾತ್, ಶಾಂತಿನಾಥಕವಿ ಹೊಯ್ಸಳ ರಾಜ್ಯದ ದಕ್ಷಿಣ

---

1 Ep. Car. IV, ನಾಗಮಂಗಲ 30.
2 Ep. Car. ಚಿತ್ರದುರ್ಗ 23.
3 ” ” ”

ಭಾಗದವನು,— ಲಾಲನ ಕೆರೆಯವನೋ ಅದರ ನೆರೆಹೊರೆಯ ಪ್ರದೇಶ-ದವನೋ— ಇರಬೇಕು.

ಇನ್ನು, ಅರಸಿಕೆರೆ ತಾಲೂಕಿನ ಕಣಕಟ್ಟೆ ಗ್ರಾಮದ ಒಂದು ಶಾಸನವು ಕವಿ ಶಾಂತಿನಾಥನ ಅಜ್ಜನ ಹೆಸರಿನ ಬಗ್ಗೆ ವಾದವನ್ನೆಬ್ಬಿಸುತ್ತದೆ. ಕವಿ ನಾಮನಿರ್ದೇಶನದ ಮೇಲಣ ಕಂದ ಪದ್ಯವು ಈ ಕಣಕಟ್ಟೆ ಶಾಸನ-ದ ಯೂ ಕೆಲವು ವ್ಯತ್ಯಾಸಗಳೊಡನೆ ಬಂದಿದೆ. ಅದು ಇಂತಿದೆ:

ದಕ್ಷಿಣ **ಸೋಮನ** ಮಮ್ಮಂ
ಲೊಕ್ಕಣ ಕವಿ ಶಾಂತಿನಾಥ ಕವಿಕುಳತಿಳಕಂ
ದಾಕ್ಷಿಣ್ಯನಿಧಿ **ಗುಣಾ**ಕರ
ಶಿಕ್ಷಾಗುರು ಪೇಳ್ದನರ್ತಿಯಿಂ ಶಾಸನಮಂ ||

ಈ ಪಾಠಾಂತರಗಳಿದ್ದರೂ ಶಾಸನಕವಿಗಳು ಅಭಿನ್ನರೆಂದೇ ತೋರುತ್ತದೆ. ಇಲ್ಲಿಯ ಪಾಠಭೇದಗಳು ಮೂಲ ಬರೆಹದಲ್ಲಿಯೇ ಉಂಟೋ ಓದಿಕೆಯಲ್ಲಿ ಉಂಟಾಗಿವೆಯೋ ಹೇಳುವುದು ಕಷ್ಟ. ಶಾಂತಿನಾಥನ ಅಜ್ಜನು ಹೆಮ್ಮನೋ ಸೋಮನೋ ಎಂಬುದನ್ನು ನಿರ್ಧರಿಸುವುದೂ ಈ ಸಂದಿಗ್ಧ ಪರಿಸ್ಥಿತಿಯಲ್ಲಿ ಬರಿ: ಏನಿದ್ದರೂ ಶಾಂತಿನಾಥನು ಕ್ರಿ. ವ. ೧೧೬೪ ರಲ್ಲಿ ಲಾಲನಕೆರೆಯ ಶಾಸನವನ್ನೂ ಮುಂದೆ ೪೩ ವರುಷಗಳ ತರುವಾಯ ಕಣಕಟ್ಟೆ ಶಾಸನ-ವನ್ನೂ ಬರೆದನೆಂದು ಹೇಳಬಹುದು. ಅಂತೂ ಇವನ ಜೀವಿತ ಕಾಲ ಸು. ಕ್ರಿ. ಶ. ೧೧೪೦ ರಿಂದ ೧೨೧೦.

ಈ ಶಾಸನದ ಕೆಲವು ಪದ್ಯಗಳು :

ದೋರಸಮುದ್ರದಲ್ಲಿ ಜಗದೇವನ ಸೇನೆಯನಿಕ್ಕಿ ತಮ್ಮ ತೋ
ಳ್ವೀರಸಮುದ್ರಮಾಗಿ ಜಯಲಕ್ಷ್ಮಿಗೆ ತದ್ಗಜಪತ್ರಗಕ್ತ ಕಾ
ಶ್ಮೀರವಿಲೇಪಮುಂ ನೆಱಪಿ ತತ್ಪ್ರದಕಂ ಬಿರಿಸಿಯ್ದು ಕೊಂಡು ಧಂ
ಡಾರಮನಾ ಸ್ವಪರ್ತಳಿದ ಬೀರಮನಾಯಿ ಗಭೀರನೆನ್ನದರ್ ||

ಇದಿರಾದರಿಭೂಪಾಳರ
ಮದದಾನೆಯ ಕೊಂಬನುಡಿದು ದಂತದ ಬಳೆಯಂ
ಬಿದುವಿನ ಮುತ್ತಿನಹಾರವ
ನೊದವಿಸಿ ಜಯಸಿರಿಗೆ ತೊಡಿಸುವಂ ನರಸಿಂಹಂ ‖

ದಿಗಧಿಪರಂ ಪಳಂಚಲಿವ ವಿಕ್ಕಮದೇಳ್ಗೆ ಸಗಂಗಳೇಳುಮಂ
ನೆಗಪಲೊಡರ್ಚುವುಜ್ಜುಗದ ತೋಳ್ವಲಿಮಾ ನೆಗಳ್ದರ್ಕಬಿಂಬಮಂ
ಸುಗಿಯಿಪ ತೀಬ್ರತೇಜಮಿವು ತನ್ನೊಳೆ ಸನ್ನುತಮಾದುವೆಂದೊಡಾ
ನೃಪನಹುಷಾದಿಗಳ್ದೊರೆಯೆ ಬಲ್ಲುನೃಪಾಳನ ವೀರದೇಳ್ಗೆಯೊಳ್ ‖

ಜವನೊಡನಾದೊಡಂ ಸೆಣಸಿ ಜತ್ತುಕುಱೌಡುವ ವೀರವೆಂದೊಡೀ
ಭುವನದೊಳಾಂತು ನಿಂದರಿನೃಪಾಳರ ನುಂಗುವ ಕಾಲಮೃತ್ಯುವಾ
ಹವದೆಡೆಗಾಗಳುಂ ಬಿಡದೆ ಬೀಸುವ ನಂಜಿನ ಗಾಳಿಯೆಂದೊಡೀ
ನ್ನಿವನ ಪೊಡರ್ಪನೇವೊಗಳ್ವುದೋ ಕಲಿಹೆಮ್ಮನ[4] ನಾಜಿಗುಮ್ಮನಂ ‖

---

4 ಈ ಹೆಮ್ಮನು ಶಾಸನದ ದಾಸಿಯಾದ ಕಂಟಿಮಯ್ಯನ ಅಳಿಯನು. ಈತನ ಮೊಮ್ಮಗನು ಇದೇ ಶಾಸನದ ಕವಿಯಾಗಿರುವುದು ಅಸಂಭವ.

# ೭೮. ಸುಕರಸುಕವಿಕಂಠಾಭರಣ

( ೧೧೬೭ )

ಶಿವಮೊಗ್ಗೆ ಜಿಲ್ಲೆಯ ಸೊರಬ ತಾಲೂಕಿನ ಉದ್ರಿ ಗ್ರಾಮದಲ್ಲಿರುವ ಒಂದು ಶಿಲಾಶಾಸನದಲ್ಲಿ* ಉದ್ದರೆಯ ಪ್ರಭು ಎಕ್ಕಲರಸನ ವರ್ಣನೆ ಬರುತ್ತದೆ. ಅಲ್ಲಿಯ ಅವನ ಪ್ರಶಸ್ತಿಯೊಳಗಿನ,

> 'ಸಮಧಿಗತ . . . . ವೈಷ್ಣವಾಗಮಾಚಾರನಿಯ ಮಾಸಕ್ತ
> ಧರಾಮರೋಪನಯನವೈವಾಹಪ್ರತಿಷ್ಠಾ ಪ್ರದಾನಧೌರೆಯ . . . . .
> ಸುಕರಸುಕವಿಕಂಠಾಭರಣಾದ್ಯನೇಕ ಕವಿಜನಪ್ರಿಯ . . . .

ಎಂಬ ಮಾತುಗಳಿಂದ ಸುಕರಸುಕವಿಕಂಠಾಭರಣನೆಂದು ಬಿರುದನ್ನು ಹೊಂದಿದ ಕವಿಗೆ ಎಕ್ಕಲನು ಆಶ್ರಯವಿತ್ತಿದ್ದನೆಂದು ಗೊತ್ತಾಗುತ್ತದೆ. ಆದ್ಯನೇಕ ಎಂಬ ಪದವು ಇನ್ನೂ ಒಬ್ಬಿಬ್ಬರು ಕವಿಗಳಿಗೆ ಅವನು ಪ್ರಿಯನಾಗಿದ್ದದೆಂದು ತೋರುತ್ತದೆ. ಈ ಒಂದು ಹೆಸರಿನ ಉಲ್ಲೇಖ ಮಾತ್ರವಿರುವುದರಿಂದ ಈ ಶಾಸನವನ್ನು ಸುಕರಸುಕವಿಕಂಠಾಭರಣನೇ ರಚಿಸಿರಬೇಕೆಂದು ಊಹಿಸಬಹುದಾಗಿದೆ.

೭'×೩೩' ಆಕಾರದ ಈ ಶಿಲಾಶಾಸನವು ೪೮ ಸಾಲುಗಳಿಗೇ ತಟ್ಟನೆ ನಿಂತು ಅಪೂರ್ಣವಾಗಿ ಉಳಿದಿದೆ. ಈ ಎಕ್ಕಲ ಭೂಪನ ವರ್ಣನೆ ಆ ಭಾಗದ ಹಲವು ಶಾಸನಗಳಲ್ಲಿ** ಬಂದಿರುವುದರಿಂದ ಅವನು ಕ್ರಿ. ಶ. ೧೧೬೭ ರಿಂದ ೧೨೧೮ರ ಅವಧಿಯಲ್ಲಿ ಜೀವಿಸಿದ್ದನೆಂದು ತಿಳಿದು ಬರುತ್ತದೆ.

ಉದರೆಯಧಿಪತಿ ಕೀರ್ತಿದೇವರಸರ ಮಗನಾದ ಮಾರಸಿಂಗ ದೇವನಿಗೆ ನನ್ನಲದೇವಿಯಲ್ಲಿ ಹುಟ್ಟಿದ ಎಕ್ಕಲದೇವನ ಶೌರ್ಯವಿಜೃಂಭಮೆಂತೆಂದೊಡೆ (ಪ್ರಸ್ತುತ ಶಾಸನದಲ್ಲಿಯ ಒಂದು ಪದ್ಯ)—

---

* Ep. Car. VIII, ಸೊರಬ 138.

** Ep. Car. VIII, ಸೊರಬ 135, 140, 177 ಇತ್ಯಾದಿ.

ಸಿಡಿಲಂ ಜೀಱ್ಱೀಳೆ ಪೊಯ್ವಂ ಬಿಡೆ ಬಿದಱಿಸುವಂ ಸಿಂಗಮುಂ ಕಾಳಸಂ ಕ
ಣ್ಡೆ ಬಾಹಾಗರ್ವದಿಂ ತರ್ಗಿಸುವನದಟನಿಂ ನೀಳ್ವಸಾ ಶೇಷನಂತಾಂ
ಹೆಡೆಯಿಂ ಬಾಲಂಬರಂ ಬಾಷ್ಪಮುಮ ಮುಳಿವರಾಗೆಲ್ದಪಂ ಬೀರುದವಾರ್
ಯ್ವಿಡೆ ವೀರಾಡಂಬರಂ ತ್ರೈಭುವನ ಚರಿತಮಾಗೆಕ್ಕಲ ಕ್ಷೋಣಿಪಾಳ ||

## ೭೯. ಮಧುಸೂದನಸೂರಿ

( ೧೧೬೯ )

ಬೆಳಗಾವಿ ಜಿಲ್ಲೆಯ ಖಾನಾಪುರ ತಾಲೂಕಿನ ಹಲಸಿ ಗ್ರಾಮದಲ್ಲಿ ಗೋವೆಯ ಕದಂಬ ಮನೆತನದ ಶಿವಚಿತ್ತ ಪೆರ್ಮಾಡಿಯ ಕಾಲದ (೧೧೬೯) ಒಂದು ಸಂಸ್ಕೃತ ಶಾಸನವಿದೆ[1]: ಸೀಮಾವವರಣೆ ಮಾತ್ರ ಕನ್ನಡದಲ್ಲಿ ಹೇಳಿದೆ. ಅದನ್ನು ರಚಿಸಿದವನು ಶಿವಚಿತ್ತನ ಧರ್ಮಾಧಿಕರಣನಾದ ಮಧುಸೂದನಸೂರಿಯೆಂದು

"ಧರ್ಮಾಧಿಕರಣೋದಗ್ರ ಮಧುಸೂದನ ಸೂರಿಣಾ
ಕೃತೆಯಂ ಶ್ಲೋಕರಚನಾ . . . ."

ಎಂಬ ಮಾತಿನಿಂದ ತಿಳಿಯುತ್ತದೆ. ಇಲ್ಲಿಗೆ ಈ ಕಲ್ಲಮೇಲಣ ಬರೆಹ ಅರ್ಧ ಮುಗಿಯುತ್ತದೆ.[2]

---

1 K. I. (KRI) Vol. V.

2 ದ್ವಿತೀಯಾರ್ಧಕ್ಕೆ 'ಯಜ್ಞೇಶ್ವರಸೂರಿ' ನೋಡಿರಿ.

# ೬೦. ಸಜ್ಜನತಿಲಕ

(೧೧೭೦)

ಈತನು ರಾಯಮುರಾರಿ ಸೋಮೇಶ್ವರನ ಆಳಿಕೆಯ ಸಮಯದಲ್ಲಿದ್ದ ಶಾಸನಕವಿ. ರಾಯಚೂರು ಜಿಲ್ಲೆಯ ಕುಕನೂರು ಗ್ರಾಮದಲ್ಲಿ ದೊರೆತಿರುವ ಒಂದು ಶಿಲಾಶಾಸನವನ್ನು ಇವನು ಬರೆದಿದ್ದಾನೆ. ಅದು ಕ್ರಿ. ಶ. ೧೧೭೦ ರಲ್ಲಿ ಹುಟ್ಟಿದುದು.[1] ಶಾಸನದ ಕೊನೆಯ ಪದ್ಯದಲ್ಲಿ ಕವಿ 'ಸಜ್ಜನತಿಲಕ' ಎಂಬ ತನ್ನ ಪ್ರಶಸ್ತಿಯನ್ನೋ ಅಥವಾ ಸುಚಾರಿತ್ರ್ಯವನ್ನು ಸೂಚಿಸುವ ವಿಶೇಷಣ ಮಾತ್ರವನ್ನೋ ಹೇಳಿದ್ದಾನಲ್ಲದೆ ಹೆಸರನ್ನು ಹೇಳಿಲ್ಲ. ಆದರೆ ತನ್ನ ಗೋತ್ರವನ್ನೂ ತಂದೆಯ ಹೆಸರನ್ನೂ ತಿಳಿಸಿದ್ದಾನೆ. ಗೋತ್ರ ಅಗಸ್ತ್ಯಗೋತ್ರ; ತಂದೆಯ ಹೆಸರು ಪರಮಾತ್ಮ. ಪರಮಾತ್ಮ ಎಂಬುದೇ ಹೆಸರಿತ್ತೋ, ಪರಮೇಶ್ವರ ಎಂಬುದರ ರೂಪಾಂತರವೋ ತಿಳಿಯದು. ಸಜ್ಜನತಿಲಕನ ಹೇಳಿಕೆಯಂತೆ, ಪರಮಾತ್ಮನೂ ಒಳ್ಳೆಯ ಕವಿಯಾಗಿದ್ದನೆಂದು ಗೊತ್ತಾಗುತ್ತದೆ. ಇದನ್ನೆಲ್ಲ ತಿಳಿಯಪಡಿಸುವ ಪದ್ಯವಿದು :

ಪಲಬರ್ಪೊಗಳಲಗಸ್ತ್ಯರ
ಕುಲತಿಲಕಂ ನೆಗಳ್ದ ಸುಕವಿ ಪರಮಾತ್ಮಸುತಂ
ನಲವಿಂ ಪೇಳ್ದಂ ಸಜ್ಜನ-
ತಿಲಕನೆನಲ್ ಮೆಚ್ಚುನಾವನೀ ಶಾಸನಮಂ ||

ಬೆಳ್ವೊಲ ನಾಡಧಿಕಾರಿ ದಂಡನಾಯಕ ತೇಜರಾಜನು ಕುಕ್ಕನೂರ ಸ್ವಯಂಭು ಪ್ರಸನ್ನ ಮಲ್ಲಿಕಾರ್ಜುನ ದೇವರಿಗೆ ಹಾಡಲಗೆರೆಯೆಂಬ ಊರನ್ನು ದಾನವಾಗಿ ಕೊಟ್ಟಂತೆ ಈ ಶಾಸನದಲ್ಲಿ ಹೇಳಿದೆ. ಇದರ ಕಲ್ಬರೆಹ ೭೮ ಸಾಲುಗಳುಳ್ಳದಾಗಿದ್ದು ೩೪ ಕನ್ನಡ ಪದ್ಯಗಳನ್ನೊಳ-

---

1 ಡಾ. ಪಿ.ಬಿ. ದೇಸಾಯಿಯವರ 'ಕೊಪ್ಪಳ ಜಿಲ್ಲೆಯ ಶಾಸನಗಳು' ಪು. 67.

ಗೊಂಡಿದೆ.  ಈ ಶಾಸನದಿಂದ ಕೆಲವೊಂದು ಪದ್ಯ-ಗದ್ಯಭಾಗಗಳನ್ನು ಇಲ್ಲಿ ಆಯ್ದುಕೊಟ್ಟಿದೆ :

ಇಂತೆನಿಸಿದ ಕರಣಂಗಳೊಡನೆ ಬರೆ, ಬೆಳ್ವಲ ನಾಡಧಿಕಾರಿ ಶ್ರೀಕರಣಂ ಬಾಹತ್ತರ ನಿಯೋಗಾಧಿಪತಿ ಮಹಾಪ್ರಚಂಡ ದಂಡನಾಯಕಂ ತೇಜರಾಜಂ ನಿಜಾಧಿಕಾರದ ಮಹಾಗ್ರಹಾರಂ ಕುಕ್ಕನೂರ್ಗೆ ಬಿಜಯಂಗೆಯ್ದು, ಶಕನೃಪ ಕಾಳಾತೀತಸಂವತ್ಸರ ಶತಂಗಳು ೧೦೯೦ ನೆಯ[1] ವಿಕೃತಸಂವತ್ಸರದ ಕಾರ್ತಿಕ ಶುದ್ಧ ೧೨ ಶುಕ್ರವಾರ ಪುಣ್ಯದಿನದೊಳು, ಆ ಕುಕ್ಕನೂರ ಶ್ರೀಸ್ವಯಂಭು ಮಲ್ಲಿಕಾರ್ಜುನದೇವರ್ಗೆ ಲಕ್ಷಗದ್ದುಕಾಪರಿಪೂರ್ಣಾನಂತರಂ ಗೋಕ್ಷೀರ ಸಹಸ್ರಗದ್ದುಕಾಪುರಸ್ಸರಂ ಮಹಾಪೂಜೆಯಂ ಮಾಡಿ ಸಮನಂತರಂ ಕರಣಾನುಕೂಲ್ಯದಿಂ ಮುನ್ನಮೆ ಕಳಚುರಿಚಕ್ರವರ್ತಿ ಭುಜಬಳಮಲ್ಲ ರಾಯಮುರಾರಿ ಶ್ರೀಸೋವಿದೇವರಸರ್ಗೆ ಬಿನ್ನಪಂಗೆಯ್ದು ಸಕಾರುಣ್ಯದಾನವಾಗೆ ಪಡೆದು,

ಜಲಧಿವೃತೋರ್ವರೆಯೊಳು ಬೆ-
ಳ್ವಲನಾಡೊಳು ಕುಕ್ಕನೂರು ಮೂವತ್ತಱೊಳೆ-
ತ್ತಲುವೊಪ್ಪುವ ಚೆಲ್ವಿಂ ಹಾ-
ಡಲಗೆಱೆ ಧನಧಾನ್ಯಜನಸಮೃದ್ಧಿಯೊಳೆಸೆಗುಂ ||

ಪ್ರಿಯದಿಂದಿಂತಿದನೆಯ್ದೆ ಕಾವ ಪುರುಷಂಗಾಯುಂ ಮಹಾಶ್ರೀಯುಮ-
ಕ್ಕೆಯಿದಂ ಕಾಯದೆ ಕಾಯ್ವ ಪಾಪಿಗೆ ಕುರುಕ್ಷೇತ್ರೋರ್ವಿಯೊಳ್ವಾರಣಾ-
ಸಿಯೊಳೇಳ್ಕೋಟಿ ಮುನೀಂದ್ರರಂ ಕವಿಲೆಯುಂ ವೇದಾಢ್ಯರಂ ಕೊಂದುದೊಂ-
ದಯಶಂ ಸಾರ್ಗುವಿದೆಂದು ಸಾರಿದಪುದೀ ಶೈಲಾಕ್ಷರಂ ಧಾತ್ರಿಯೊಳ್ ||[2]

ಈ ಸಜ್ಜನತಿಲಕನೂ ಗೋವಕವಿಯೂ ಸಿರಸಂಗಿ ಶಾಸನದ ಸಜ್ಜನತಿಲಕನೂ ಒಂದೆಯೋ ಏನೋ.  ಈ ವಿಷಯವನ್ನು ಆ ಇಬ್ಬರ ಪರಿಚಯದಲ್ಲಿ ಚರ್ಚಿಸಿದೆ.

---

1 ವಿಕೃತ ಸಂವತ್ಸರ ಶ. ವ. 1092 ರಲ್ಲಿ ಇದ್ದಿತಾಗಿ ಈ ಶಾಸನ ಹುಟ್ಟಿದ ಕ್ರಿ. ವ. 1170.

2 ಈ ಪದ್ಯ ಬಹಳ ಶಾಸನಗಳಲ್ಲಿ ಕಂಡುಬರುತ್ತದೆ.

# ೮೧. ಸೂರ್ಯಣ

( ೧೧೭೦ )

ಹಾಸನ ತಾಲೂಕಿನ ಜಕ್ಕೇನಹಳ್ಳಿ ಎಂಬ ಗ್ರಾಮದಲ್ಲಿ ಸಿಕ್ಕಿರುವ ಹೊಯ್ಸಳ ವಿಷ್ಣುವರ್ಧನನ ಕಾಲದ ಮಹಾಪ್ರಧಾನ ಹೆಗ್ಗಡೆ ಕಾಳಿಮಯ್ಯನು ಕಾಳೇಶ್ವರ ದೇವರನ್ನು ಪ್ರತಿಷ್ಠಿಸಿ, ಅದಕ್ಕೆ ದತ್ತಿಗಳನ್ನು ಬಿಟ್ಟನೆಂದು ತಿಳಿಸುವ ಒಂದು ಶಾಸನವುಂಟು.[1] ಅದರ ಕೊನೆಯಲ್ಲಿ ಈ ಗದ್ಯವಿದೆ :

"ಸೂರ್ಯಣಂ ಲೇಖಕಮದನಮಹೇಶ್ವರಂ ಬರವರಾಚಾರ್ಯಂ ಶಕ ವರ್ಷ ಸಾಸಿರದ ತೊಂಭತ್ತೆರಡನೆಯ ವಿಕೃತಸಂವತ್ಸರದ ಬರದ ಶಾಸನ ವಿದಾಚಂದ್ರಾರ್ಕತಾರಂ ನಿಲುಕ್ಕೆ. ಶಿವಾಯನಮಃ, ಗಣಪತಯೇ ನಮಃ."

ಇದರಲ್ಲಿ ಸೂರ್ಯಣನು ತನ್ನನ್ನು ಕವಿಯೆಂದಾಗಲಿ, ಕವಿತ್ವದ ಬಿರುದುಳ್ಳವನೆಂದಾಗಲಿ ಹೇಳಿಕೊಂಡಿರದಿದ್ದರೂ, ಪೇಳ್ದಂ ರಚಿಸಿದಂ ಎಂದು ಹೇಳದೆ ಬರದಂ ಎಂದು ಹೇಳಿದ್ದರೂ ಈ ಪರಿಯ ಅಗ್ಗಳಿಕೆಯ ಬರೆಹಗಾರನು ಸಾಹಿತ್ಯಿಕನಿರಬೇಕೆಂದು, ಅರ್ಥಾತ್ ಕವಿತಾಶಕ್ತಿಯುಳ್ಳವನಿರಬೇಕೆಂದು ಬಲವಾಗಿ ಎನಿಸುವಂತಿದೆ. ಈ ಒಕ್ಕಣಿಕೆಯು ಚೆಂದವೂ ಸೂರ್ಯಣ ವಾಙ್ಮಯಾಭಿಜ್ಞತೆಯನ್ನು ಸೂಚಿಸುತ್ತಿದೆ. ಅಲ್ಲದೆ, ೬೪ ಸಾಲುಗಳ ೩೧ ಪದ್ಯಗಳ— ರಾಜಾದಿಗಳ ಪ್ರಶಸ್ತಿ, ದತ್ತಿಗಳ ವಿವರಗಳ ಸ್ವಲ್ಪ ಭಾಗ ಹೊರತು ಮಿಕ್ಕೆಲ್ಲವೂ ಪದ್ಯರೂಪದಲ್ಲಿರುವ— ಶಾಸನ ಕಾವ್ಯಕ್ಕೆ ಕರ್ತೃ ತನ್ನ ಹೆಸರನ್ನು ಹೇಳದೆ, ಕೇವಲ ಪ್ರತಿ ಮಾಡಿದವನ ಹೆಸರನ್ನು ಮಹಾಬಿರುದು ಸಹಿತವಾಗಿ ಉಗ್ಗಡಿಸಿರುವನೆಂದು ಎಣಿಸುವುದು ಅಷ್ಟೊಂದು ಒಪ್ಪತಕ್ಕ ಮಾತಲ್ಲ. ಇನ್ನೊಂದು ಮಾತೆಂದರೆ, ಮೂವತ್ತೊಂದೆಲ್ಲಾ ಕನ್ನಡ ಪದ್ಯಗಳಲ್ಲ; ನಾಲ್ಕು ಸಂಸ್ಕೃತ ಪದ್ಯಗಳೂ ಇವೆ. ಪದ್ಯಗಳಲ್ಲಿ ಪದೌಚಿತ್ಯ, ಕಲ್ಪನಾವೈಲಾಸ್ಯ, ಪ್ರತಿಭಾವೈಶೇಷ್ಯ ಇತ್ಯಾದಿ

---

2 Epi. Car. (ಹಾಸನ ಜಿಲ್ಲೆಯ ಶಾಸನಗಳು) Vol. V.

ಕವಿತ್ವದ ಲಕ್ಷಣಗಳನ್ನೂ ನಾವು ಕಾಣುತ್ತೇವೆ. ಇಂತಹ ಈ ಶಾಸನದ ಕೊನೆಯಲ್ಲಿ ಹೇಳಿಕೊಂಡಿರುವುದು— ಸೂರ್ಯಣ ಎಂಬುದು— ಶಾಸನ ಕವಿಯ ಹೆಸರೇ ಸರಿ ಎಂದು ಎನಿಸುತ್ತದೆ. 'ಲಿಖಿತ' 'ಬರೆ' ಎಂಬ ಶಬ್ದಗಳನ್ನು ಪಾರಿಭಾಷಿಕವಾಗಿ ಬಳಸದೆ, 'ಕವಿ', 'ರಚಿಸು' ಎಂಬ ಪರ್ಯಾಯಾರ್ಥಕ್ಕೂ ಅನ್ವಯಿಸಿ, ಸಾಮಾನ್ಯಾರ್ಥದಲ್ಲಿ ಪ್ರಯೋಗಿಸಿದ್ದಾನೆ ಕವಿ ಎಂದು ನನ್ನ ಮತ. ಇದ್ದರೆ ಕವಿಯೇ ಬರೆಹಗಾರನೂ ಇರಬೇಕು.

ಈ ಶಾಸನದಿಂದ ಕೆಲವು ಪದ್ಯಗಳನ್ನು ಆಯ್ದು ಇಲ್ಲಿ ಕೊಟ್ಟಿದೆ:

## ಕನ್ನಡ

ಧನದಂ ದಕ್ಷಿಣವಾಯುವೇಕೆ ತಡೆದತ್ತೋ ತೀಡಿತಿಲ್ಲಿನ್ನುಮೆಂ-
ಬಿನೆಗಂ ವೈರಿಕರೋಟಿಕೋಟಿಮುಖನಾಸಾರಂಧ್ರದೊಳ್ರೌದ್ರನಿ-
ಸ್ವನಮುಣ್ಮಲ್ ಮಳಯಾನಿಳಂ ಸುಳಿದು ಕಾಲಕ್ಷೇಪಮಂ ವಿಷ್ಣುಭೂ-
ಪನ ಜೈತ್ರೋರ್ವರೆಯಲ್ಲಿ ಮಾಡುವುದು ಕಾವೇರೀನದೀತೀರದೊಳ್ ||

ಇನನೊರ್ವಂ ಪೋಜಿಗಾಗಿ ಪೇಳ್ ಪುದುವೆ ತೇಜಂ ಕ್ಷತ್ರಿಯಂಗರ್ಕನಂ-
ದನನೊರ್ವಂ ಪೋಜಗಾಗಿ ಪೇಳ್ ಪುದುವೆ ದಾನಂ ಭೂಭುಜಂಗಬ್ಜಗ-
ರ್ಭನುಮೊರ್ವಂ ಪೋಜಿಗಾಗಿ ಪೇಳ್ ಪುದುವೆ ಚಾತುರ್ಯಂ
ನೃಪಂಗೆಂದು ಮೆ-
ಚ್ಚಿಸಿವಂ ಮತ್ತಿನ ಭೂಪರಂ ನೃಪವರಂ ಶ್ರೀರೂಪನಾರಾಯಣಂ ||

ಜವನುಂ ತನ್ನಯ ಗಂಡುಲಚ್ಚಣಮೆನಿಪ್ಪಾ ಪೊಸೆಯುಂ ಕಿಡ್ದಲಂ-
ಜುವಿನಂ ಕಂದುಗುಮೆಂದು ಕಾಲುಗುರ್ಗಳಾನಮ್ರಾರಿಗಳ್ ಸುಯ್ಯಲಂ-
ಜುವಿನಿಂ ತೇಜದ ಸೋಂಕಿನಿಂದಮೆಮೆ ಸೀಗೆಂದುದ್ದ ತನೋರ್ಗಿಡಲಂ-
ಜುವಿನಂ ವಿಕ್ರಮವಿಭ್ರಮಂ ಸೊಗಯಿಸಿತ್ತೀ ವಿಷ್ಣುಭೂಪಾಳನೊಳ್ ||

ಪದದೊಳ್ಕೂರ್ಮಸ್ವರೂಪಂ ನಯನಯುಗಳದೊಳ್ಮತ್ಸ್ಯರೂಪಂ ಘನಗ್ರೀ-
ವದೊಳಾದಿಕ್ರೋಡರೂಪಂ ನಡುವಿನೊಳು ನೃಸಿಂಹತ್ವಮಾತ್ಮಪ್ರಭಾವಾ-

ಸ್ಪದದೊಳ್ರಾಮತ್ರಯತ್ವಂ ಮತಿವಿಕಸನದಲ್ಶುದ್ಧರೂಪಾಗಿ ಗುಬ್ಬಾಂ
ಗದ ಕಲ್ಕಿತ್ವಕ್ಕೆ ಪೋಯ್ದೊಂದಿದ ಹರಿಯೆನಿಪಂ ವಿಷ್ಣು ಜಿಷ್ಣುಸ್ವರೂಪಂ ||

## ಸಂಸ್ಕೃತ

ಈ ಕವಿ ಸೂರ್ಯಣನು ಸಂಸ್ಕೃತದಲ್ಲಿಯೂ ಕನ್ನಡದಲ್ಲಿ ಎಷ್ಟೋ ಅಷ್ಟೇ ಪಾಂಡಿತ್ಯ-ಕವಿತ್ವ-ಪ್ರಭುತ್ವವುಳ್ಳವನಾಗಿದ್ದನೆಂಬುದಕ್ಕೆ ಮಾದರಿಯೆಂದು ಶಾಸನಸ್ಥವಾದ ನಾಲ್ಕು ಸಂಸ್ಕೃತ ಪದ್ಯಗಳಲ್ಲಿ ಎರಡನ್ನು ಇಲ್ಲಿ ಕೊಟ್ಟಿದೆ :

ಜಯತಿ ಧರಣಿಲೋಕೋತ್ತಂಸಿತಾತ್ಮೀಯಪಾದಃ
ಚತುರವಿಬುಧಗೋಷ್ಠೀಪ್ರೌಢವಾಣೀವಿನೋದಃ
ಸಕಳಭರತವಿದ್ಯಾಹೃದ್ಯಗಂಭೀರಭಾವಃ
ವಿಪುಳವಿಜಯಲಕ್ಷ್ಮೀವಲ್ಲಭೋ ವಿಷ್ಣುದೇವಃ ||

ಸಂಧ್ಯಾ ಸಾ ಇತಿ ಚಕ್ರವಾಕಿ ಮನಸಾ ಕಿಂಕಿಂದ್ವಿತಿ[1] ಶ್ರೂಯತೇ
ಬಾಹ್ಯಾಳೀಮಿಹ ವಿಷ್ಣುವೀರನೃಪತೌ ನಿರ್ಗಚ್ಛತಿ ಸ್ವೇಚ್ಛಯಾ
ಭೇರೀರಾವಪಲಾಯಿತಾರಿತುರಗಶ್ರೇಣೀಖುರಕ್ಷೋಣಿತ-
ಕ್ಷುಣ್ಣಕ್ಷೋದತಳೋತ್ಥಪಾಂಸುಪಟಳೈಗ್ರ್ರಸ್ತಾಹಗ್ರಾಮಣಿ[2] ||

ಅಲ್ಲದೆ ಬೇಲೂರಿನ ಒಂದು ತಾಮ್ರ ಶಾಸನವೂ[3] ಬೇಲೂರು ತಾಲೂಕಿನ ವೀರದೇವನಹಳ್ಳಿಯ ಒಂದು ಶಿಲಾಶಾಸನವೂ[4] ಈ ಸೂರ್ಯಣನ ರಚನೆಗಳೇ ಆಗಿವೆ.

---

1 ಚಕ್ರವಾಕಿಯ ಧ್ವನಿಯನುಕರಣದ ಕ್ರಿಯಾಪದವಿಂಬೇಕೆಂದು ತೋರುತ್ತದೆ.

2 ಈ ಸಾಲಿನಲ್ಲಿ ಕೊನೆಯಲ್ಲಿ ಒಂದಕ್ಷರ ಬಿಟ್ಟುಹೋಗಿದೆ. ಬಹುಶಃ 'ಗ್ರಸ್ತಾಹವಾಗ್ರಾವನೀ' ಎಂದಿರಬಹುದು.

3 EC. V-2, Bl. 53.

4 EC. V-2, Bl. 171.

# ೮೨. ಬಿಜ್ಜಯನಾಯಕ

(೧೧೭೨)

ಕ್ರಿ. ವ. ೧೯೫೬ ರಲ್ಲಾದ ಭಾರತದ ರಾಜ್ಯಗಳ ಪುನಾರಚನೆಯಲ್ಲಿ ಮಹಾರಾಷ್ಟ್ರಕ್ಕೆ ಸೇರಿರುವ ಜತ್ತ ತಾಲೂಕಿನ ಮಾಡಗಿಹಾಳ ಎಂಬ ಗ್ರಾಮದಲ್ಲಿ, ಮಹಾದೇವ ದೇವಾಲಯದ ಇದಿರಲ್ಲಿ ಬಿದ್ದಿದ್ದ, ರಾಯಮುರಾರಿ ಸೋಮೇಶ್ವರನ ಕಾಲದ ಶಾಸನವು ಬಿಜ್ಜಯನಾಯನೆಂಬ ಒಬ್ಬ ಕನ್ನಡ ಕವಿಯ ಪರಿಚಯವನ್ನು ಮಾಡಿಕೊಡುತ್ತದೆ. ಆ ಶಿಲಾಶಾಸನದ ಕಾಲ ಕ್ರಿ. ವ. ೧೧೭೨.[1]

ಈ ಬಿಜ್ಜಯನಾಯಕನು ಕುಂತಳದೇಶದ ತರ್ದವಾಡೆಂಬ ನಾಡಿನೊಳಗಾದ ಮಾಳಿಗೆ (ಮಾಡಗಿಹಾಳ) ಎಂಬ ಊರ ಪ್ರಭು. ಕಳಚುರಿ ರಾಜ್ಯದ ಪ್ರಧಾನವರ್ಗದಲ್ಲಿ ಈತ ಒಂದು ಗಣ್ಯವಕ್ತಿ; ಮನ್ನಣೆ ಪಡೆದ ವ್ಯಕ್ತಿ. ಈತನ ತಂದೆ ಮಲ್ಲಗಾವುಂಡ; ತಾಯಿ ಮುದ್ದಿಯಕ್ಕ; ಹೆಂಡತಿ ಸಾಯಿಯಕ್ಕ ಅರ್ಥಾತ್ ಸಾವಿತ್ರೀದೇವಿ. ಈತ ಯಾವುದೊಂದು ಕಾವ್ಯವನ್ನು ಕನ್ನಡದಲ್ಲಿ ಬರೆದಿದ್ದಾನೋ ಹೇಗೋ ತಿಳಿಯದು. ಆದರೆ ಬಿಜ್ಜಯನ ಕಾವ್ಯಪ್ರತಿಭೆಯನ್ನು ಮೆಚ್ಚಿದ ಆ ಕಾಲದ ಬುಧರು ಇವನನ್ನು 'ವರ್ಣಕವಿ', 'ಕನ್ನಡಜಾಣ' ಎಂಬ ಬಿರುದುಗಳನ್ನು ಕೊಟ್ಟು ಗೌರವಿಸಿದರೆಂಬ ಮಾತು ಶಾಸನೋಕ್ತವಾಗಿದೆ :

ಕಳಚುರಿರಾಜ್ಯಗೃಹದೀಪಕನೆಂಬ ಮಹತ್ತ್ವದೇಳ್ಗೆ ತ-
ನ್ನೊಳೆ ರಿಪುರಾಯದಂಡುಗೆ ಪಡಿಗ್ಗಹನೆಂಬುರುವೀರದೇಳ್ಗೆ ತ-
ನ್ನೊಳೆ ಬುಧರೀಯೆ ವರ್ಣಕವಿ ಕನ್ನಡಜಾಣನೆನಿಪ್ಪ ಬಲ್ಮೆ ತ-
ನ್ನೊಳೆ ನೆಲಸಲ್ಕುದಾತ್ತನೆನೆ ಬಿಜ್ಜಯನಾಯಕನಿರ್ದನುರ್ಬಿಯೊಳ್ ||

ಆದುದರಿಂದ, 'ವರ್ಣಕಕವಿತ್ವ'ದಲ್ಲಿ 'ಕನ್ನಡಜಾಣ'ನಾದ ಈತ ರಗಳೆ,

---

1 Epi. Ind. Vol. XV, Page 315.

ಸಾಂಗತ್ಯ, ಷಟ್ಪದಿ ರೂಪದ ಕಾವ್ಯಗಳನ್ನು ರಚಿಸುವಲ್ಲಿ ಬಲ್ಲಿದನಾಗಿದ್ದ ನೆಂಬುದು ವ್ಯಕ್ತವಾಗುತ್ತದೆ.

ಬಿಜ್ಜಯನಾಯಕನ ಶಾಸನಾಂತರ್ಗತ ಪ್ರಶಸ್ತಿಮಾಲಿಕೆಯು ಗದ್ಯವನ್ನೂ ಈ ಬಿರುದುಗಳು ಅಲಂಕರಿಸಿವೆ. 'ವರ್ಣಕಕವಿತಾಪ್ರವೀಣ'ನಾದ ಈ ಕನ್ನಡ ಜಾಣ 'ಸುಜನವಿಬುಧ ಚೂಡಾಮಣಿ'ಯೂ ಆಗಿದ್ದನು.

ಮಾಳಿಗೆಯ ಕವಿ ಬಿಜ್ಜಯನು ದೊರೆ ರಾಯಮುರಾರಿಯ ಹೆಸರಿಂದ ಸೋಮೇಶ್ವರ ದೇವಾಲಯವನ್ನೂ ತನ್ನ ಹೆಸರಿಂದ ಬಿಜ್ಜೇಶ್ವರ ದೇವಾಲಯ ವನ್ನೂ ಎತ್ತಿಸಿ, ಅವುಗಳಿಗೆ ದತ್ತಿಗಳನ್ನು ಬಿಡಿಸಿದಂತೆ ಈ ಶಾಸನದಲ್ಲಿ ಹೇಳಿದೆ. ಕಲ್ಬರೆಹದಲ್ಲಿ ೯೪ ಸಾಲುಗಳ ವ್ಯಾಪ್ತಿಯುಳ್ಳ ಈ ಕಾವ್ಯ ೩೭ ಕನ್ನಡ ಪದ್ಯಗಳನ್ನೊಳಗೊಂಡಿದೆ. ಶಾಸನದ ಆರಂಭದಲ್ಲಿ 'ನಮಸ್ತುಂಗ' ಎಂಬ ಶಿವಸ್ತುತಿಯ ಶ್ಲೋಕದ ಬಳಿಕ ಕವಿ ವಿಘ್ನನಾಶಕ ವಿನಾಯಕನನ್ನು ಒಂದು ಕಂದ ಪದ್ಯದಲ್ಲಿ ಸ್ತುತಿಸುತ್ತಾನೆ. ಇದರಿಂದ ಕವಿ ಕಾವ್ಯರಚನಾ ಪದ್ಧತಿಯನ್ನು ಬಲ್ಲವನಾಗಿ, ಆ ಪರಂಪರೆಯನ್ನು ಅನುಸರಿಸಬೇಕೆಂಬ ವಿಚಾರದವನಾಗಿದ್ದನೆಂದು ತೋರುತ್ತದೆ. ಒಬ್ಬ ಬಿರುದುಹೊಂದಿದ ಕವಿಯೇ ಶಾಸನ ಕಾವ್ಯನಾಯಕನಾಗಿರುವ ಕಾವ್ಯಕ್ಕೆ ಕರ್ತೃವಿನ ಹೆಸರಿಲ್ಲದಿರು ವುದು ಮಹತ್ತ್ವದ ವಿಚಾರಣೀಯ ವಿಷಯವೇ ಆಗಿದೆ. ಕನ್ನಡ ಜಾಣ ನಾದ ಕವಿ ಬಿಜ್ಜಯನಾಯಕನೇ ಈ ಶಾಸನಕಾವ್ಯವನ್ನು ರಚಿಸುವ ಸಂಭವ ವಿಲ್ಲದಿಲ್ಲ. ತನ್ನ ಪ್ರಶಸ್ತಿಪರವಾದ ಶಾಸನಕಾವ್ಯಕ್ಕೆ ತಾನೇ ಕರ್ತೃವೆಂದು ಹೇಳಿಕೊಳ್ಳುವುದು ಗೌಣ ಎಂಬ ಭಾವನೆಯಿಂದ ಹೇಳದೆ ಬಿಟ್ಟಿರಬೇಕು ಎಂದೆನಿಸುವುದು.

ಕವಿಗಳ ಹೆಸರು ದೆಸೆ, ಕಾಲನೆಲೆಗಳು ಗೊತ್ತಾಗದ, ಕೇವಲ ಅಂಕಿತ ಮಾತ್ರವಿದ್ದ ಕೆಲವೊಂದು ಸುಭಾಷಿತ ಕಂದಪದ್ಯಗಳು ಪ್ರಚಲಿತವಾಗಿವೆ. ಅಂತಹ ಕೆಲಪದ್ಯಗಳನ್ನು ದಿ. ಆರ್. ನರಸಿಂಹಾಚಾರ್ಯರು ತಮ್ಮ ಕರ್ಣಾ ಟಕ ಕವಿಚರಿತೆಯ ದ್ವಿತೀಯ ಸಂಪುಟದಲ್ಲಿ (ಪು. ೧೭೫) ಕೊಟ್ಟಿದ್ದಾರೆ. 'ಬಲ್ಲವರರಸ', 'ಬುಧಜನಮಿತ್ರ', 'ಕನ್ನಡಜಾಣ' ಎಂಬಿತ್ಯಾದಿ ಅಂಕಿತ ಗಳಿಂದ ಪ್ರತಿಪದ್ಯ ಕೊನೆಗೊಳ್ಳುತ್ತದೆ. ಅವುಗಳಲ್ಲಿ 'ಕನ್ನಡಜಾಣ'ನ ಸುಭಾ ಷಿತಗಳು ಮೂರುಂಟು. ಈ ಎಲ್ಲ ಸುಭಾಷಿತಕಾರರ ಕಾಲ ಸು. ೧೫೦೦

ಎಂದು ಕವಿಚರಿತಕಾರರು ಅಭಿಪ್ರಾಯಪಡುತ್ತಾರೆ. ಆದುದರಿಂದ, ಸ್ವಲ್ಪವಲ್ಲ, ನೂರು ಶತಮಾನಗಳಷ್ಟು ಕಾಲ ಇವರೆಲ್ಲ ಈಚೆಯವರಾಗುವುದರಿಂದ, ಮಾಡಗಿಹಾಳ ಕನ್ನಡಜಾಣ ಬಜ್ಜಯನೂ ಸುಭಾಷಿತಕವಿ ಕನ್ನಡಜಾಣನೂ ಬೇರೆ ಬೇರೆ ಎಂದು ತೋರುತ್ತದೆ.

ಈ ಶಾಸನದ ಎರಡು ಆಯ್ದ ಪದ್ಯಗಳು :

ಲಾಳಂ ಬಾಳ್ಗೊಟ್ಟು ಕೋಳ್ಗೊಟ್ಟುಳಿದನುಳಿದನಾ ಚೇರಮಂ ಬೇರಮಂ ನೇ-
ಪಾಳಂ ಕಾಡಳಯಕ್ಕೆಯ್ದದನತಿಭಯದಿಂ ಶೌರ್ಯಸಂಪತ್ತಿಯಿಂ ಪಾಂ-
ಚಾಳಂ ಚಾಳಾದನಾಳಾಳೆಸಿಸಿ ಬರ್ದುಕಿದಂ ಭೀಮಸಂಗ್ರಾಮಕೇಳೀ-
ಲೋಳಂ ಚೋಳಂ ದಿಟಂ ಬಂದಪನೆನಲದಟಂ ಬಜ್ಜಳಕ್ಷೋಣಿಪಾಳಂ ||

ಎನಗಿನ ಸೋಮಭೂಪನರಿಭೂಪಜಯಾಂಗನೆಯೊಳ್ ನಿರಂತರಂ
ಮನವೆರಸಿರ್ಪನಾಕೆಯಿರಲಾತನ ಸನ್ನಿಧಿಯಲ್ಲಿ ನಿಲ್ವುದಿಂ-
ತೆನಗಿದು ಧರ್ಮವಲ್ಲವದಱಿಂ ದೆಸೆಯಂತರದೊಳಿರ್ಪೆನೆಂದು ದಿ-
ಗ್ವನಿತೆಯರಲ್ಲಿ ತನ್ನೃಪಯಶೋಂಗನೆ ಮಾಣದೆ ಮಾತನಾಡುವಳ್ ||

# ೮೩. ಯಜ್ಞೇಶ್ವರಸೂರಿ

(೧೧೭೨)

ಬೆಳಗಾವಿ ಜಿಲ್ಲೆಯ ಖಾನಾಪುರ ತಾಲೂಕಿನ ಹಲಸಿಗ್ರಾಮದ ಒಂದು ಸಂಸ್ಕೃತ ಶಿಲಾಶಾಸನದ[1] ಉತ್ತರಾರ್ಧವನ್ನು ಯಜ್ಞೇಶ್ವರಸೂರಿ ರಚಿಸಿದಂತೆ,

"ಕೃತೇಯಂ ಶ್ಲೋಕರಚನಾ ಶ್ರೀಯಜ್ಞೇಶ್ವರ ಸೂರಿಣಾ"

ಎಂಬ ಮಾತಿನಿಂದ ತಿಳಿಯುತ್ತದೆ.[2] ಇದು ಗೋವೆಯ ಕದಂಬ ಮನೆತನದ ವಿಷ್ಣುಚಿತ್ತ ವಿಜಯಾದಿತ್ಯನ ಆರಸೊತ್ತಿಗೆಯನ್ನು ಉಲ್ಲೇಖಿಸುತ್ತದೆ. ಸೀಮಾವಿವರಣೆಯನ್ನು ಮಾತ್ರ ಕನ್ನಡದಲ್ಲಿ ಹೇಳಿದೆ.

---

1 K. I. (K. R. I.) vol V.

2 ಪೂರ್ವಾರ್ಧಕ್ಕಾಗಿ 'ಮಧುಸೂದನಸೂರಿ' ನೋಡಿರಿ.

# ೮೪. ಬೂಚ

(೧೧೭೩)

ಶಾಸನದ ೧೧೯ ನೆಯ ಶಾಸನದಲ್ಲಿ ಪೊನ್ನನಿಗೆ ಸಮಾನನಾದ ಪ್ರೌಢಕವಿಯೆಂದು ಹೇಳಿದೆ.* ಬಲ್ಲಾಳನಿಗೆ ಮಂತ್ರಿಯಾಗಿದ್ದನು. ಇವನ ತಾಯಿ ಸುಗ್ಗವ್ವೆ; ಹೆಂಡತಿ ಶಾಂತಲೆ, ಗುರು ಶ್ರೀಪಾಲತ್ರೈವಿದ್ಯ. ಒಂದು ಪದ್ಯದಲ್ಲಿ ಇವನನ್ನು—

ವಾಚಕವಾಚಸ್ಪತಿ ಕವಿ-
ತಾಚಾರ್ಯಂ ಶ್ರವ್ಯಕಾವ್ಯಪದ್ಯಪದಾರ್ಥಾ-
ಲೋಚನ ಚಕ್ಷು . . . . .
. . . . . . ಪ್ರಿಯ ಹಿತಾರ್ಥವಾಚಂ ಬೂಚಂ ॥ ೧ ॥

ಎಂದು ವರ್ಣಿತನಾಗಿರುವುದಲ್ಲದೆ "ಚತುರ್ವಿಧಪಾಂಡಿತ್ಯಪಂಡಿತಂ" ಎಂದೂ ವರ್ಣಿತನಾಗಿದ್ದಾನೆ. ಈ ಶಾಸನವು ಕ್ರಿ. ಶ. ೧೧೭೩ ರಲ್ಲಿ ಬರೆಯಲಾಗಿದೆ.

---

* ಕಕಚ 1.

## ೮೫. ಶಾರದಿನಾಥಪಂಡಿತ

( ೧೧೭೪ )

ಈ ಶಾಸನವು ( ಆರಸಿಕೆರೆ ೧೧೨ ) ಕ್ರಿ. ವ. ೧೧೭೪ ರಲ್ಲಿ ಬರೆಯಲ್ಪಟ್ಟಿದೆ.* ಶಾಸನದ ಬಹುಭಾಗ ನಷ್ಟಪ್ರಾಯವಾಗಿದೆ. ಕೊನೆಯಲ್ಲಿ "ಚಬ್ಬರಾಜನ ಪುತ್ರ ಶಾರದಿನಾಥಪಂಡಿತರು ಪೇಳ್ದ ಶಾಸನಂ" ಎಂದು ಉಕ್ತವಾಗಿದೆ.

# ೮೬. ಕಾಳಿದಾಸ

(೧೧೭೪)

ರಾಯಮುರಾರಿ ಸೋವಿದೇವನ ಕಾಲದಲ್ಲಿ (ಕ್ರಿ. ಶ. ೧೧೭೪) ಅಗ್ರಹಾರ ಹಂದಿಗೋಳದಲ್ಲಿ ಬಾಹುಬಲಿ ಯತೀಶ್ವರನು ಕಟ್ಟಿಸಿದ ಬಸದಿಗೆ ಭೂಮಿ-ಗಾಣಗಳನ್ನು ಬಿಟ್ಟಂತೆ ಹೇಳುವ ಶಾಸನವೊಂದು[1] ಗದುಗು ತಾಲೂಕು ಚಿಕ್ಕಹಂದಿಗೋಳದಲ್ಲಿದೆ. ೯-೧೦ ಪದ್ಯಗಳನ್ನೊಳಗೊಂಡಿರಬಹುದಾದ ೪೯ ಸಾಲುಗಳ ಈ ಶಾಸನದ ಪ್ರತಿಯೊಂದು ಸಾಲೂ ಪ್ರಾಯಶಃ ಕೆಟ್ಟುಹೋಗಿರುವುದರಿಂದ ಪದ್ಯಗಳು ಸರಿಯಾಗಿ ಹೊಂದಿಕೆಯಾಗುವಂತಿಲ್ಲ. ಸುಮಾರಾಗಿ ಸರಿಯಾಗಿರುವ ಕೊನೆಕೊನೆಯ ಪಙ್ಕ್ತಿಗಳಲ್ಲಿ ಬರುವ ಕಂದ ಪದ್ಯದಿಂದ ಉಚಿತ ವಿಳಾಸನೂ ಅನುಪಮ ಕವಿಯೂ ಆದ ಕಾಳಿದಾಸನು ಈ ಶಾಸನಗಬ್ಬವನ್ನು ರಚಿಸಿದನೆಂದು ತಿಳಿಯುತ್ತದೆ. ಈ ಕವಿ ಹಂದಿಗೋಳವೆರಡಱ (ಚಿಕ್ಕಹಂದಿಗೋಳ, ಹಿರೇಹಂದಿಗೋಳ) ಹಿಟ್ಟಿನ ಸೇನಬೋವನಾಗಿದ್ದನು. ಆ ಕಂದಪದ್ಯವಿದು :

ವಿನಯನಿಧಿ ಪೇಳ್ದನೀ ಶಾ
ಸನಗಬ್ಬಮನಲ್ತೆ ಹಂದಿಗೊಳವೆರಡಱ ಹಿ
ಟ್ಟಿನ ಸೇನ ಬೋವನೆನೆ ನೆಗ
ಳ್ದನುಪಮ ಕವಿ ಕಾಳಿದಾಸನುಚಿತವಿಳಾಸ[ಂ*] ||

---

1 K. I. (K. R. I) Vol. V.

# ೮೭. ದೇವಪಾರ್ಯ

( ೧೧೭೪ )

ವಿಪ್ರೋತ್ತಮಗು ಮಾಡಿದ ಕೇಶವದೇವಾಲಯಕ್ಕೆ ದತ್ತಿಗಳನ್ನು ಬಿಟ್ಟುದನ್ನು ಉಲ್ಲೇಖಿಸಿರುವ ಅರಸಿಕೆರೆಯ ಶಾಸನವನ್ನು[1]—

ಭುವನನುತ ವಾಜಿವಂಶೋ
ದ್ಭವಕರ ವಿಭು ಸೋಮನಾಥ ಪುತ್ರಂ ಪೇಳ್ದಂ
ಕವಿರಾಜಂ ಕಾಶ್ಯಪಗೋ
ತ್ರವರ್ಧನಂ ದೇವಪಾರ್ಯನೀ ಶಾಸನಮಂ ||

—ಕಾಶ್ಯಪಗೋತ್ರದ ವಾಜಿವಂಶದ ಸೋಮನಾಥವಿಭುವಿನ ಮಗನಾದ ದೇವಪಾರ್ಯನು ರಚಿಸಿದ್ದಾನೆ. ಈತನು ತನ್ನನ್ನು ಕವಿರಾಜನೆಂದು ಹೇಳಿಕೊಂಡಿದ್ದಾನೆ. ಈ ಶಾಸನವು ಶಕವರುಷ ೧೦೯೬ ನೆಯ ವಿಜಯ ಸಂವತ್ಸರದ್ದು. ಇದರ ಕೆಲವು ಪದ್ಯಗಳನ್ನು ಇಲ್ಲಿ ಕೊಟ್ಟಿದೆ :

ಉರಗೇಂದ್ರಂ ಧಾತ್ರಿಯುಂ ಧಾರಿಣಿ ಹಿಮಗಿರಿಯುಂ ಹಿಮ್ಯಶೈಳಂ
ಕುಭೃಜ್ಜಾ
ವರನಂ ಗೌರೀವರಂ ಚಂದ್ರಮನನಮಳ ಚಂದ್ರಂ ಕಳಾ-
ಸ್ತೋಮಮಂ ನಿ
ರ್ಭರದಿಂದಂ ತಾಳ್ದುವಂತಪ್ರತಿಮಯದುಕುಳೋದ್ಭೂತ
ಸಾಮ್ರಾಜ್ಯ ಲಕ್ಷ್ಮೀ
ಭರಮಂ ಹೇಳಾ ಸುಸಾಧ್ಯಂ ತನಗೆನೆ ತಳೆದಂ ವೀರಬಲ್ಲಾಳ
ಭೂಪಂ ||

---

1 Ep. Car. Vol. V part II, ಅರಸಿಕೆರೆ 71.

ಸುರರಾಜೇಭಂ ಮದಾಂಧಂ ಮಧುಪಕುಳಯುತಂ ಪುಂಡರೀಕಂ
ಸದಾ ನೀ
ಚರತಂ ಗಂಗಾಹೃದಂ ಚಂದ್ರನ ರುಚಿ ಸಲೆ ದೋಷಾವಿಳಂ ತಾ
ನೆನಲ್ ಪೇ
ಳ್ದುದಿಯೇ ಬಲ್ಲಾಳಭೂಪಾಳನ ವಿಶದಯಶೋಲಕ್ಷ್ಮಿ-
ಯೊಳ್ ವರ್ಣಸಾಮ್ಯಂ
ಪಿರಿದುಂ ತಾನಾದೊಡಂ ನಿರ್ಮಳಗುಣದಿನವಂ
ಪೋಲಿಸಲ್ಬಲ್ಲನಾವಂ ||

ಅಗಲಕ್ಕಿಟ್ಟಿಡೆಯಾಯ್ತು ದಿಕ್ತ್ರತತಿಗಳ್ತಾವೆಂಬಿಸಂ ನೀಳವಾ
ಮುಗಿಲೊಳ್ಕಾಳಸೆಗೊಂಡುದೆಂಬಿನೆಗಂ ತಾಕಳ್ಪಮಿಪ್ಪನ್ನೆಗಂ
ನಗಸಂದೋಹಮನಬ್ಜಜಂ ಕಡೆದು ತಂದಿಟ್ಟಂತೆಪೋಲ್ತಾಡೆಯುಂ
ಸೊಗಯಿಪ್ಪುನ್ನತ ಕೇಶವಾಯತನಮಂ ವಿಪ್ರೋತ್ತಮ-
ರ್ಮಾಡಿದರ್ ||

# ೮೮. ಸಿಂಗದೇವ

(೧೧೭೮)

ಶಿವಮೊಗ್ಗೆ ಜಿಲ್ಲೆಯ ಸಾಗರ ತಾಲೂಕಿನಲ್ಲಿ ಉದ್ಧರೆ ಒಂದು ಗ್ರಾಮ. ಅಲ್ಲಿ ಬನಶಂಕರೀದೇವಸ್ಥಾನದ ಮುಂದೆ ಒಂದು ಬೃಹಚ್ಛಿಲಾ ಶಾಸನವಿದೆ.[1] ಹೊಯ್ಸಳ ವೀರಬಲ್ಲಾಳನಾಳಿಕೆಯ ಕಾಲದಲ್ಲಿ ಹುಟ್ಟಿದ ಆ ಶಾಸನದಲ್ಲಿ ಶಕವರುಷ ೧೧೯೯ (ಕ್ರಿ. ಶ. ೧೧೭೮) ನೆಯ ಪಿಂಗಳ ಸಂವತ್ಸರದ ಮಾಘ ಶುದ್ಧ ೧೨ ವಡ್ಡವಾರದಂದು ಕೋಳಾಲ[2]ಪುರದೊಡೆಯನಾದ ಎಕ್ಕಲನ ಮಂತ್ರಿ ಮಹದೇವನು ಮಾಡಿಸಿದ ಎಜಿಗಜಿನಾಲಯಕ್ಕೆ ದತ್ತಿಗಳನ್ನು ಬಿಟ್ಟಂತೆ ಹೇಳಿದೆ. ಈ ಶಾಸನವು ಬಣ್ಣಿಸುವ ಎಜಗನ ಮನೆತನದಲ್ಲಿ ಸಿಂಗದೇವ ಅಥವಾ ನರಸಿಂಗ ಎಂಬವನು ಕವಿಯಾಗಿದ್ದನೆಂದು–ಸರಸೋದಾರಕವಿತ್ವತತ್ವಚತುರಾಸ್ಯನಾಗಿದ್ದನೆಂದು — ತಿಳಿಯುತ್ತದೆ. ಈ ಸಿಂಗದೇವನ ಉಲ್ಲೇಖವು ಕೆಳಗಣ ಎರಡು ಶಾಸನಪದ್ಯಗಳಲ್ಲಿದೆ :

ಪರಭೂಪಾಲಪುರತ್ರಿಣೇತ್ರನೆಜಿಗ ಕ್ಷ್ಮಾಪಾಳಕಂ ವೈರಿದು
ರ್ಧರದೈತ್ಯಪ್ರಕರಪ್ರತಾಪಹರಣೋದ್ಯತ್ಕೇಶವಂ ಕೇಶವಂ
ಸರಸೋದಾರಕವಿತ್ವತತ್ವಚತುರಾಸ್ಯಂ ಸಿಂಗದೇವಂ ಮಹಾ
ಪುರುಷತ್ರೈಪುರುಷತ್ವಮುಂ ತಳೆದರಂ ತಾಮೂವರುಂ ಭೂವರರ್ ||

ತ್ರಿಮೂರ್ತಿಗಳು ಮೂರ್ತಿಗೊಂಡವತರಿಸಿದಂತಿರುವ ಈ ಮೂವರು ಉದ್ಧರೆಯ ಅಧಿಪತಿ ಎಕ್ಕಲದೇವನ ತಂಗಿ ಚಟ್ಟಲದೇವಿಯ ಮಕ್ಕಳು.

ಎನೆ ನೆಗಳ್ದೆಜಗನೃಪಾಳಕ
ನನುಜಂ ಕೋಳಾಲಪುರವರಾಧೀಶಂ ಪಾ
ವನತರ ನನ್ನಿಯ ಗಂಗಂ
ವಿನುತಗುಣೋತ್ತುಂಗನವನಿಪತಿ ನರಸಿಂಗಂ ||

---

1 Ep. Car. VIII, Part II, ಸಾಗರ.

2 ಕೋಳಾಲಪುರವು ಇಂದಿನ ಕೋಲಾರವೆಂದು ಪಂಡಿತರು ಗುರುತಿಸಿದ್ದಾರೆ.

ಈ ಶಾಸನದಲ್ಲಿಯ ವಂಶವಿಸ್ತಾರದ ವರ್ಣನೆಗಳಿಂದ ಕವಿ ಸಿಂಗ-ದೇವನ ವಿಶೇಷ ಪರಿಚಯವನ್ನು ನಾವಿಂತುಮಾಡಿಕೊಳ್ಳಬಲ್ಲೆವು :

ಈತನು ಗಂಗವಂಶದವನು; ಕೋಲಾರದ ಪ್ರಭು ಮನೆತನದವನು. ಈತನ ತಂದೆ ದಸಪರಸ; ತಾಯಿ ಉದ್ಧರೆಯ ಪ್ರಭು ಎಕ್ಕಲದೇವನ ತಂಗಿ ಚಟ್ಟಲದೇವಿ. ಎಚಿಗ, ಕೇಶವ ಎಂಬಿಬ್ಬರು ಸಿಂಗದೇವನ ಸೋದರರು; ಇವರಲ್ಲಿ ಎಚಿಗನು ಹಿರಿಯ. ಲಕ್ಷ್ಮಾದೇವಿ ಸಿಂಗನ ಸತಿ. ಈ ದಂಪತಿಗೆ ಹುಟ್ಟಿದ ಮಗನು ಎಕ್ಕಲನು. ಎಚಿಗ ಜಿನಾಲಯವನ್ನು ಮಾಡಿಸಿದ ಮಹದೇವನು ಈತನ ಮಂತ್ರಿ. ಬಹುಶಃ ಕವಿ ಸಿಂಗದೇವನ ಅಣ್ಣನಾದ ಎಚಿಗನ ಹೆಸರಿನಲ್ಲಿ ಈ ಜಿನಾಲಯವನ್ನು ಮಾಡಿಸಿರಬೇಕು.

# ೮೯. ಕವಿಕಂದರ್ಪ

(೧೧೭೭)

ಬೇರೆ ಬೇರೆ ಕಾಲಗಳಲ್ಲಿ ಮಾಡಿದ ದಾನಗಳನ್ನು ಉಲ್ಲೇಖಿಸುವ, ರಾಯಚೂರು ಜಿಲ್ಲೆಯ ಕೊಪ್ಪಳ ತಾಲೂಕಿನ ಕೌಲೂರು ಗ್ರಾಮದ ಒಂದು ದೊಡ್ಡ ಶಿಲಾಶಾಸನದಲ್ಲಿ ಈ ಕವಿನಾಮ ದೃಗ್ಗೋಚರವಾಗುತ್ತದೆ. ಮೊದಲನೆಯ ಧರ್ಮ-ದತ್ತಿ ನಡೆದುದು ಕ್ರಿ. ಶ. ೧೧೭೭ರಲ್ಲಿ. ಕಳಚುರ್ಯ ಸಂಕಮನಾಳುತ್ತಿದ್ದ. ಆ ಕಾಲದಲ್ಲಿ ರೇಚಿಮಯ್ಯನೆಂಬಾತನು ಹರಿಹರ ದೇವಾಲಯವನ್ನು ಕಟ್ಟಿಸಿ ದತ್ತಿಗಳನ್ನು ಬಿಡಿಸಿದುದನ್ನು ಅಲ್ಲಿ ಹೇಳಿದೆ. ದೊಡ್ಡ ಕಲ್ಲಿನ ಬಹುಭಾಗವನ್ನು ಈ ಪ್ರಥಮ ದಾನೋಲ್ಲೇಖವೇ ವ್ಯಾಪಿಸಿದೆ. ಇದರಲ್ಲಿ ಹಲವಾರು ವೃತ್ತಗಳೂ ಕಂದಗಳೂ ಇರುವಂತೆ ಕಂಡುಬರುತ್ತದೆ. ದುರ್ದೈವದಿಂದ ಕಲ್ಲು ಒಡೆದು ಸೀಳಿಹೋಗಿರುವುದೂ ಅಲ್ಲದೆ ಬರೆಹವೂ ಬಹುವಾಗಿ ಕೆತ್ತಿಹೋಗಿದೆ.[1] ಸಂಪಾದಕರ ಟಿಪ್ಪಣಿಯಂತೆ ಸಮುದ್ರ, ಚಕ್ರವರ್ತಿ ಬಿಜ್ಜಳ, ಆತನ ಮಗ ನಿಶ್ಶಂಕಮಲ್ಲ, ಪ್ರಧಾನ ರೇಚಿಮಯ್ಯ, ಮಾಸವಾಡಿ ನಾಡು ಮೊದಲಾದವುಗಳ ವರ್ಣನೆ ಮೊದಮೊದಲಲ್ಲಿ ಬಂದಿದೆ ಎಂದು ತಿಳಿಯುತ್ತದೆ. ಅವರು ಕೊಟ್ಟಿರುವ ಭಿನ್ನ-ವಿಚ್ಛಿನ್ನ ಪಙ್ಕ್ತಿಗಳಲ್ಲಿ ಅಗ್ರಹಾರ ಕೌಲೂರು, ಅಲ್ಲಿಯ ಅಯ್ನೂರ್ವರು ದ್ವಿಜರು, ಧರ್ಮಿ ರೇಚಿಮಯ್ಯನ ಮನೆತನದ ಪೂಜೆಯ ಮೊದಲಾದುವು ಕೊಟ್ಟಿವೆ. ಈ ದತ್ತಿಯ ಉಲ್ಲೇಖದ ಕೊನೆಯಲ್ಲಿ ಒಂದು ಕಂದಪದ್ಯದ ಒಂದು ತುಣುಕೂ ಒಂದು ತುಂಡೂ ಸಿಕ್ಕುತ್ತಿದೆ :

---

1 ಕೊಪ್ಪಳ ಜಿಲ್ಲೆಯ ಶಾಸನಗಳು (ಸಂ. ಡಾ. ಪಾಂ. ಭೀ. ದೇಸಾಯಿ), ಶಾಸನ ೨೨. ಒಡೆದು, ಕೆಟ್ಟುಹೋದ ಈ ಶಾಸನವನ್ನು ಕ್ರಮವಾಗಿ ಕೊಡಲಾಗಿದೆ. ಅಲ್ಲಲ್ಲಿ ಟಿಪ್ಪಣಿಯನ್ನು ಬರೆದು, ಸಾಧಾರಣವಾಗಿ ಓದಲಾದ ಭಾಗವನ್ನು ಮಾತ್ರ ಸಂಪಾದಕರು ಪರಿಷ್ಕೃತ ಪೂರ್ವಕವಾಗಿ ಉಚ್ಚರಿಸಿದ್ದಾರೆ. ಆದರೂ ಇಡಿಯಾದ ಒಂದು ಪದ್ಯವೂ ಇಲ್ಲ.

................

........ಶಾಸನ............

....................ಚ-

ತುರ್ಭಾಷಾಚಕ್ರವರ್ತಿ ಕವಿಕಂದರ್ಪಂ ||

ಇದರಿಂದ, ಈ ಶಿಲಾಲೇಖದ ಪದ್ಯಪ್ರಚುರವಾದ ಈ ಮೊದಲ ಭಾಗವನ್ನು ರಚಿಸಿದಾತ ಕವಿಕಂದರ್ಪ ಎಂಬವನೆಂದು ಗೊತ್ತಾಗುತ್ತದೆ.

ಮುಂದಣ ೪ ದಾನ ಉಲ್ಲೇಖಗಳು ಕೇವಲ ಗದ್ಯದಲ್ಲಿವೆ. ಅವು ಅಷ್ಟೇನೂ ನಷ್ಟವಾಗಿಲ್ಲ.

ಈ ಕೌಲೂರು ಶಾಸನದ ತರುವಾಯ ಇಪ್ಪತ್ತೇಳೇ ವರುಷಗಳ ಮೇಲೆ ಕ್ರಿ. ವ. ೧೨೦೪ ರಲ್ಲಿ ಬೆಳಗಾವಿಯ ಶಾಸನಗಳನ್ನು ಬರೆದ, ಮಹಾಕವಿಗಳಿಂದ ಪ್ರಶಂಸಿತನಾದ ಕವಿಕಂದರ್ಪನೊಬ್ಬ ಕಾಣಿಸಿಕೊಳ್ಳುತ್ತಾನೆ.[1] ಆದರೆ, ಕೌಲೂರ ಶಾಸನದ ಈ ಕಂದಪದ್ಯ ಮುಕ್ಕಾಲಷ್ಟು ಮುಕ್ಕಾಗಿರುವುದರಿಂದ ಈತನೇ ಬೆಳಗಾವಿಯ ಕವಿಕಂದರ್ಪನೆಂದು ನಿರ್ಧಾರದಿಂದ ಹೇಳಲು ಬರುವಂತಿಲ್ಲ. ಆದರೂ ಇಬ್ಬರೂ ಚತುರ್ಭಾಷಾಚಕ್ರವರ್ತಿಗಳೆಂಬ ಮಾತೂ, ಆ ಕಂಡಪದ್ಯದೊಡನಿರುವ ಈ ಕಂದಪದ್ಯದ ದೊರೆತಷ್ಟು ಭಾಗದ ಸಾರೂಪ್ಯವೂ ಗಮನಾರ್ಹವಾಗಿದೆ. ಬೆಳಗಾವಿ ಶಾಸನದ ಕವಿಕಂದರ್ಪನ ಪರಿಚಯಪದ್ಯವಿದು :

ದೋಷವ್ಯತೀತಮರ್ಥವಿ-
ಶೇಷಮಿದೆನೆ ಪೇಳ್ದನೊಲ್ದು ಶಾಸನಮಂ ಪೀ-
ಯೂಷಸಮಸೂಕ್ತಿ ಚಾತು-
ರ್ಭಾಷಾಕವಿಚಕ್ರವರ್ತಿ ಕವಿಕಂದರ್ಪಂ ||

ಕ್ರಿ. ವ. ೧೨೦೪ರ ಸುಮಾರಿಗೆ ಜನ್ನ, ಪಾರ್ಶ್ವ ಮೊದಲಾದ ಕನ್ನಡ ಮಹಾಕವಿಗಳಿಂದ ಪ್ರಶಂಸಿತನಾದ ಬಾಳಚಂದ್ರ ಕವಿಕಂದರ್ಪನು ಆ

---

1 ಈ ಗ್ರಂಥದಲ್ಲಿ ಬಾಳಚಂದ್ರಕವಿಯ ಪರಿಚಯವನ್ನು ನೋಡಿ.

ಮೊದಲೇ ಕಾವ್ಯಕೃಷಿಯನ್ನು ಆರಂಭಿಸಿರಬೇಕಷ್ಟೇ; ಸುಮಾರು ೨೫ ವರುಷಗಳ ಹಿಂದಿನಿಂದಲೂ ಅವನು ಕಾವ್ಯರಚನೆ ಮಾಡುತ್ತಿದ್ದಿರಬೇಕು. ಹೀಗೆ ನೋಡಿದರೆ ಕೌಲೂರ ಕವಿಕಂದರ್ಪನು ಬೆಳಗಾವಿಯ ಕವಿಕಂದರ್ಪನೇ ಆಗಿರಲಾರನೇ ಎಂಬ ಅನುಮಾನ ತಲೆಯೆತ್ತುತ್ತದೆ; ಮತ್ತು ಕ್ರಿ. ವ. ೧೧೭೭ ರಲ್ಲಿ ಕೌಲರಶಾಸನವನ್ನು ಬರೆದ ಕವಿಕಂದರ್ಪನು (ಬಹುಶಃ ಶಿವೋಪಾಸಕನಾಗಿದ್ದವನು) ಮುಂದೆ ಜಿನೋಪಾಸಕನಾಗಿ ಆ ಕಾವ್ಯನಾಮದಿಂದಲೇ ಶಾಸನಗಳನ್ನು ಬರೆಯುತ್ತಿದಿರಬಹುದು ಎಂದೂಹಿಸಿದರೆ ಅಸಂಭವನೀಯವೆಂದೇನೂ ತೋರುವುದಿಲ್ಲ.

# ೯೦. ಕಲ್ಯಾಣಶಕ್ತಿಪಂಡಿತ

(೧೧೬೭)

ವಿಜಯ ಪಾಂಡ್ಯನ ಕಾಲದಲ್ಲಿ (ಕ್ರಿ. ಶ. ೧೧೬೭) ಸ್ವಯಂಭು ಕಲಿದೇವಸ್ವಾಮಿಯ ನಂದಾದೀವಿಗೆಗೆ ಗಾಣವನ್ನು ಬಿಟ್ಟುದನ್ನು ತಿಳಿಸುವ ಶಿಲಾಶಾಸನವೊಂದು* ದಾವಣಗೆರೆ ತಾಲೂಕಿನ ಗಂಗನರಸಿ ಗ್ರಾಮದಲ್ಲಿದೆ. ಅದು ಇಪ್ಪತ್ತೇಳು ಸಾಲಿನದು; ಎಂಟು ಪದ್ಯಗಳನ್ನೊಳಕೊಂಡುದು. ಈ ಶಾಸನದ ಸಗಳ ಹೇಳಿಕೆಯನ್ನು ಈ ಪದ್ಯಗಳಲ್ಲಿ ಕಾಣಬಹುದು:

ನೆಗಳ್ದ ಗಂಗಗವುಂಡನೆಂಬ ವಿಭುಗಂ ಲೋಕವ್ವೆಗಂ ಪುಟ್ಟಿ ವಿ
ಕ್ಕಗುಣಕ್ಕಾರ[1]ವಾದ ಬರ್ಮಗಾವುಂಡನಾವಂ [1] ಶಾಂತಂಗವಾ ರಾಂತಿಕ
ವ್ವೆಗವೊಲ್ದುದ್ಭವಿಸಿರ್ದ ಕಲ್ಲಿಯಮನಾಸಂ ಪೋಲ್ವೆ ಪೇಳ್ವಕ್ಕ ಗಾಂ
ಡುಗಳೇನಾರ್ತಪರೇ ಸಮಸ್ತ ಗುಣದೊಳ್ ಸಂಸ್ತುತ್ಯದೊಳ್
ಸತ್ಯದೊಳ್ ||

ಇವರಧಿದೆಯ್ವಂ ಸ್ವಾಯಂ
ಭುವೆನಲ್ಪೆಂಪೆಸೆದ ದೇವನೀ ಕಲಿದೇವಂ
ಭುವನಸ್ತುತನಾಚಾರ್ಯಂ
ಶಿವಶರಣಂ ಜ್ಞಾನಶಕ್ತಿ ಮುನಿ ಜನಸೇವ್ಯಂ ||

ಅವರ ಮಗಂ ಶಿವಧರ್ಮ
ಪ್ರವಿಶ್ರುತ ಲಕ್ಷ್ಮೀವಿಳಾಸಭವನಂ ಪುಣ್ಯಾ
ರ್ಣವನೆನಿಪಂ ಗುರುಕುಳಕ್ಕೆ
ರವಿಚಂದ್ರಂ ವಾಮಶಕ್ತಿಪಂಡಿತದೇವಂ ||

---

* Epi. Car. XI, ದಾವಣಗೆರೆ 86.

1 'ಬರ್ಮಗಾವುಡನುವಂ' ಎಂದು ಓದಿಕೊಳ್ಳಬಹುದು.

ಅವನೊಡವುಟ್ಟಿದನಮೃತಾ
ರ್ಣವದೊಳ್ ಸುಧಾಂಶುವೊಡನೆ ಕಲ್ಪಕುಜಂ ಪು
ಟ್ಟುವ ತೆಱದಿಂದಾದಿತ್ಯಂ
ಭುವನಾದೀಶ್ವರನ ಕಟಕಮುಖಾದಿತ್ಯಂ ||

ವರಸೌಖ್ಯಾಚಾರದೊಳ್ತನ್ನನೆ ಪೊಗಳೆ ಜಗಂ ಮಂತ್ರದೊಳ್ಮಂತ್ರಿಗಳ್ಬಿ
ತ್ತರಿಸಲ್ತನ್ನಂ ನಿಜೇಶಂ ಪತಿಹಿತಗುಣದೊಳ್ಮೆಚ್ಚಿ ಕೈಕೊಂಡು ಕೂರ್ತಾ
ದರಿಸಲ್ತನ್ನಂ ಬಿಟಂ ತನ್ನವೊಲನುಸಮರಾರೆಂಬಿನಂ ಕೀರ್ತಿಲಕ್ಷ್ಮೀ
ವರನಾಪಾದಿತ್ಯದಂಡಾಧಿಪನ ಮಹಿಮೆಯುಂ ಒಣ್ಣಿಸಲ್ಬಲ್ಲನಾವಂ ||

ಶಾಸನದ ಕೊನೆಯಲ್ಲಿ "ವಾಮಶಕ್ತಿಪಂಡಿತರ ಮಗಂ ಕಲ್ಯಾಣಶಕ್ತಿ ಪಂಡಿತರು; ಈ ಶಾಸನವ ಸೇನಬೋವ ಬೊಪ್ಪೆಯ ಬರೆದ; ಕಲುಕುಟ್ಟಿಗ ಮಲೋಜ ಹೊಂಯ್ದ ಗುರುಪ್ರಸಾದಂ" ಎಂದಿದೆ. ಇಲ್ಲಿ ಕಲ್ಯಾಣಶಕ್ತಿ ಪಂಡಿತರಿಗೆ ಸಂಬಂಧಿಸಿ ಕರ್ತೃಸೂಚಕ ಪದವಿಲ್ಲದಿದ್ದರೂ ಅವನೇ ಕರ್ತೃ ವೆಂಬುದು ಸ್ಪಷ್ಟವಿದೆ. ಈ ಶಾಸನದ ಮತ್ತು ಇದೇ ಗ್ರಾಮದ ಕ್ರಿ. ಶ. ೧೧೬೧ ರ ಶಾಸನದ (Dg. 84) ಉಲ್ಲೇಖಗಳಿಂದ ಈ ಕವಿಯ ಪರಿಚಯ ವನ್ನು ಸಂಕಲಿಸಿ ಹೀಗೆ ಹೇಳಬಹುದು—

ಶಾಸನಕವಿ ಕಲ್ಯಾಣಶಕ್ತಿಪಂಡಿತನು ಜ್ಞಾನಶಕ್ತಿಮುನಿಯ ಮೊಮ್ಮ-ಗನು, ವಾಮಶಕ್ತಿಪಂಡಿತನ ಮಗನು. ಇವನ ಚಿಕ್ಕಪ್ಪನಾದ ಆದಿತ್ಯನು ವಿಜಯಪಾಂಡ್ಯರಾಜನ ದಂಡನಾಥನಾಗಿದ್ದನು. ಈ ಶಾಸನದಲ್ಲಿ ದಾನ ವನ್ನು ಪಡೆದ ಕಲಿದೇವಸ್ವಾಮಿಯ ಸ್ಥಾನಾಚಾರ್ಯ ತೇಜೋನಿಧಿ ಪಂಡಿತನು ಇವನ ಒಡಹುಟ್ಟಿದವನು. Dg. 84 ನೆಯ ಶಾಸನದಲ್ಲಿ ಇವನನ್ನು 'ತೇಜೋನಿಧಿ ಅಮೃತರಾಸಿಪಂಡಿತದೇವ' ಎನ್ನಲಾಗಿದೆ.

# ೯೧. ಗೋಮುಕವಿ

( ೧೧೭೮ )

ರಾಯಚೂರು ಜಿಲ್ಲೆಯ ಯಲಬುರ್ಗಿ ತಾಲೂಕಿನಲ್ಲಿ ಕುಕನೂರು ಎಂಬುದು ಒಂದು ಗ್ರಾಮ. ಅಲ್ಲಿಯ ಮಹಾಮಾಯಾದೇವಸ್ಥಾನದ ಮುಖ ಮಂಡಪದಲ್ಲಿ ಒಂದು ಶಾಸನಶಿಲೆ ನಿಂತಿದೆ. ಕಳಚುರಿ ಸಂಕಮನ ಕಾಲದ ಕ್ರಿ. ಶ. ೧೧೭೮ರ ಶಾಸನವದು.[1] ೧೧೭ ಸಾಲುಗಳುಳ್ಳ ದೊಡ್ಡ ಶಾಸನ; ಚಂಪೂಕಾವ್ಯರೂಪದಲ್ಲಿದೆ. ಅದರಲ್ಲಿರುವ ಕನ್ನಡ ಪದ್ಯಗಳು ೫೩. ಈ ಶಿಲಾಶಾಸನದ ಕೊನೆಕೊನೆಯಲ್ಲಿ, ದತ್ತಿಗಳನ್ನು ಹೇಳುವ ಭಾಗ ದಲ್ಲಿ ಗೋಮುಕವಿಗೆ ಸಲಗರದಲ್ಲಿ ಹೊಲಮನೆಗಳನ್ನು ಕೊಟ್ಟು ಮನ್ನಣೆ ಮಾಡಲಾಯಿತೆಂಬ ಸಂಗತಿ ಒಂದು ಕಂದಪದ್ಯದಲ್ಲಿ ಬಂದಿದೆ. ಈ ಕವಿ ಯನ್ನೇ ಇದಕ್ಕೂ ಮುಂಚೆಯೊಮ್ಮೆ ಗುಡುಗುಂಟೆಯಲ್ಲಿ ಹೊಲಮನೆ ಗಳನ್ನಿತ್ತು ಗೌರವಿಸಲಾಗಿತ್ತೆಂಬ ಮಾತೂ ಅದೇ ಪದ್ಯದಲ್ಲಿ ಹೇಳಿದೆ. ಗೋಮುಕವಿಗೆ ಈ ಪುರಸ್ಕಾರವಿತ್ತವರು ಕುಕ್ಕನೂರಿನ ಜ್ಯೇಷ್ಠಾದೇವಿಯರ ಸ್ಥಾನಾಚಾರ್ಯರಾಗಿದ್ದ, ಹಾಗೆಯೇ ಸೋಮೇಶ್ವರದೇವರ ನವಮಠಾ-ಚಾರ್ಯರಾಗಿದ್ದ ಲೋಕಗುರು ಕಳೇಶ್ವರಾರ್ಯರು. ಆ ಕಂದಪದ್ಯವಿದು :

ಉತ್ತಮವೆನೆ ಗುಡುಗುಂಟೆಯೊ-
ಳಿತ್ತಂತಿರೆ ಗೋಮುಕವಿಗೆ ಪಯಿಯಿಂ ಪನ್ನಿ-
ರ್ವತ್ತರ್ಕೆಯ್ಯುಂ ಮನೆಯುಮ-
ನಿತ್ತಂ ಸೆಲಗರದೊಳಂ ಕಳೇಶ್ವರದೇವಂ ||

ಕಳೇಶ್ವರಾರ್ಯರಿಗೆ ಅವರು ವಹಿಸಿಕೊಂಡಿದ್ದ ದೇವಾಲಯ-ವಿದ್ಯಾ ಸಂಸ್ಥೆಗಳ ನಿರ್ವಹಣೆಗಾಗಿ ದತ್ತಿಗಳನ್ನು ಬಿಟ್ಟಂತೆ ಶಾಸನದಲ್ಲಿ ಹೇಳಿದೆ. ದತ್ತಿಗಳನ್ನು ಪಡೆದಿದ್ದ ಕಳೇಶ್ವರಾರ್ಯರು ಆ ಸಂದರ್ಭದಲ್ಲಿ ಹನ್ನೆರಡು

---

1 A Corpus of inscriptions in the Kannada Districts of Hyderabad State, ins. No 12.

ಪುತ್ತ್ರರು ಭೂಮಿ ಮತ್ತು ಮನೆ ಕೊಟ್ಟು ಗೋಮಕವಿಗೆ ಮರ್ಯಾದೆ ಮಾಡಿದರೆಂಬುದನ್ನು ಗಮನಿಸಿದರೆ ಈ ಶಾಸನವನ್ನು ಬರೆದವನು ಏತತ್ಕವಿಯೇ ಎಂದು ಸಹಜವಾಗಿಯೇ ಗೊತ್ತಾಗುವುದು. ಹಿಂದಕ್ಕೊಮ್ಮೆ ಸನ್ಮಾನಿಸಿದುದೂ ಆಗೊಂದು ಶಾಸನವನ್ನು ಬರೆದುದಕ್ಕಾಗಿಯೆ ಎಂದು ಊಹಿಸಿದರೆ ತಪ್ಪಾಗಲಿಕ್ಕಿಲ್ಲ. ಆದರೆ ಈ ಸಂಗತಿಯ ಉಲ್ಲೇಖ ಬೇರೊಂದು ಶಾಸನದಲ್ಲಿ ಕಂಡುಬಂದಿಲ್ಲವಾದುದರಿಂದ ಗೋಮಕವಿಯ ಇನ್ನೊಂದು ಶಾಸನ ಇಂತಹದೇ ಎಂದು ತಿಳಿಯಲು ಮಾರ್ಗವಿಲ್ಲ. ಆದರೂ ಈತನು ಆಗಾಗಿನ ಶಾಸನಗಳನ್ನು ಬರೆಯುವ ವೃತ್ತಿಯುವನಾಗಿದ್ದನೆಂದೂ ಹಾಗೆಯೇ ತನ್ನ ನಾಮನಿರ್ದೇಶವಿಲ್ಲದೆ ಕೆಲವಾರು ಶಾಸನಗಳನ್ನು ಬರೆದಿರಬಹುದೆಂದೂ ಎನಿಸುತ್ತದೆ.

ಪ್ರಸ್ತುತ ಕುಕನೂರ ಶಾಸನದಲ್ಲಿ ಊರ ಮಹತಿ, ಆ ಮಹತ್ತಿಗೆ ಕಾರಣರಾದ ಜ್ಯೇಷ್ಠೆಯರ ಹಾಗು ಇತರ ದೇವದೇವಿಯರ ಗರಿಮೆ, ಸ್ಥಾನಾಚಾರ್ಯರ ಹಿರಿಮೆ ಇಲ್ಲಿ ಒಳ್ಳೇ ವಿಶದವಾಗಿ, ಉತ್ತಮವಾಗಿ ವರ್ಣಿತವಾಗಿವೆ. ಕಾವ್ಯದ ಬಂಧ-ಶೈಲಿಗಳು ಸರಲ ಸುಂದರವಾಗಿವೆ. ಭಾಷೆ-ಛಂದಸ್ಸುಗಳ ದೃಷ್ಟಿಯಿಂದ ಶಾಸನ ಶುದ್ಧವಾಗಿದೆ. ಮಾದರಿಗಾಗಿ ಈ ಶಾಸನದ ಕೆಲವು ಪದ್ಯಗಳನ್ನು ಇಲ್ಲಿ ಉದ್ಧರಿಸಿದೆ :

ಬಾಳಾಕ್ಷದ್ಯುತಿ ಬಾಡಬಾಗ್ನಿಗೆ ಜಟಾಜೂಟಂ ಪ್ರವಾಳಕ್ಕೆ ಸ-
ರ್ಪಾಳಂಕಾರಮಹಾಹಿಕೋಟಿಗೆ ಕರೋಟೀಮಾಲೆ ಶಂಖಾಳಿಗಾ-
ಭೀಳಧ್ವಾನವುದೀರ್ಣಘೋಷಕೆಣೆಯಾಗಲ್ ಕಾಳಿಕಾಭೈರವ-
ಶ್ರೀಲೀಲಾಕೃತಿವೋಲ್ಮನಂಗೊಳಿಸಿತೋ ರತ್ನಾಕರಂ ಶ್ರೀಕರಂ ||

ಶ್ರೀಮಜ್ಜನಕೇಸ್ಯಂ ಸುಮ-
ನೋಮಾಳಾ ಬಹುಸುವರ್ಣರತ್ನತ್ರಯುವೆಂ-
ಬೀಮಹಿಮೆಯುನಣೆಯಾದುದಿ-
ಳಾಮಹಿಳೆಯ ಕುಂತಳಕ್ಕೆ ಕುಂತಳದೇಶಂ ||

ಶಿವಲಿಂಗಂಗಳ್ ಸ್ವಯಂಭೂಪ್ರಭೃತಿಯೆನಿಸಿ ಪೊಂಭತ್ತೆನಲ್ ಶಕ್ತಿಪೀಠಂ
ಭುವನಸ್ತುತ್ಯಂಗಳೊಂಭತ್ತೆನಲಿದು ಶಿವಶಕ್ತಿಸ್ಫುರತ್ಸಂಪುಟಕ್ಷೇ-
ತ್ರವೆನುತ್ತುಂ ಸಿದ್ಧಯೋಗೀಶ್ವರವರಸಹಜಾಯೋಗಿನೀವ್ರಾತವತ್ಯ-
ತ್ಸವದಿಂದಲ್ಲಿಂದವೆಂದುಂ ತೊಲಗದೆನಲದಾರ್ ಬಣ್ಣಿಸಕುರ್ಕನೂರಂ ||

ಮಾದರಿಗಾಗಿ ಗದ್ಯಾಂಶ :

ಧಾರಾಪೂರ್ವಕಮಾಗೆ ಬಿಟ್ಟ ರಾಷ್ಟ್ರಕದ ಹೊಲಸೀಮೆಯೆಂತೆನೆ : ಮೂಡಣ ಸೀಮೆ : ಕುಡುಗುಂಟೆಯ ತಲೆಯೂರ ಮುಗುದ್ದೆಯ ಲಿಂಗದ ಕಲ್ಲು. ಮೂಡಣ ತೆಂಕಣಗೋಂಟಿನ ಸೀಮೆ : ಕುಡುಗುಂಟೆಯ ಬಳ್ಳಂಗಡಿಯ ಕಲ್ಲೂರ ಮುಗುದ್ದೆಯ ಲಿಂಗದ ಕಲ್ಲು. ತೆಂಕಣ ಸೀಮೆ : ಬಾಂಡಿಯ ಸೆಟ್ಟಿಯ ಕೆಱೆಯ ಪಡುವಣ ಲಿಂಗದ ಕಲ್ಲು— ಬಡಗಣ ಮೂಡಣ ಗೋಂಟಿನ ಸೀಮೆ : ಮೊದಲ ಹಳ್ಳದೊಳಗಣ ಕಗ್ಗಂದಿನ ಬಡಗಣ ಲಿಂಗದ ಕಲ್ಲು. ಇವಱಿಂದೊಳಗಣ ಭೂಮಿ ನಿಧಿನಿಧಾನನಿಕ್ಷೇಪ ಪ್ರೋಕಗಾಗಿ ದೇವಭೋಗ್ಯಯೋಗ್ಯವಕ್ಕೆ—

ಮೇಲಣ ಪದ್ಯಗಳಲ್ಲಿ ಮೊದಲ ಎರಡು ಪದ್ಯಗಳು ಬೆಳಗಾವಿ ಜಿಲ್ಲೆಯ ಸವದತ್ತಿ ತಾಲೂಕಿನ ಸಿರಸಂಗಿ ಗ್ರಾಮದ ಕ್ರಿ. ಶ. ೧೧೮೬— ಎಂದರೆ ಎಂಟು ವರುಷಗಳ ತರುವಾಯದ— ಶಾಸನದಲ್ಲಿಯೂ ಬಂದಿವೆ. ಅಲ್ಪಸ್ವಲ್ಪ ವ್ಯತ್ಯಾಸಹೊಂದಿ. ಹೀಗಾಗುವುದಕ್ಕೆ ಎರಡು ಕಾರಣಗಳಿರಬಹುದೆಂದು ಹೊಳೆಯುತ್ತದೆ:

೧. ಕೆಲವೊಂದು ಮಹತ್ತ್ವದ ಕ್ಷೇತ್ರಗಳೊಡನೆ, ವಿದ್ಯಾಕೇಂದ್ರವಾದ ಊರುಗಳೊಡನೆ ನಾನಾಭಾಗಗಳ ಜನರ ಸಂಪರ್ಕ ವಿಶೇಷವಾಗಿರುತ್ತಿತ್ತು. ಅಲ್ಲಿಯ ಒಳ್ಳೆಯ ಅಪರೂಪದ ವಸ್ತುಗಳನ್ನು ತಮ್ಮಲ್ಲಿಗೆ ಒಯ್ಯುತ್ತಿದ್ದರು. ಸಾಹಿತ್ಯಾಭಿರುಚಿಯುಳ್ಳವರು, ವಿದ್ಯಾಪ್ರೇಮಿಗಳು ಒಳ್ಳೆಯ ಸಾಹಿತ್ಯವನ್ನು ಒಯ್ಯುತ್ತಿದ್ದರು. ಅಲ್ಲಿ ಅವು ಪ್ರಚುರವಾಗುತ್ತಿದ್ದುವು; ಸಂದರ್ಭ ವಿಶೇಷಗಳಲ್ಲಿ ಉಪಯೋಗಕ್ಕೆ ಬರುತ್ತಿದ್ದುವು. ಹೀಗೆ ಜ್ಯೇಷ್ಠಾದೇವಿಯರ ಮಹಿಮಾತಿಶಯದಿಂದ ಪ್ರಸಿದ್ಧವಾದ, ವಿದ್ಯಾಕೇಂದ್ರವಾಗಿದ್ದ ಕುಕ್ಕ-

ನೂರಿನ ಗೋಮುಕವಿಯ ಕವಿತೆಗಳು ಸುಗಂಧವರ್ತಿ ಪ್ರದೇಶಕ್ಕೆ ಹೋಗಿರಬಹುದು.

೨. ಒಬ್ಬ ಶಾಸನಕವಿ ತನ್ನ ಒಂದು ಶಾಸನದಲ್ಲಿಯ ಪದ್ಯಗಳನ್ನು ತಾನೇ ಬರೆದ ಇನ್ನೊಂದು ಶಾಸನದಲ್ಲಿ ಬಳಸಿಕೊಂಡಿರಬಹುದು.

ಪ್ರಸ್ತುತ ಕುಕನೂರ ಶಾಸನದಲ್ಲಿ ಹಾಗೂ ಸಿರಸಂಗಿ ಶಾಸನ(೧೧೮೬)ದಲ್ಲಿ ಎರಡು ಪದ್ಯಗಳು ಸಾಮಾನ್ಯವಾಗಿರುವುದಕ್ಕೆ ಎರಡನೆಯ ಕಾರಣವು ಹೆಚ್ಚಾಗಿ ಅನ್ವಯಿಸುವುದೆಂದು ಕಂಡುಬರುತ್ತದೆ. ಎಂದರೆ ಸಿರಸಂಗಿಯ ಆ ಶಾಸನವನ್ನು ಗೋಮುಕವಿಯೇ ಬರೆದಿರಬೇಕೆಂದು ತೋರುತ್ತದೆ. ಕುಕನೂರಲ್ಲಿಯೂ 'ಸಜ್ಜನತಿಲಕನೆಂಬ ಒಬ್ಬ ಶಾಸನಕವಿ (ಕ್ರಿ. ವ. ೧೧೮೦) ಇದ್ದುದನ್ನು ಕಂಡಿದ್ದೇವೆ. ಆ ಇಬ್ಬರು ಸಜ್ಜನತಿಲಕರ ಮಧ್ಯದಲ್ಲಿ ಗೋಮುಕವಿ ಇದ್ದಾನೆ. ಈ ಮೂವರಲ್ಲಿಯೂ ಏಕತ್ವವನ್ನು ಕಲ್ಪಿಸುವ ಅದೃಶ್ಯ ಸಂಬಂಧ ಸೂತ್ರವಿದ್ದುದು ವಿಚಕ್ಷಣರಿಗೆ ಕಂಡುಬಾರದಿರದು. ಕ್ರಿ. ವ. ೧೧೭೪ ರ ಶಾಸನದಲ್ಲಿ ದತ್ತಿಯನ್ನು ಪಡೆದ ಗೋಮುಕವಿ ಹಿಂದೆಯೂ ಒಮ್ಮೆ ದತ್ತಿಯನ್ನು ಪಡೆದಿದ್ದಾನೆ; ಅರ್ಥಾತ್ ಶಾಸನವನ್ನು ಬರೆದಿದ್ದಾನೆ. ೧೧೮೦ ರ ಕುಕನೂರ ಶಾಸನದ ಕವಿ, ಹೆಸರಿಲ್ಲದೆ ವಿಶೇಷಣಮಾತ್ರದಿಂದ ಕಾಣಿಸಿಕೊಂಡ 'ಸಜ್ಜನತಿಲಕ'ನೇ ಗೋಮುಕವಿಯಾಗಿರಬಹುದು. ಗೋಮುಕವಿಯೆಂದು ಊಹಿಸಲಾಗಿರುವ ಕುಕನೂರ ೧೧೭೪ರ ಶಾಸನದ ಪದ್ಯಗಳನ್ನು ತನ್ನ ಸಿರಸಂಗಿ ಶಾಸನದಲ್ಲಿ (೧೧೮೬) ಅಳವಡಿಸಿಕೊಂಡ ಹೆಸರಿಲ್ಲದೆ ವಿಶೇಷಣಮಾತ್ರದಿಂದ ಕಾಣಿಸಿಕೊಳ್ಳುವ 'ಸಜ್ಜನತಿಲಕ'ನು ಗೋಮುಕವಿಯೇ ಆಗಿರಬಹುದು. ಇಲ್ಲಿ ಕಾಳಿಕಾಜ್ಯೇಷ್ಠೆಯರ ಮಹಿಮೆಯನ್ನು ವಿವರವಾಗಿ ಬಣ್ಣಿಸಿರುವುದೂ ಸಿರಸಂಗಿ ಶಾಸನದಲ್ಲಿ ಕ್ಷೇತ್ರಮಹಿಮೆಯನ್ನು ವಿವರಿಸಿರುವುದೂ ಎರಡರಲ್ಲಿಯ ಒಂದು ಸಾಮ್ಯ. ಇದು ಇಬ್ಬರು ಕವಿಗಳ ಸಮಾನ್ಯ ಮನೋಧರ್ಮದ ದ್ಯೋತಕವಾಗಿದೆ. ಈ ಸಂಗತಿ ಎರಡೂ ಶಾಸನಗಳ ಏಕಕರ್ತೃಕವೆಂಬ ಅನುಮಾನಕ್ಕೆ ಅನುಮೋದನವಾಗಿದೆ. ಹೀಗೆ ಮಧ್ಯದಲ್ಲಿದ್ದ ಕವಿ,

ಯಾವ ವಿಶೇಷಣಾದಿಗಳೂ ಇಲ್ಲದೆ ನಾಮ ಮಾತ್ರದಿಂದ ಕಾಣಿಸಿಕೊಳ್ಳು ತ್ತಿರುವ ಗೋಮಕವಿ, ಒಂದು ಕಾರಣದಿಂದ ಹಿಂದಣ ಸಜ್ಜನತಿಲಕನಿಗೂ ಒಂದು ಕಾರಣದಿಂದ ಮುಂದಣ ಸಜ್ಜನತಿಲಕನಿಗೂ ಸಂಬಂಧ ಹಚ್ಚಿ ಕೊಂಡು ಮೂರು ಶಾಸನಗಳನ್ನು ಮೂರು ಮುಖಗಳಿಂದ ಹೇಳಿದವನು ತಾನೇ ಆಗಿ, 'ಸಜ್ಜನತಿಲಕ ಗೋಮಕವಿ'ಯಾಗಿ ತೋರುತ್ತಿದ್ದಾನೆ.

# ೯೨. ರಾಮದೇವ

(೧೧೪೦)

ಹೊನ್ನಾಳಿಯ ೫೦ನೆಯ ಮತ್ತು ೨೫ನೆಯ ಶಾಸನವನ್ನು ಈತನು ಬರೆದಿದ್ದಾನೆ. ಮೊದಲನೆಯದು ೧೧೫೦ ರಲ್ಲಿ ಎರಡನೆಯದು ೧೨೦೮ ರಲ್ಲಿ ಬರೆದುದು. ಶಾಸನಗಳ ಅಂತ್ಯದಲ್ಲಿ—

ವಿರಚಿಸಿದನೊಪ್ಪೆ ಲಕ್ಷ್ಮೀ-
ಧರತನಯಂ ರಾಮದೇವನೀಶಾಸನಮಂ ||

ಎಂದು ಹೇಳಿದೆ. ಈತನ ಸಮುದ್ರವರ್ಣನೆಯನ್ನು ನೋಡಿ :

ಪರಿಧಾವನ್ಮತ್ಸ್ಯಪುಚ್ಛಾಹತಮಕರಕರಾಸ್ಫಾಳನಾಭೀಳನಕ್ರ-
ಸ್ಫುರಿತೋದ್ಯಚ್ಛಿಂಶುಮಾರಕ್ರಮಣಸಮುದಿತೋ
ಚ್ಚಂಡವಾತಾಭಿಜಾತೋ-
ದ್ಧುರವೀಚೀಶೀಖರೌಘಸ್ಥಗಿತನಿಖಿಳದಿಙ್ಮಂಡಲಂ ರಂಜಿಕುಂ ಬಾ-
ಸುರಜಂಬೂದ್ವೀಪಮಂ ಸುತ್ತಿಱಿದಖಿಳಧರಾಭೋಗಭದ್ರಂ
ಸಮುದ್ರಂ ||

ಗಳನ್ನು ಈ ಚಿಕ್ಕ ಕೃತಿ ಒಳಗೊಂಡಿದೆ. ಈ ಕೃತಿಯನ್ನು ಇಲ್ಲಿ ಇಡಿಯಾಗಿ ಕೊಟ್ಟಿದೆ :

ಶ್ರೀಗೊಮ್ಮಟಜಿನನಂ ನರ
ನಾಗಾಮರದಿತಿಜಖಚರಪತಿಪೂಜಿತನಂ
ಯೋಗಾಗ್ನಿಹತಸ್ಮರನಂ
ಯೋಗಿಧ್ಯೇಯನನಮೇಯನಂ ಸ್ತುತಿಯಿಸುವೆಂ || ೧ ||

ಕ್ರಮದಿಂ ಪೆಂಪ್ಪೊಣರ್ದಾಜಿದಕ್ರಮದೆ ಪೂತಂ
ಜಟ್ಟಿ ತನ್ನಿಟ್ಟ ಚ
ಕ್ರಮದಂ ನಿಃಪ್ರಭಮಾಗೆ ಸಿಗ್ಗನೊಳಕೊಂಡಾ
ತ್ಮಾಗ್ರಜಂಗೊಳ್ದುಗೆ
ಯ್ದು ಮಹೀರಾಜ್ಯಮನಿತ್ತು ಪೋಗಿ ತಪದಿಂ
ಕರ್ಮಾರಿವಿಧ್ವಂಸಿಯಾ
ದ ಮಹಾತ್ಮಂ ಪುರುಸೂನು ಬಾಹುಬಲಿ ಪೋಲ್ಪತ್ತಾರೊ
ಮಾನೋನ್ನತರ್ || ೨ ||

ಧೃತಜಯಬಾಹು ಬಾಹುಬಲಿ ಕೇವಲಿರೂಪಸಮಾನಪಂಚವಿಂ
ಶತಿಸಮುಪೇತಪಂಚಶತಚಾಪಸಮುನ್ನತಿಯುಕ್ತಮಪ್ಪ ತ
ತ್ಪ್ರತಿಕೃತಿಯಂ ಮನೋಮುದದೆ ಮಾಡಿಸಿದಂ
ಭರತಂ ಜಿತಾಖಿಳ
ಕ್ಷಿತಿಪತಿ ಚಕ್ರಿ ಪೌದನಪುರಾಂತಿಕದೊಳ್ಪುರುದೇವನಂದನಂ || ೩ ||

ಚಿರಕಾಲಂ ಸಲೆ ತಜ್ಜಿನಾಂತಿಕಧರಿತ್ರೀದೇಶದೊಳ್ ಲೋಕಭೀ
ಕರಣಂ ಕುಕ್ಕುಟಸರ್ಪಸಂಕುಳಮಸಂಖ್ಯಂ ಪುಟ್ಟಿ ದಲ್ಕುಕ್ಕುಟೇ
ಶ್ವರನಾಮಂ ತದಧೀಶಗಾದುದು ಬಳಿಕ್ಕಂ
ಪ್ರಾಕೃತರ್ಗಾಯ್ತು ಗೋ
ಚರಮಂತಾಮಣಿಮಂತ್ರತಂತ್ರನಿಯತರ್ಕಾಣ್ಬರ್ಗರದಿನ್ನುಂ
ಪಲರ್ || ೪ ||

ಕೇಳಲ್ಕಪ್ಪುದು ದೇವದುಂದುಭಿರವಂ
ಮಾತೇನೊ ದಿವ್ಯಾರ್ಚನಾ
ಜಾಳಂ ಕಾಣಲುಮಪ್ಪುದಾ ಜಿನನ ಪಾದೋದ್ಯನ್ನಖಶ್ರೀಸ್ಫುರ
ಲ್ಲೀಲಾದರ್ಪಣಮಂ ನಿರೀಕ್ಷಿಸಿದವರ್ಕಾಣ್ಬರ್ನಿಜಾತೀತಜ
ನ್ಮಾಳಂ ಜಾತ್ಯತಿಶಯಂ ಮಹಾತಿಶಯಮಾ
ದೇವಂಗಳಾ ವಿಶ್ರುತಂ || ೫ ||

ಜನದಿಂ ತಜ್ಜಿನವಿಶ್ರುತಾತಿಶಯಮಂ ತಾಂ
ಕೇಳ್ದು ನೋಳ್ಪಿಚ್ಛೆ ಚೇ
ತನೆಯೊಳ್ಪುಟ್ಟಿರೆ ಪೋಗಲುದ್ಯಮಿಸೆ ದೂರಂ
ಮಾರ್ಗಮುಂ ತತ್ಪುರಾ
ವನಿಯೆಂದಾರ್ಯಜನಂ ಪ್ರಬೋಧಿಸಿದೊಡಂ ತಾದೆಂದು ತದ್ದೇವಕ
ಲ್ಪನೆಯಿಂ ಮಾಡಿಪೆನೆಂದು ಮಾಡಿಸಿದನಿಂತೀ
ದೇವನಂ ಗೋಮಟಂ || ೬ ||

ಶ್ರುತಮುಂ ದರ್ಶನಶುದ್ಧಿಯುಂ ವಿಭವಮುಂ
ಸದ್ವೃತ್ತಮುಂ ದಾನಮುಂ
ಧೃತಿಯುಂ ತನ್ನೊಳೆ ಸಂದ ಗಂಗಕುಳಚಂದ್ರಂ
ರಾಚಮಲ್ಲಂ ಜಗ
ನ್ನುತನಾ ಭೂಮಿಪನದ್ವಿತೀಯ ವಿಭವಂ
ಚಾಮುಂಡರಾಯಂ ಮನು
ಪ್ರತಿಮಂ ಗೊಮ್ಮಟನಲ್ಲಿ ಮಾಡಿಸಿದನಿಂತೀ
ದೇವನಂ ಯತ್ನದಿಂ || ೭ ||

ಅತಿತುಂಗಾಕೃತಿಯಾದೊಡಾಗದದರೊಳ್
ಸೌಂದರ್ಯಮೌನ್ನತ್ಯಮುಂ
ನುತಸೌಂದರ್ಯಮುಮಾಗೆ ಮತ್ತತಿಶಯಂ
ತಾನಾಗದೌನ್ನತ್ಯಮುಂ

ನುತಸೌಂದರ್ಯಮುಮೂರ್ಜಿತಾತಿಶಯಮುಂ
ತನ್ನಲ್ಲಿ ನಿಂದಿರ್ದುವೇಂ
ಕ್ಷಿತಿಸಂಪೂಜ್ಯಮೊ ಗೊಮ್ಮಟೇಶ್ವರ ಜಿನ
ಶ್ರೀರೂಪಮಾತ್ಮೋಪಮಂ || ೮ ||

ಪ್ರತಿವಿಷ್ಟಂ ಬರೆಯಲ್ಕೆಯುಂ ನೆಱೆಯದು[1]
ನೋಡಲ್ನಾಕಲೋಕಾಧಿಪಂ
ಸ್ತುತಿಗೆಯ್ಯಲ್ಕೆ ಫಣಿನಾಯಕಂ ನೆಱೆಯನೆಂದಂದನ್ಯರಾರ್ಪರ್[2]ರಿಂ
ಪ್ರತಿಪದ್ಧಂ ಬರೆಯಲ್ಕೆ ಮುಂತು ಕವೆ ನೋಡಲ್ಬಣ್ಣಿಸಲ್ಕಿನ್ನಮಾ
ಕೃತಿಯಂ ದಕ್ಷಿಣ ಕುಕ್ಕುಟೇಶತನುವಂ ಸಾಶ್ಚರ್ಯ
ಸೌಂದರ್ಯಮಂ || ೯ ||

ಮಱಿದುಂ ಪಾಱದು ಮೇಲೆ ಪಕ್ಷಿನಿವಹಂ
ಕಕ್ಷದ್ವಯೋದ್ದೇಶದೊ
ಳ್ಮಿಱುಗುತ್ತುಂ ಪೊಱಪೊಣ್ಮುಗುಂ ಸುರಭಿಕಾಶ್ಮೀ
ರಾರುಣಚ್ಛಾಯವೀ
ತೆಱದಾಶ್ಚರ್ಯಮನೀ ತ್ರಿಲೋಕದ ಜನಂ
ತಾನೆಯ್ದೆ ಕಂಡಿರ್ದುದಾ
ನೆಱೆವರ್ನೆಟ್ಟನೆ ಗೊಮ್ಮಟೇಶ್ವರಜಿನಶ್ರೀಮೂರ್ತಿಯಂ
ಕೀರ್ತಿಸಲ್ || ೧೦ ||

ನೆಲಗಟ್ಟಾ ನಾಗಲೋಕಂ ತಳಮುಪರಿ ದಿಶಾಭಿತ್ತಿ
ಭಿತ್ತಿಬ್ರಜಂ ಸ್ವ
ಸ್ಥಲ[3]ಭಾಗಂ ಮುಚ್ಚಿಣಂ ಮೇಗಣ ಸುರರ
ವಿಮಾನೋತ್ಕರಂ ಕೂಟಜಾಳಂ

1 ಮೂ : ಯಿ;
2 ಮೂ. ಪುರ್;
3 ಮೂ. ಸ್ಥ.

ವಿಲಸತ್ತಾರೌಘಮಂತರ್ವ್ವಿತತಮಣಿವಿತಾನಂ
ಸಮಂತಾಗೆ ನಿತ್ಯಂ
ನಿಲಯಂ ಶ್ರೀಗೊಮ್ಮಟೇಶಂಗೆನಿಸಿದುದು
ಜಿನೋಕ್ತಾವಳೋಕಂ ತ್ರಿಳೋಕಂ ॥ ೧೧ ॥

ಅನುಪಮರೂಪನೇ ಸ್ಮರನುದಗ್ರನೆ ನಿರ್ಜಿತ ಚಕ್ರಿ ಮತ್ತುದಾ
ರನೆ ನೆಱೆ ಗೆಲ್ದು ಮಿತ್ತನಖಿಳೋರ್ವ್ವಿಯನತ್ಯ
ಭಿಮಾನಿಯೋ ತಪಃ
ಸ್ಥಿತನುಮಪರಿಗ್ರಹಿತ್ತಿಯೊಳಿರ್ದ್ದಪನೆಂಬನನೂನಬೋಧನೇ
ವಿನಿಹತಕರ್ಮ್ಮಬಂಧನನೆ ಬಾಹುಬಳೀಶನದೇನುದಾತ್ತನೋ ॥ ೧೨ ॥

ಅಭಿಮಾನಸ್ಥಿರಭಾವಮಂ ನಮಗೆ
ಮಾಡಿತ್ತುದ್ಧಮಾನೋನ್ನತಂ
ಶುಭಸೌಭಾಗ್ಯಮನಂಗಜಂ ಭುಜಬಳಸ್ತಂಭಮಂ ಚಕ್ರವ
ರ್ತ್ತಿಭುಜಾದರ್ಪ್ಪವಿಳೋಪಿ ಬಾಹುಬಳಿ
ತೃಷ್ಣೋಚ್ಛೇದಮಂ ಮುಕ್ತಿರಾ
ಜ್ಯಭರಂ ಮುಕ್ತಿಯನಾಪ್ತನಿರ್ವೃತಿಪದಂ
ಶ್ರೀಗೊಮ್ಮಟೇಶಂ ಜಿನಂ ॥ ೧೩ ॥

ಸ್ಫುರದುದ್ಯತ್ತ್ರಿತಶಕಾಂತಿಯುಂ ಪರಿಸರತ್ಸೌರಭ್ಯದಿಂದಂ ದಿಶೋ
ತ್ಕರಮಂ ಮುದ್ರಿಸುತಿಂ ಸಮೇರುಸುಮನೋವರ್ಷಂ
ಸ್ಫುಟಂಗೊಮ್ಮಟೇ
ಶ್ವರದೇವೋತ್ತಮ ಚಾರುದಿವ್ಯಶಿರದೊಳ್ದೇವರ್ಕ್ಕಳಿಂದಾದುದಂ
ಧರೆಯೆಲ್ಲಂ ನೆಱೆ ಕಂಡುದಾ ಮಹಿಮೆಯಾ
ದೇವಂಗದಾಶ್ಚರ್ಯ್ಯಮೋ ॥ ೧೪ ॥

ಎನಗಾಯುಷ್ಯಂ ಕ್ಷಿತಿಪಾಲಾಗ್ರಜಾತ್ಮನಗೆ ಕಾಣಲ್ಕೆಂಬವೋಲಾಯ್ತು ಮೇ
ಕ್ಷ್ಮನಿತಾಂಬಾಲಕನ್ಯದ್ರುಗೋಸತತಿಯುಂ ಕೆಂಡಬ್ಬಿತ್ತಿಂದಾವಿರ್ನ್ನಂ

ದಿನವೊಂದಾವಗ [ಮಾದ[1]] ಮುಗ್ಧಕುಸುಮಾಸಾರಂ
ಮಹೀಲೋಕಲೋ
ಜನಸಂತೋಷದಮಾಯ್ತು ಗೊಮ್ಮಟ
ಜಿನಾಧೀಶೋತ್ತಮಾಂಗಾಗ್ರದೊಳ್ || ೧೫ ||

ಮಿಱುಗುವ ತಾರಕಾಪ್ರಕರಮೀ ಪರಮೇಶ್ವರಪಾದಸೇವೆಗೆಂ
ದೆಱಪುದೆ ಭಕ್ತಿಯಿಂದಮೆನೆ ನಿರ್ಮಳಿನಂ
ಘನಪುಷ್ಪವೃಷ್ಟಿ ಬಂ
ದೆಱಗಿದುದಭ್ರದಿಂ ಧರೆಗದಭ್ರತರಾದ್ಭುತಹರ್ಷಕೋಟಿ ಕ
ಣ್ದೆಱೆದಿರೆ ಸಂದ ಬೆಳ್ಗುಳದ ಗೊಮ್ಮಟನಾಥನ
ಪಾದಪದ್ಮದೊಳ್ || ೧೬ ||

ಭರತನನಾದಿಚಕ್ರಧರನಂ ಭುಜಯುದ್ಧದೆ ಗೆಲ್ದ ಕಾಲದೊ
ಳ್ದುರಿತಮಹಾರಿಯಂ ತವಿಸಿ ಕೇವಳಬೋಧಮ
ನಾಳ್ದ ಕಾಲದೊಳ್
ಸುರತತಿ ಮುನ್ನೆ ಮಾಡಿದುದು ಪೂಮಳೆ
ಯೀದೊರೆಯಕ್ಕುಮೆಂಬಿನಂ
ಸುರಿದುದು ಪುಷ್ಪವೃಷ್ಟಿ ವಿಭು ಬಾಹುಬಲೀಶನ
ಮೇಲೆ ಲೀಲೆಯಿಂ || ೧೭ ||

ಕೆಮ್ಮಗಿದೇಕೆ ನಾಡಪಲವಂದದ ನಂದಿದ ಬಂದಿಗರ್ಕಳಂ
ನೀಂ ಮರುಳಾಗಿ ದೇವರಿವರೆಂದವರಂ ಮತಿಗೆಟ್ಟು ನನ್ನನೇ
ಕಮ್ಮತೊಳಲ್ಚಿದಪ್ಪೆ ಭವಕಾನನದೊಳ್ಸ್ಮರಮಾತ್ರರೂಪನಂ
ಗೊಮ್ಮಟದೇವನಂ ನೆನೆಯು ನೀಗುವೆ
ಜಾತಿಜರಾದಿದುಃಖಮಂ || ೧೮ ||

---

1 ಮೂ : X.

ಸಮ್ಮದನಾಗಲಾಗ ಕೊಲೆಯುಂ ಪುಸಿಯುಂ
ಕಳವುಂ ಪರಾಂಗನಾ
ಸಮ್ಮತಿಯುಂ ಪರಿಗ್ರಹದ ಕಾಂಕ್ಷೆಯುಮೆಂಬಿವ
ಜಿಂದಮಾದೊಡೆಂ
ದುಂ ತನುಸಂಗಿಗತ್ರೆಯುಂ ಪರತ್ರೆಯುಂ ಕೇಡೆನುತುಂ
ಮಹೋಚ್ಚದೊ
ಳ್ಗೊಮ್ಮಟದೇವನಿರ್ದ ಸಲೆ
ಸಾಜುವಪ್ಪೋಲೆಸೆದಿರ್ದನಿಃಸ್ಪೃಹೈ || ೧೯ ||

ಎಮ್ಮುಮನಿಂ ವಸಂತನುಮನಿಂದುವುಮಂ
ಸನೆವಿಲ್ಲುಮಂಬುಮಂ
ಕೆಮ್ಮಗನಾಥಯೂಥಮನೆ ಮಾಡಿ ಬಿಸುಟ್ಟು
ತಪಕ್ಕೆ ಪೂಣ್ದು ನಿಂ
ದಿಮ್ಮಗಿಲಪ್ಪುದೇಂ ಪಡೆವುದೆಂದತಿ
ಮುಗ್ಧೆ[1]ಯರಬ್ಬ ನಾದಮುಂ
ಗೊಮ್ಮಟದೇವ ನಿನ್ನ ಕಿವಿಗೆಯ್ದುವೆ
ನಿನ್ನವೊಲಾರೊ ನಿಃಸ್ಪೃಹರ್ || ೨೦ ||

ಎಮ್ಮನಿದೇಕೆ ನೀಂ ಬಿಸುಟೆಯೆಂದೆಳೆಯುಂ
ಲತಿಕಾಂಗಿಯರ್ಕಳುಂ
ತಮ್ಮಳಲಿಂದೆ ಬಂದು ಬಗಿಯಪ್ಪಿದರೆಂಬಿನಮಂಗದಲ್ಲಿ ಪು
ತ್ತುಮ್ಮಿರಿದೊತ್ತಿ ತಳ್ತಲತಿಕಾಳಿಯುಮೊಪ್ಪೆ
ತಪೋನಿಯೋಗದೊ
ಳ್ಗೊಮ್ಮಟದೇವನಿರ್ದಿರವಹೀಂದ್ರಸುರೇಂದ
ಮುನೀಂದ್ರವಂದಿತಂ || ೨೧ ||

---

1 ಮೂ : ಮುಗ್ಧೆ.

ತಮ್ಮನೆ ಪೋದರೆನ್ನ ಸುಜರೆಲ್ಲರುಮೆಯ್ದೆ ತಪಕ್ಕೆ ನೀನುಮಿಂ
ತಮ್ಮ ತಪಕ್ಕೆ ಪೋದೊಡೆನಗೀ ಸಿರಿಯೊಪ್ಪದು ಬೇಡೆನುತ್ತುಮ
ಣ್ಣಂ ಮನಮಿಟ್ಟು ಮನ್ಯಮಿಗೆಯುಂ
ಒಗೆಗೊಳ್ಳದೆ ದೀಕ್ಷೆಗೊಂಡೆ ನೀಂ
ಗೊಮ್ಮಟದೇವ ನಿನ್ನ ತಜಃಸಂದಳವಾರ್ಯಜನಕ್ಕೆ
ಗೊಮ್ಮಟಂ ॥ ೨೨ ॥

ನಿಮ್ಮಡಿಯೆನ್ನ ಧಾತ್ರಿಯೊಳಗಿರ್ದಪ್ಪನೆಂಬುದುವೇದ ಧಾತ್ರಿ ತಾಂ
ನಿಮ್ಮದುಮೆಮ್ಮದುಂ ಬಗೆವೊಡಲ್ಲದು ಬೇಱದು
ದೃಷ್ಟಿಬೋಧ ವೀ
ರ್ಯಮ್ಮಹಿತಾತ್ಮಧರ್ಮಮುಭಪ್ರೋಕ್ತಿಯೊಳೆಂಬ
ನಿಜಾಗ್ರಜೋಕ್ತಿಯಿಂ
ಗೊಮ್ಮಟದೇವ ನಿಮ್ಮನದ ಮಾನಕಷಾಯಮನೆಯ್ದೆ
ತೂಳಿದೈ ॥ ೨೩ ॥

ತಮ್ಮ ತಪಸ್ವಿಗಳ್ಗೆ ಕುತಪಸ್ಥಿತಿವೇಟ್ಟು ಬಳಾಂಗಸಂಗತಂ
ತಮ್ಮ ಶರೀರಮಾಗೆ ನೆಗಳ್ವನ್ಯತರಾಪ್ತರ ಶಿಸ್ತವೃತ್ತಕಂ
ಕಮ್ಮರಿಯೋಜನಂದಮೆ ವಲಂ ಸ್ವವರಾಕ್ಷಯ
ಸೌಖ್ಯಹೇತುವಂ
ಗೊಮ್ಮಟದೇವ ನೀಂ ತಪಮನಾಂತುಪದೇಶಕ
ನಾದುದೊಪ್ಪದೇ ॥ ೨೪ ॥

ನಿಮ್ಮನಮಂ ನಿಜಾತ್ಮನೊಳಕಂಪಿತಮಾಗಿಡೆ
ಮೋಹನೀಯ ಮು
ಖ್ಯಮ್ಮಣಿದೋಡಿ ಬೀಳೆ ಘನಘಾತಿಬಲಂ ಬಲದೃಕ್ತ್ವಬೋಧಸೌ
ಖ್ಯಮ್ಮಹಿಮಾನ್ವಿತಂ ನೆಗಳೆ ವರ್ತಿಸಿ ಮತ್ತಮಘಾತಿಘಾತದಿಂ
ಗೊಮ್ಮಟದೇವ ಮುಕ್ತಿಪದಮಂ ಪಡೆದೈ
ನಿರಪಾಯಸೌಖ್ಯಮಂ ॥ ೨೫ ॥

ಕಮ್ಮಿದವಪ್ಪ ಕಾಡಪ್ಪೊಸ ಪೂಗಳಿನರ್ಚಿಸಿ ಪಾದಪದ್ಮಮಂ
ಸಮ್ಮದದಿಂದೆ ನೋಡಿ ಭವದಾಕೃತಿಮಂ
ಬಲಗೊಂಡು ಬಲ್ಲ ಪಾಂ
ಗಿಮ್ಮನಪೊಲ್ದು ಕೀರ್ತಿಪವರೇಂ ಕೃತಕೃತ್ಯರೊ ಶಕ್ರನಂದದಿಂ
ಗೊಮ್ಮಟದೇವ ನಿನ್ನನಱಿದರ್ಚಿಸುತಿರ್ಪವರೇಂ
ಕೃತಾರ್ಥರೋ || ೨೬ ||

ಕುಸುಮಾಸ್ತ್ರಂ ಕಾಮಸಾಮ್ರಾಜ್ಯದ ಮಹಿಮೆಯ
ನಾಂತಿರ್ದೊಡಂ ಮುನ್ನೆ ತನ್ನೊಳ್
ವಸುಧಾಸಾಮ್ರಾಜ್ಯಯುಕ್ತಂ ಭರತಕರವಿಮುಕ್ತಂ
ರಥಾಂಗಾಸ್ತ್ರಮುಗ್ರಾಂ
ಕುಶಮಂ ತನ್ನುದ್ಘದೋರ್ದಂಡಮನೆಳಸಿದೊಡಂ
ಬಿಟ್ಟವಂ ಮುಕ್ತಿಸಾಮ್ರಾ
ಜ್ಯಸುಖಾರ್ಥಂ ದೀಕ್ಷೆಯಂ ಬಾಹುಬಳಿ ತಳೆದ
ನೆಮ್ಮನ್ನರೇನೆಂದೊ ಮಾಣ್ಬರ್ || ೨೭ ||

ಮನದಿಂ ನುಡಿಯಿಂ ತನುವಿಂ
ದಿನಸುಂ ಮುನ್ನೆಱಿಪಿದಘಮನಲಱಿಪೆನೆಂಬೀ
ಮನದಿಂದಮೊಸೆದು ಗೊಮ್ಮಟ
ಜಿನನಂ ಸ್ತುತಿಯಿಸಿದನಿಂತು ಸುಜನೋತ್ತಂಸಂ || ೨೮ ||

ಸುಜನರ್ಭವ್ಯರೆ ತನಗವ
ರಜಸ್ರಮುತ್ತಂಸಮಪ್ಪ ಪುರುಳಿಂ ಬೊಪ್ಪಂ
ಸುಜನೋತ್ತಂಸನೆನಿಪ್ಪಂ
ಸುಜನರ್ಗುತ್ತಂಸಮೆಂಬ ಪುರುಳಿಂದೆನಿಸಂ || ೨೯ ||

ಈ ಜಿನಸುತಿಶಾಸನಮಂ
ಶ್ರೀಜಿನಶಾಸನವಿಗಂ ವಿನಿರ್ಮಿಸಿದಂ ವಿ

ದ್ಯಾಜಿತವೃಜಿನಂ ಸುಕವಿಸ
ಮಾಜನುತಂ ವಿಶದಕೀರ್ತಿ ಸುಜನೋತ್ತಂಸಂ || ೩೦ ||

ವರಸೈದ್ಧಾಂತಿಕ ಚಕ್ರೇ
ಶ್ವರ ನಯಕೀರ್ತಿವ್ರತೀಂದಶಿಷ್ಯಂ ನಿಜಚಿ
ತ್ಪರಿಣತನಧ್ಯಾತ್ಮಕಳಾ
ಧರಸುಜ್ವಳಕೀರ್ತಿ ಬಾಳಚಂದ್ರಮುನೀಂದ್ರಂ || ೩೧ ||

ತನ್ಮುನಿನಿಯೋಗದಿಂ

ಪೊಡವಿಗೆ ಸಂದ ಗೊಮ್ಮಟಜಿನೇಂದ್ರಗುಣಸ್ತವ ಶಾಸನಕ್ಕೆ ಕ
ನ್ನಡಗವಿಬಪ್ಪನೆಂದೆನಿಪ ಬೊಪ್ಪಣಪಂಡಿತನೊಲ್ದು ಪೇೞ್ದವಂ
ಕಡೆಯಿಸಿದಂ ಬಲಂಕವಡಮಯ್ಯನ ದೇವಣನಟ್ಟಿಯಿಂದೆ ಬಾ
ಗಡೆಗೆಯ ರುದ್ರನಾದರದೆ ಮಾಡಿಸಿದಂ ವಿಳಸತ್ತ್ರಿಪಿಷ್ಠಿಯಂ || ೩೨ ||

# ೬೪. ಉದಯಕಲ್ಪ

( ೧೧೮೧ )

ಹಾವೇರೀ ತಾಲೂಕು ಹರಳಹಳ್ಳಿ ಗ್ರಾಮದಲ್ಲಿ ಕ್ರಿ. ಶ. ೧೧೮೧ ರ ಒಂದು ಶಾಸನವಿದೆ.[1] ಅದು ಸೋಮನಾಥ, ವಿಕ್ರಮೇಶ್ವರ, ಗುತ್ತೇಶ್ವರ ದೇವಸ್ಥಾನಗಳಿಗೆ ಭೂದಾನ ಮಾಡಿದುದನ್ನು ಉಲ್ಲೇಖಿಸುತ್ತದೆ. ೧೧೩ ಪಙ್ತಿಗಳಲ್ಲಿ ಹಬ್ಬಿದ ಈ ಸುದೀರ್ಘಶಾಸನ ಕಾವ್ಯವನ್ನು ಕವೀಶ್ವರನೆನಿಸಿ ಕೊಂಡ ಉದಯಕಲ್ಪನು ರಚಿಸಿದನೆಂದು

ಕಲ್ಯಾಣಶಕ್ತಿಯತಿಪತಿ
ಕಲ್ಯಾಣಶರೀರಿಯಾಗಿ ಸುಖಮಿರ್ಕೆ ಯಶಃ [೦]
ಕಲ್ಯಾಣಸ್ತ್ರೀಗಮುದಯ
ಕಲ್ಪಂಗೆ ಕವೀಶ್ವರಂಗೆ ಸಮನಿಕೆ ಸತತಂ ||

ಎಂಬ ಕೊನೆಯ ಕಂದಪದ್ಯದಿಂದ ತಿಳಿಯುತ್ತದೆ. ಆ ಶಾಸನದ ಕೆಲವು ಪದ್ಯಗಳು ಇಂತಿವೆ.

ಹೊಸೆದೆನ್ನಂ ನೋಳ್ಕೆ ದೇವಾಸುರ ತತಿ ಮಕರಂ
ಕಂತು ಲಕ್ಷ್ಮ್ಯಕ್ಕೆ ನೀರ್ಮಾ
ನಸೆಯರ್ ನಾರಾಯಣೋರಃಸ್ಥಳಕ್ಕೆ ಜಳಗಜಂ
ದೇವನಾಥಂಗೆ ಶಂಖ
ಪ್ರಸರಂ ಶ್ರೀವಿಷ್ಣುಹಸ್ತಕ್ಕೊದವಿದನೊರೆ
ದೇವಬ್ರಜಾಸ್ವಾದನಕ್ಕಂ
ದಿಸಮುಂ ತೀ[ವಿ]ರ್ದನೊಂಜಂತೆಸೆದು ಲವಣವಾರಾಶಿ
ಭೋರೆಂಬುದಿಂಬಿಂ ||

---

1 ಶಿಲಾಶಾಸನಗಳ ಕೆಲವು ಕನ್ನಡ ಕವಿಗಳು [ಶ್ರೀನಿವಾಸ ರಿತ್ತಿ, ಎಂ. ಎ.]: ಕ. ಸಾ. ಪ. ಪ. 45-1. Ann. Rep. on S. I. E. 1932-33, App. D. No. 55

ಕುಂತಳದೇಶದೊಳ್ ಮಿಸುಪ ಕೀರ್ತಿಯೆ
ಹೊಸೆಜಿಱ್ದಾಗೆ ಮಧ್ಯ ಸೀ
ಮಂತ ಸುಮಾರ್ಗಮಾಗೆ ನಿಜದಿಗ್ವಿಜಯೋದ್ಗತ ವಿಕ್ರಮಪ್ರಭಾ
ವಂ ತನಿಗೆಂಪು ಸೊಂಪೆಸೆವ ಸೆಂದುರದಂಡವದಾಗೆ ನೋಡ ಭೂ
ಕಾಂತೆಗೆ ಮೆಜ್ಜುವೆತ್ತ ಮೊಗವಜ್ಜಮನಾಗಿಸಿದಾ
ಚಳುಕ್ಯರೊಳ್ ||

ದೆಸೆಗಳನುಟ್ಟುಕೊಂಡು ದೆಸೆಗೆಟ್ಟರಿಸಂತತಿ ನಾಣಪುತ್ತಿನಿಂ
ಮುಸುಕಿ ಪೊದಳ್ದ ಪುತ್ತನಭಿವಾಂಛಿಸಿ ಮೂಡಿ
ಮುಳುಂಕಿ ಜೀವನ
ಪ್ರಸರದೊಳಿಲ್ಲ ಜೀವನಮದೆಂದು ಕರಂ ಕರಿದಾದ ಭೀತಿಯಿಂ
ವಿಸಸನದೊಳ್ ಬೆಳರ್ಚೆ ನಗುತೀಕ್ಷಿಪನಾಹವಮಲ್ಲ ಭೂಭುಜಂ ||

ರಸಮೊಸರ್ವಂತೆ ಪಾಡುತಿರೆ ಪಾಡುವವರ್ಮನಮೆಂಬ ಕೋಕಿ ನ
ರ್ತಿಸೆ ಘನನಾದಮಂ ಮೆಱೆಯೆ
ವಾದಕರಿಂದ್ರಧನುಃಪ್ರಭಾವಮಂ
ಪಸರಿಸೆ ಪಚ್ಚನಾಡುತಿರೆ ಜಂತ್ರದ ಮಿಂಚಿನ ಪೆಣ್ಣಿದೆಂಬಿನಂ
ಮಸಗುವ ಪಾತ್ರಮೊಪ್ಪಿದುದು ಜೋಮನ
ಮುಂತೆ ಸುಖಾಂಬು ರಾಗಮಂ ||

# ೯೫. ಆದಿತ್ಯದೇವ

( ೧೧೪೩ )

ರಾಯಚೂರು ಜಿಲ್ಲೆಯ ಯಲಬುರ್ಗಿ ತಾಲೂಕಿನ ಇಟಗಿ ಎಂಬ ಊರಲ್ಲಿ ದೊರೆತಿರುವ ಒಂದು ತಾಮ್ರಶಾಸನವನ್ನು[1] ಈತನು ಬರೆದಿದ್ದಾನೆ. ಅದು ಸಂಸ್ಕೃತ ಭಾಷೆಯಲ್ಲಿ ರಚಿತವಾಗಿದೆ. ಅದರ ಕಾಲ ೧೧೪೩ನೆಯ ಕ್ರಿಸ್ತಾಬ್ದ. ಸಾಲುಗಳ ಸಂಖ್ಯೆ ೪೯, ಶ್ಲೋಕಗಳ ಸಂಖ್ಯೆ ೨೪.

ಶಾಸನದ ಕೊನೆಯಲ್ಲಿ ಎರಡು ಪದ್ಯಗಳಲ್ಲಿ ಕವಿ ತನ್ನ ಹೆಸರನ್ನೂ ಲೇಖಕನ ಹೆಸರನ್ನೂ ಉತ್ಕೀರ್ಣಕಾರನ ಹೆಸರನ್ನೂ ಪ್ರತಿಪ್ರತ್ಯೇಕವಾಗಿಯೇ ಉಲ್ಲೇಖಿಸಿದ್ದಾನೆ. ಈ ಶಾಸನಕವಿ ಆದಿತ್ಯದೇವನಿಗೆ 'ತ್ರಿಭುವನ ವಿದ್ಯಾಚಕ್ರವರ್ತಿ' ಎಂಬ ಬಿರುದಿದ್ದಂತೆ ಅಲ್ಲಿಯ ಒಕ್ಕಣಿಕೆಯಿಂದ ಗೊತ್ತಾಗುತ್ತದೆ. ಅಲ್ಲದೆ ಕವಿ ತನ್ನನ್ನು 'ಶಕ್ತಿವ್ಯುತ್ಪತ್ತಿಸಂಪನ್ನ'ನಾದ ಪಂಡಿತನೆಂದೂ 'ವಿದ್ವತ್ ಶ್ರೀಪಾದಸೇವಿ' ಎಂದೂ ಕರೆದುಕೊಂಡಿದ್ದಾನೆ. ಆ ಎರಡು ಪದ್ಯಗಳು ಇಂತಿವೆ.

ಶಕ್ತಿವ್ಯುತ್ಪತ್ತಿಸಂಪನ್ನವಿದ್ವಚ್ಛ್ರೀಪಾದಸೇವಿನಾ |
ರಚಿತಾದಿತ್ಯದೇವನ ಸೇಯಂ ಶಾಸನಪದ್ಧತಿಃ ||

ಕೃತಿರಿಯಂ ತ್ರಿಭುವನವಿದ್ಯಾಚಕ್ರವರ್ತಿನಃ ಶ್ರೀಮದಾದಿತ್ಯದೇವಸ್ಯ |
ಲಿಖಿತಮಿದಂ ಪಂಡಿತಲಕ್ಷ್ಮೀಧರೇಣೋತ್ಕೀರ್ಣಂ ರಾಜವಿಜ್ಞಾನಿನಾ
ಪಂದಯೇನ ||

1 A Corpus of Inscriptions in the Kannada Districts of Hyderabad State, ins. No. 14.

# ೯೭. ನಾಗದೇವ ಭಟ್ಟ

( ೧೧೮೪ )

ಗದುಗು ತಾಲೂಕಿನ ಡಂಬಳ ಗ್ರಾಮದ ಒಂದು ಶಾಸನವನ್ನು[1] ರಚಿಸಿದ ಶಿವೋಪಾಸಕನಾದ ನಾಗದೇವಭಟ್ಟನು ತನ್ನ ತಂದೆ ಬಮ್ಮರಸನನ್ನು ಕವಿ ಎಂದು ಪರಿಚಯ ಮಾಡಿಕೊಟ್ಟಿದ್ದಾನೆ. ಈ ಶಾಸನವು ೮೭ ಸಾಲುಗಳ ದೊಡ್ಡ ಚಂಪೂಕಾವ್ಯವಾಗಿದೆ. ಕೊನೆಯಲ್ಲಿ ಕವಿಪರಿಚಯದ ಪದ್ಯವಿಂತಿದೆ :

ವರವರದ ಪರಮನಿರುಪಮ
ಗಿರಿಜೇಶನ ಚರಣಶರಣನೀ ಶಾಸನಮಂ
ವಿರಚಿಸಿ ಬರೆದಂ ಕವಿ ಬ
ಮ್ಮರಸನ ಸುತ ನಾಗದೇವಭಟ್ಟ ವರಿಷ್ಠಂ ||

ಕಲ್ಬರೆಹವನ್ನು ಬರೆದುಕೊಟ್ಟವನೂ ನಾಗದೇವನೆ. ಆರಂಭದಲ್ಲಿ ತೇಜಚಮೂಪತಿಯ ಪ್ರಶಂಸನಪದ್ಯಗಳು ಕೆಲವು ಸಂಸ್ಕೃತದಲ್ಲಿರುವುದರಿಂದ ಈ ನಾಗದೇವನು ಸಂಸ್ಕೃತದಲ್ಲಿಯೂ ಕವಿತ್ವಶಕ್ತಿಯನ್ನು ಪಡೆದವನಾಗಿದ್ದನೆಂದು ತೋರುತ್ತದೆ. ಈ ಶಾಸನದಿಂದೆತ್ತಿದ ಕೆಲವು ಪದ್ಯಗಳು ಇಲ್ಲಿವೆ :

ಕದನದೊಳಣ್ಮಿ ತನ್ನೊಳಿದಿರಾಂ[ಪವ]ರಿಲ್ಲದ ವೀರವೃತ್ತಿ ಪೆ
ರ್ಚಿದ ನಿಜರಾಜ್ಯದೊಳ್ಪಯಸಿ ಬೇಡುವರಿಲ್ಲದುದಾರವೃತ್ತಿ ಲೋ
ಕದ ಸಕಳಾಗಮೋಕ್ತಿಗಳ ನೋಡದೆ ಬಲ್ಲ ವಿವೇಕವೃತ್ತಿಗಾ
ಸ್ಪದ ಮಹಿಮಾಭಿರಾಮ ನೃಪ ಸೋಮನ
ರಾಜ್ಯವಿಳಾಸಪೂಜ್ಯನಾ ||

---

1 BKI, Vol. IV.

ಪೆಸರಳವಿಂ[ಗೆ] ಕುಂತಳಮೆನಿಪ್ಪುದು ಕುಂತಳದೇಶದಲ್ಲಿ ರಂ
ಜಿಸಿ ಪೊಸತಪ್ಪನರ್ಘ್ಯಮಣಿಚೂಳಿಕೆಯಂತಿರೆ ಮಾಸವಾಡಿನಾ
ಡೆಸೆವುದು ಮತ್ತವಾ ನೆಗರ್ದ ನಾಡೊಳು
ಧರ್ಮಪುರೋಪಶೋಭೆ ತಾ
ವಸುಮತಿ ತೊಟ್ಟ ಹಾರದವೊಲಿಪ್ಪುದು
ವಸ್ತುಗುಣೋಪಶೋಭಿತಂ ||

ಇಂತನೇಕೋದ್ಯಾನ ಜಲಸ್ಥಲ ಪರಿಖ ಪ್ರಾಕಾರ ಮಾಟಕೂಟ ರಮ್ಯಹರ್ಮ್ಯ ಪ್ರದೇಶಂಗಳಿಂ[ಸೆವ] ಧರ್ಮಾಪುರದ ವಿಖ್ಯಾತಿಯೆಂತೆಂದಡೆ,

# ೯೭. ಭಾಸ್ಕರ

(೧೧೮೬)

ಈಗ ಆಂಧ್ರರಾಜ್ಯದ ಕರ್ನೂಲು ಜಿಲ್ಲೆಗೆ ಸೇರಿರುವ, ೧೯೫೬ ರ ಮೊದಲು ಬಳ್ಳಾರಿ ಜಿಲ್ಲೆಯಲ್ಲಿದ್ದ ಆದವಾನಿ ತಾಲೂಕಿನ ನಂದಾವುರ ಎಂಬಲ್ಲಿ ಚಾಳುಕ್ಯ ಸೋಮೇಶ್ವರನ ಕಾಲದ ಒಂದು ಶಾಸನವಿದೆ.[1] ಅದರಲ್ಲಿ ನಿರ್ದೇಶಿತವಾದ ಕಾಲ ಶಕವರುಷ ೧೧೦೮. ಶಾಸನದಲ್ಲಿ ಎರಡು ಸಂಸ್ಕೃತ ಶ್ಲೋಕಗಳೂ ಎರಡು ಕನ್ನಡ ಕಂದಪದ್ಯಗಳೂ ಉಂಟು. ಇವುಗಳಲ್ಲಿಯೇ ಇವನು ತಾನು ಮೇಲಾದ ಕವಿಯೆಂದು ಹೇಳಿಕೊಂಡಿದ್ದಾನೆ; ಉಭಯ ಭಾಷಾಕವಿಯೆಂದು ಕಾಣಿಸಿಕೊಂಡಿದ್ದಾನೆ :

ಯೋ ಹರತಿ ಕವಿರಶಕ್ತಶ್ಚೋರ ಇವಾರ್ಥಂ ಪರೇಣ ಕವಿನಾದೃಷ್ಟಂ |
ತಂ ಹಸತಿ ಸುಕವಿಪದ್ಮಪ್ರಭಾಕರೋ ಭಾಸ್ಕರಃ ಕುಕವಿಮುಖಮುದ್ರಃ ||

"ಅನ್ಯಕವಿಯ ಅರ್ಥವನ್ನು ಕಳ್ಳನಂತೆ ಕಳುವ ಕೈಲಾಗದ ಕವಿಗಳನ್ನು ಸುಕವಿಗಳೆಂಬ ಕಮಲಗಳಿಗೆ ಪ್ರಭಾಕರನಾಗಿಯೂ ಕುಕವಿಗಳ ಮುಖಕ್ಕೆ ಬೀಗಮುದ್ರೆಯಾಗಿಯೂ ಇರುವ ಭಾಸ್ಕರನು ಪರಿಹಾಸಗೈಯುತ್ತಾನೆ" ಇಂಬುದಿದು ಶಾಸನಕವಿ ತನ್ನ ಕುರಿತು ಆಡಿಕೊಂಡಿರುವ ಈ ಶ್ಲೋಕದ ಅರ್ಥ.

ಅಗ್ರಹಾರ ನಂದಾವುರದ ಶ್ರೀಮಲ್ಲಿಕಾರ್ಜುನದೇವರಿಗೆ ದಾನಮಾಡಿದ ಸಿಂದವಾಡಿ ಸಾಸಿರದ ಮಹಾಪ್ರಚಂಡ ದಂಡನಾಯಕ ಮಾಳಪರಸನ ವರ್ಣನೆ ಈ ಶಾಸನದಲ್ಲಿ ಈ ಬಗೆಯಾಗಿದೆ :

ಪವನಪಥದಂತುಪಾಶ್ರಿತ-
ಕವಿರಾಜನನಂತನಂತೆ ಬಹುಭೋಗಧರಂ

1 South Indian Insc iptions.

ದಿವಸಕರನಂತೆ ತೇಜೋ-
ಭವನಂ ಮಾಳಪಚಮೂಪನೆಸೆವಂ ಧರೆಯೊಳ್ ||

ಇಲ್ಲಿ ಶ್ಲೇಷಾಲಂಕಾರಕ್ಕೆ ಬಳಸಿರುವ 'ಕವಿರಾಜ' ಎಂಬ ಪದವು ಭಾಸ್ಕರಕವಿಯ ಬಿರುದು ಆಗಿರಲಿ ಬಿಡಲಿ, ಅದನ್ನು ಅವನು ತನಗನ್ವಯಿಸಿ ಕೊಂಡೇ ಹೇಳಿರಲು ಸಾಕು. ಅರ್ಥಾತ್, ಈ ಭಾಸ್ಕರಕವಿಗೆ ಸಿಂದವಾಡಿ ಸಾಸಿರದ ಮಂಡಳೇಶ್ವರ ಮಾಳಪರಸನು ಆಶ್ರಯದಾತನಾಗಿದ್ದಂತೆ ತಿಳಿದು ಬರುತ್ತದೆ.

## ೯೮. ಸಜ್ಜನ ತಿಲಕ

( ೧೧೮೬ )

ಚಾಳುಕ್ಯ ೪ನೆಯ ಸೋಮೇಶ್ವರನ ಕಾಲದಲ್ಲಿ ಬಾಳಿದ ಶಾಸನಕವಿ ಈ 'ಸಜ್ಜನತಿಲಕ'. ಬೆಳಗಾವಿ ಜಿಲ್ಲೆಯ ಸವದತ್ತಿ ತಾಲೂಕಿನ ಸಿರಸಂಗಿ ಎಂಬೂರೊಳಗಿರುವ ಒಂದು ಶಾಸನವನ್ನು[1] ಈತ ರಚಿಸಿದ್ದಾನೆ. ಶಾಸನ ಕ್ರಿ. ಶ. ೧೧೮೬ರದು. ೬೬''×೪೬'' ಕ್ಷೇತ್ರದ ಕಲ್ಲುಬರೆಹವನ್ನು ಒಂದು ನೂರು ಪಙ್ಕ್ತಿಗಳಲ್ಲಿ ವ್ಯಾಪಿಸಿರುವ ಈ ಸುದೀರ್ಘಶಾಸನವು ಚಂಪೂ ರೂಪದ ಒಂದು ಖಂಡಕಾವ್ಯವೆಂದೇ ಹೇಳಬೇಕು. ಕಾವ್ಯವು ಸಗಸಮ-ನೋಜ್ಞವಾಗಿದೆ.

ರಿಶ್ಯಶೃಂಗಿ (ಸಿರಸಂಗಿ)ಯ ಅರುವರು ಗಾವುಂಡುಗಳಲ್ಲಿ ಒಂದು ಮನೆ ತನದವನಾದ ಹಬ್ಬೆಯನಾಯಕನು ಹಬ್ಬೇಶ್ವರದೇವಾಲಯ ಮತ್ತು ಪ್ರಸನ್ನ ಭೈರವದೇವಾಲಯ ಎಂಬೆರಡು ದೇವಾಲಯಗಳನ್ನು ಕಟ್ಟಿಸಿ, ಅವುಗಳಿಗೆ ವೃತ್ತಿಗಳನ್ನು ಬಿಟ್ಟನೆಂಬುದು ಈ ಶಾಸನದಲ್ಲಿ ಹೇಳಿದ ಮುಖ್ಯ ವಿಷಯ. ಆದರೆ, ಈ ಮುಖ್ಯವಿಷಯಕ್ಕೆ ಪೂರ್ವಭಾವಿಯಾಗಿ ಊರ ವರ್ಣನೆಗೆ ತೊಡಗಿದ ಕವಿ, ಅದರ ಸ್ಥಲಪುರಾಣಕಥೆಯನ್ನು ಸೊಗಸಾಗಿ ಬಿತ್ತರಿಸಿರುವುದು, ಹಬ್ಬೆಯ ನಾಯಕನು ನಡೆಯಿಸಿದ ಧರ್ಮಪ್ರಸಂಗವನ್ನು ಔಚಿತ್ಯಪೂರ್ಣವಾಗಿ ಬೆಳಸಿರುವುದು ಈ ಸಜ್ಜನತಿಲಕ ಕವಿಯ ಕಲ್ಪಕತೆಯ ವೈಶಿಷ್ಟ್ಯವೆಂದು ಹೇಳಬಹುದು. ಶಾಸನದ ಮಧ್ಯದಲ್ಲಿ ಧರ್ಮಪ್ರಸಂಗದಲ್ಲಿ ಅನುಷಂಗಿಕವಾಗಿ ಉದ್ಧರಿಸಿಕೊಂಡಿರುವ ಸಂಸ್ಕೃತ ಸುಭಾಷಿತ ಶ್ಲೋಕಗಳು, ಕೊನೆಯಲ್ಲಿ ಸರ್ವಶಾಸನಗಳಲ್ಲಿ ಸಾಮಾನ್ಯವಾಗಿ ಬರುವ ಫಲಶ್ರುತಿಯ ಸಂಸ್ಕೃತ ಶ್ಲೋಕಗಳು ಸಹಿತವಾಗಿ ಒಟ್ಟು ೬೨ ಪದ್ಯಗಳು ಈ ಶಾಸನದಲ್ಲಿವೆ.

---

1 Karnatak Inscriptions Vol. I and Inscriptions in Northern Karnatak and Kolhapur State (Shri K G. Kundangar,.

ಶಾಸನ ಸಮಾಪ್ತಿಯಲ್ಲಿ,

ಶಾಸನಮನುಸಿರ್ವ ಸೆವದಿಂ
ಲೇಸೆನಿಸಿದ ರಿಸ್ಯಶೃಂಗಮುನಿಮೋನ್ನತಿಯುಂ
ಭಾಸುರಮತಿ ಬಣ್ಣಿಸಿದಂ
ಶ್ರೀಸಜ್ಜನತಿಲಕನೊಸೆದು ಪೊಸಗನ್ನಡದಿಂ ||

ಎಂಬುದಾಗಿ ಕವಿ ತನ್ನೀ ಶಾಸನದ ಬಗೆಗೆ ಹೇಳಿಕೊಂಡಿರುವುದು ಸಮುಚಿತವೇ ಆಗಿದೆ. ಶಾಸನವನ್ನು ಹೇಳುವುದು ಕವಿಗೆ ನಿಮಿತ್ತಮಾತ್ರ. ಊರ ಪೌರಾಣಿಕಮಹತಿಯ ಬಗೆಗೆ, ನಾಡ ಜನಗಳ ಬಗೆಗೆ ತನಗಿದ್ದ ಪ್ರೀತಿ ಅಭಿಮಾನಗಳನ್ನು, ತನ್ನ ಕವಿತ್ವ, ಕಲ್ಪನಾವಿನ್ಯಾಸ, ಪ್ರತಿಭೆಗಳನ್ನು ಹೊರಹೊಮ್ಮಿಸಲು ಇದೊಂದು ಸುಸಂದರ್ಭವಾಗಿದೆ. ಇಲ್ಲಿ ಸಜ್ಜನತಿಲಕನ 'ಭಾಸುರಮತಿ' ವ್ಯಕ್ತವಾಗಿದೆ. ' 'ಬಣ್ಣಿಸಿದಂ ಪೊಸಗನ್ನಡದಿಂ' ಎಂಬ ಮಾತು ಬರೀ ಕನ್ನಡ ಭಾಷೆಗೆ ಅನ್ವಯಿಸದೆ, ಶಾಸನ ರಚನೆಯ ಪದ್ಧತಿ ಪರಂಪರೆಗೂ ವರ್ಣನರೀತಿಗೂ ಅನ್ವಯಿಸುವುದೆಂದು ಹೇಳಬಹುದು. ಶಾಸನ ಕಾವ್ಯಗಳನ್ನು ನವ್ಯಪದ್ಧತಿಗೆ ತಿರುಗಿಸುವ ಸ್ವತಂತ್ರ ವಿಚಾರದ ಕವಿಗಳ ಪಂಙ್ತಿಯಲ್ಲಿ ಸಜ್ಜನತಿಲಕನನ್ನು ಸೇರಿಸಬಹುದು. ಚಕ್ರವರ್ತಿಯ ಆಳಿಕೆಯ ಉಲ್ಲೇಖಕ್ಕಿಂತ ಮೊದಲು ಶಾಸನನಾಯಕ ಹಬ್ಬಯನ ಯಶಶ್ಚಿಂತನೆ, ಅವನ ವ್ಯಕ್ತಿತ್ವಕ್ಕೆ ಒಪ್ಪುವಂತಹ ವೈಚಿತ್ರ್ಯಪೂರ್ಣ ರೀತಿಯಲ್ಲಿ ಧರ್ಮಪ್ರಸಂಗವನ್ನು ತಂದಿರುವುದು. ಈ ಎರಡು ವೈಶಿಷ್ಟ್ಯಗಳು ನವ್ಯಶಾಸನಪದ್ಧತಿಯ ಎದ್ದು ತೋರುವ ಲಕ್ಷಣಗಳಾಗಿವೆ. ಇಷ್ಟಾಗಿಯೂ ಕವಿ ತನ್ನ ಬುದ್ಧಿಮತ್ತೆಯ ದ್ಯೋತಕವಾದ 'ಭಾಸುರಮತಿ' ಚಾರಿತ್ರ್ಯದ ದ್ಯೋತಕವಾದ 'ಸಜ್ಜನತಿಲಕ' ಎಂಬ ವಿಶೇಷಣಗಳಿಂದಷ್ಟೇ ತನ್ನ ಪರಿಚಯವನ್ನು ಮಾಡಿಕೊಂಡಿದ್ದಾನಲ್ಲದೆ, ಹೆಸರು ಕುಲಗೋತ್ರಗಳನ್ನು ಹೇಳಿಕೊಂಡಿಲ್ಲ. ಆದರೆ ಕುಸನೂರ ಎರಡು ಶಾಸನಗಳ ಕವಿ 'ಸಜ್ಜನತಿಲಕ' (೧೧೨೦) ಹಾಗೂ ಗೋಮುಕವಿ (೧೧೨೮) ಮತ್ತು ಈ ಸಿರಸಂಗಿ ಶಾಸನದ 'ಸಜ್ಜನತಿಲಕ' ಒಂದೇ ಎಂದು ಜೋಡಿಸುವುದಕ್ಕೆ ಸಂಬಂಧ

ಸೂತ್ರಗಳು ಸಿಕ್ಕುತ್ತಿರುವುದರಿಂದ, ಅವರ ಕುಲಗೋತ್ರಗಳನ್ನೂ ಹೆಸರನ್ನೂ ಈತನಿಗೆ ಹೊಂದಿಸಬಹುದಾಗಿದೆ.[1]

ಈ ಶಾಸನಕಾವ್ಯದಿಂದ ಕೆಲವು ಪದ್ಯಗಳನ್ನೂ ಕೊಂಚ ಗದ್ಯಭಾಗವನ್ನೂ ಇಲ್ಲಿ ಎತ್ತಿಕೊಟ್ಟಿದೆ. ಈ ಅವತರಣಿಕೆಯಲ್ಲಿ, ಹಬ್ಬೆಯ ನಾಯಕನಂತಹ ಪುರುಷರತ್ನವನ್ನು ಹೆತ್ತ ತಾಯಿ ಬಲ್ಲವ್ವೆಗೆ ಕವಿ ಧನ್ಯವಾದಗಳನ್ನರ್ಪಿಸುವ ಕಂದಪದ್ಯ ಅತ್ಯಂತ ಮನೋಜ್ಞವಾಗಿದೆ.

ಸುರುಚಿರಕುಂತಳಸ್ಥಳದೊಳುದ್ಧ್ಯಸುವರ್ಣವಿನೂತ್ನರತ್ನಭಾ-
ಸುರವೆನೆ ಚಿನ್ನಪೂವೆನಿಸುವೊಳಸೆಯುತ್ತಿರೆ ಚೆಳ್ವಲಂ ಮನೋ-
ಹರವೆನಿಸಿರ್ಪುದಂತದಱೊಳಗಗ್ಗದ ಕಂಪಣಮಾದ ಪೆಂಪುದೋ-
ಪ್ಪಿರೆ ಕೊಳಸೂರ್ಕರಂ ಸೊಗಯಿಕುಂ
ಮೊದಲಾವಿಷಯಕ್ಕದೆಂಬಿನಂ ||

ಪರ್ವಿರೆ ಮೂಜಗಂ ದೆಸೆಯೊ-
ಳ್ಪರ್ವತಕುಳವೊಂದೆ ದೆಸೆಯೆ ಬಯಲಾಗಿರೆ ತಾಂ
ಖರ್ವಡಪದಱೊಳು ಕಿನ್ನೀ-
ರುರ್ವರೆಲಂತದುವೆ ದೇವದುರ್ಗವೆನಿಕ್ಕುಂ ||

*  *  *  *

ನೆನೆದಮನಂ ಪಿಡಿಗುಳಿದ-
ತ್ತಿನಲಿಂದ್ರನುಮಾಗಳಶ್ವಿನೀದೇವರುಮಂ
ದನುನಯದೆ ಬಂದು ಬೆಸನೇ-
ನೆ[ನೆ*] ಬೆಸಸಿವನವರನಾಭಿಭಾಂತಕಮುನಿಸಂ ||

*  *  *  *

ನುಡಿದುದೆ ನಿಸ್ಸಿ ನೋಡಿದುದೆ ಸಾಧ್ಯವೊಡರ್ಚಿತ್ತೆ ಕಾರ್ಯಸಿದ್ಧಿ ಮಾ-
ರ್ಪಿಡಿದುದೆ ಸೊಮ್ಮು ಗಂಡವಾದೆ ಧರ್ಮವೆನಲ್ಕದಿದಿರ್ದರೂಢಿ ನೇ-

1 ಸಂಬಂಧಸೂತ್ರಗಳ ವಿವರಣೆಗಾಗಿ ಗೋವುಕವಿಯನ್ನು ನೋಡುವುದು.

ರ್ಪಡೆ ಗಡಿಯಂಕಮಲ್ಲರೆನಿಪ್ಪೊಳ್ಪಳವಟ್ಟರೆ ರಿಶ್ಯಶೃಂಗಿಯೊ-
ಳ್ಪಡಿ ತವಗಾರೆನಿಪ್ಪಱುವರಗ್ಗದ ಗಾಂಡುಗಳೊಪ್ಪಿ ತೋರುವರ್ ||

*　*　*　*

ಪಡೆವಡೆ ಗುಣಿ ಹಬ್ಬಯ್ಯನ
ಪಡಿಯೆನಿಸುವ ಸುತನನೊಸೆದು ಬಲ್ಲಪ್ಪೆಯವೋಲ್
ಪಡೆವುದು ಕೋ[ಟಿ]ಗೆವಕ್ಕಳು-
ವಡೆಯದೊಡೇಂ ಬಂಜೆಯಂ ನೃಪರ್ದಂಡಿಪರೆ ||

*　*　*　*

ಇಂತೆನಿಸಿ * * * * ನುಟ್ಟುಮಿರದೆ ಸಿಟ್ಟಂ ನುಡಿವ ದುಟ್ಟ ನಾಯಕರ ಸಿಟ್ಟೆಲ್ಲಮಂ ಮುಱಿದೊಟ್ಟಜೆಯಿಂದಟ್ಟಿಯಾಡಿಸುವ, ಬಿರುದನಾಯಕರ ಶಿರದ ಸಿರ್ಪಂ ಬಿದಿರ್ಚಿವ, ಚಪಳನಾಯಕ ಹೃದಯಸೆಲ್ಲ ಭೀತನಾಯಕರ ಕೊಲ್ಲ, ಸತ್ಯರಾಧೇಯ ಸಾಹಸವೈನತೇಯ * * * ಶ್ರೀ ವೀರಭೈರವದೇವ ದಿವ್ಯ ಶ್ರೀಪಾದಪದ್ಮಾರಾಧಕಂ ಪರಮಂಡಳಸೂಱೆಕಾಱನುಮಪ್ಪ ಶ್ರೀಮತು ಹಬ್ಬೆಯನಾಯಕಂ ನಿಜಭುಜಬಳೋಪಾರ್ಜಿತಸಂಪತ್ತಿಯಂ ಸುಖದಿನನು ಭವಿಸುತ್ತಿರ್ದೊಂದು ದಿವಸಂ ತಾನಸಹಾಯಶೂರನಪ್ಪುದಱಿಂ ಪುರಾತನ ರಪ್ಪಸಹಾಯಶೂರರ ಕಥಾಪ್ರಪಂಚುಗಳುಮನವರಂ ಕುಱಿತ್ತು ಪೇಳ್ದ ಸುಭಾಷಿತಂಗಳುಮಂ ಕೇಳುತ್ತಿರ್ದನದೆಂತೆಂದೊಡೆ,

ನ ಶ್ರೀಃ ಕುಲಕ್ರಮಂ ಯಾತಿ ಶಾಸನೇ ಲಿಖಿತಾಽಪಿ ವಾ |
ಖಡ್ಗಮಾಶ್ರಯತೇ ಲಕ್ಷ್ಮೀರ್ವೀರಭೋಜ್ಯಾ ವಸುಂಧರಾ ||
ಅಸಮರ್ಥಂ ಪರಿತ್ಯಜ್ಯ ಸಮರ್ಥಂ ಪ್ರತಿ ಯಾತಿ ಸಾ |
ಪೃಥಿವ್ಯಾ ನಾಸ್ತಿ ಮರ್ಯಾದಾ ವೀರಭೋಜ್ಯಾ ವಸುಂಧರಾ ||

ಇವು ಮೊದಲಾಗೆ ನಿಜಪ್ರತಾಪಾನುಸಾರಿಗಳಪ್ಪ ಪಲವು ಸುಭಾಷಿತಂಗಳಂ ಬಲ್ಲವರ್ಕೇಳಿಸೆ ತಾಂ ಬಲ್ಲರ್ಗೆ ಬಲ್ಲನಾಗಿ ಅವೆಲ್ಲವಱಭಿಪ್ರಾಯದ ನಂಬುಗೆ ಮನಂಬುಗಲು * * * *

## ೬೯. ಚೊಂಬಣ್ಣ ಪಂಡಿತ

(೧೧೮೬)

ತರೀಕೆರೆಯ ಒಂದು ತಾಮ್ರಶಾಸನದಲ್ಲಿ ಹೊಯ್ಸಳ ವಂಶವರ್ಣನೆಯ ೪ ಸಂಸ್ಕೃತ ಶ್ಲೋಕಗಳ ತರುವಾಯ 'ಚೊಂಬಣ್ಣಪಂಡಿತರ ಕವಿತೆ' ಎಂದು ಹೇಳಲಾಗಿದೆ. ಮುಂದಿನ ವೀರಬಲ್ಲಾಳಪ್ರಶಸ್ತಿ, ದಾನ ವಿವರಗಳೆಲ್ಲಾ ಕನ್ನಡ ಗದ್ಯದಲ್ಲಿದೆ. ಶಾಸನದ ಬರಪ ಬರೆವರಾಚಾರ್ಯ ಸೂರ್ಯಣ್ಣಗಳ ಶಿಷ್ಯ ಬಾಚೆಯನದು. ಎಂದರೆ ಚೊಂಬಣ್ಣನು ಬರೆಹಗಾರನಿಗೆ ಸಂಸ್ಕೃತಶ್ಲೋಕಗಳನ್ನು ರಚಿಸಿ ಒದಗಿಸಿದವನು.

## ೧೦೦. ಜಾವಣಿಪಂಡಿತ

( ೧೧೮೬ )

ಚೆನ್ನರಾಯ ಪಟ್ಟಣ ತಾಲೂಕಿನ ೧೫೨ನೆಯ ಶಾಸನವು (ಶ. ಸ. ೧೧೦೮) ೧೬೦ ಬ್ರಾಹ್ಮಣರಿಗೆ ದತ್ತಿದಾನಗಳನ್ನು ಕೊಟ್ಟಂತೆ ಹೇಳುತ್ತದೆ. ಶಾಸನದ ೭೨ ಪಙ್ಕ್ತಿಗಳಲ್ಲಿ ಒಂದೂ ಅಖಂಡವಾಗಿ ಉಳಿದಿಲ್ಲ. ಮೊದ-ಮೊದಲಿನ ವರ್ಣನಾತ್ಮಕ ಪದ್ಯಗಳಂತೂ ಬಹಳ ನಷ್ಟವಾಗಿ ಅರ್ಥಸಾಂಗತ್ಯವನ್ನು ಕಳೆದುಕೊಂಡಿವೆ. ಕೊನೆಯಲ್ಲಿ 'ಜಾವಣಿಪಂಡಿತರ ಕವಿತೆ' ಎಂದು ಇದೆ.

# ೧೧೧. ರಾಮದೇವ

( ೧೧೮೭ )

ವಿಜಾಪುರ ಜಿಲ್ಲೆಯ ಸಿಂದಗಿ ತಾಲೂಕಿನ ಕಲ್ಕೆರೆಯ ಶಂಕರ ನಾರಾಯಣದೇವರ ಆರಾಧಕನಾದ ರಾಮದೇವನೆಂಬವನು ಆವೂರ ಶಾಸನ ವೊಂದನ್ನು ಆ ದೇವರೊಲವಿನಿಂದ ನಿರ್ಮಿಸಿದನಾಗಿ ಹೇಳಿಕೊಂಡಿದ್ದಾನೆ. ಯಾದವ ಭಿಲ್ಲಮನಾಳಿಕೆಯಲ್ಲಿ ಕ್ರಿ. ವ. ೧೧೮೭ರಲ್ಲಿ ಹುಟ್ಟಿದೆ ಈ ಶಾಸನ.[1] ಅದರ ವ್ಯಾಪ್ತಿ ೭೩ ಸಾಲು, ಪದ್ಯ ಸಂಖ್ಯೆ ೨೯. ಅದರ ಕವಿನಾಮ ನಿರ್ದೇಶನದ ಕಂದಪದ್ಯವಿದು :

ಸಲೆ ಶಂಕರನಾರಾಯಣ
ರೊಲುವಿನ ಕಾರುಣ್ಯದಿಂದವೀ ಶಾಸನಮಂ
ಸುಲಲಿತಮಾಗಿರೆ ಮುದದಿಂ
ಕಲುಕೆಱೆಯ ಕುಲಾಗ್ರಿ[2] ರಾಮದೇವಂ ಪೇೞ್ದಂ ||

ದತ್ತಿದಾನಗಳನ್ನೂ ಪದ್ಯರೂಪದಲ್ಲಿಯೇ ವಿವರಿಸಿರುವುದು ಕವಿ ರಾಮ ದೇವನ ಶಾಸನದ ವಿಶೇಷ. ಕವಿತ್ವದ ಮಾದರಿಗೆ ಕೆಲವು ಪದ್ಯಗಳು :

ತುಱುಗಿದ್ದಾರವೆ ತೋಂಟಂ
ಕೆಱೆಬಾವಿಗಳೆಸೆವ ದೇವತಾಭವನಂ ಸಂ
ದಱವಟಿಗೆ ಸತ್ರವೆಲ್ಲಾ
ತೆಱದಿಂ ಹಗರಿಟಗೆ ನಾಡು ರಂಜಿಸಿ ತೋರ್ಕುಂ ||

ನೆಗಳ್ದಾ ಹಗರಿಟೆ ನಾಡಿಂ
ಗಗಣಿತಗುಣ ನಿಳಯನನ್ಯವನಿತಾ ದೂರಂ
ನಗರಾಜಧೈರ್ಯನೆನಿಸಿಯೆ
ನೆಗೞ್ದಂ ಸಂಗ್ರಾಮವಿಜಯ ವಿರುಪಕ್ಷಿತಿಪಂ ||

---

1 BKI, IV, No. 174.

2 ಕುಲಾಗ್ರಿ ಎಂದರೆ ಕುಲಕರಣಿಯೆ ?

ನೆಗಳ್ದ ಶ್ರುತಟಾಕಪ್ರಭು
ಜಗವಿದಿತಂ ವಿಕ್ರಮಾಂಕ ದಂಡಾಧಿಪನ
ತ್ಯಗಣಿತಮಹಿಮಂ ತನ್ನಯ
ಮಗಂದಿರಸುಮತದಿನೀಯೆ ಪರಮೋತ್ಸವದಿಂ ||

ನಿರುತಂ ತತ್ಪ್ರಭು ಮಾನ್ಯದೊಳ್ ದ್ವಿಜವರೇಣ್ಯಂ
ಕಮ್ಮೆ ವಂಶೋದ್ಭವಂ
ಸ್ಥಿರನತ್ಯೂರ್ಜಿತನಿಷ್ಟಶಿಷ್ಟವಿಬುಧಾಧಾರಂ ಬುಧಶ್ರೇಷ್ಠನು
ದ್ಧುರ ತೇಜೋನಿಧಿ ರೇಚಿಭಟ್ಟ ವಿಬುಧಂ
ಸದ್ಭಕ್ತಿಯಿಂ ಮಾಣಿಕೇ
ರಗೋಲಿಂದೆ ನಮಸ್ಯವಾಗಿ ಕ್ರಯವಂ
ಕೊಂಡಿತ್ತನುತ್ಸಾಹದಿಂ ||

ಪಿರಿದುಂ ರಂಜಿತಲಕ್ಕೇ
ಶ್ವರದಿಂದಂ ತೆಂಕಲೆಂಟು ಕೈಯುಗಲದೊಳಾ
ಪರಿಸೂತ್ರದನಿಕೆ ನೀಳಂ
ಸ್ಥಿರಮಾಗಿರೆ ಸತ್ರದಡುಗೆಮನೆಯಂ ಕೊಟ್ಟಂ ||

## ೧೦೨. ಬಾಚಣ್ಣ

( ೧೧೮೮ )

ಬೇಲೂರಿನ ೧೪೦ನೆಯ ಶಾಸನವನ್ನು ಬಾಚಣ್ಣನು ಬರೆದಿರುವಂತೆ ತೋರುತ್ತದೆ.* ಈ ಶಾಸನ ವೀರಬಲ್ಲಾಳನ ಆಳಿಕೆಯಲ್ಲಿ ೧೧೮೮ ಕೀಲಕ ಸಂವತ್ಸರದಲ್ಲಿ ಬರೆದುದಾಗಿ ಹೇಳಿದೆ. ಈತ ಅರಸಿಕೆರೆಯ ೪೭ ನೆಯ ಶಾಸನವನ್ನೂ ಬರೆದಿದ್ದಾನೆ.

* ಕಕಚ ೧.

# ೧೦೩. ತ್ರಿವಿಕ್ರಮಾಂಕ
( ೧೧೮೯ )

ಹೊಯ್ಸಳ ವೀರಬಲ್ಲಾಳನ ಕಾಲದಲ್ಲಿ ಕಮ್ಮಟದ ಚಟ್ಟಿಸೆಟ್ಟಿ ಚಟ್ಟೇಶಭವನವನ್ನೆತ್ತಿಸಿ, ಪಲವು ಕೆರೆಗಳನ್ನು ಕಟ್ಟಿಸಿ ದತ್ತಿಗಳನ್ನು ಬಿಟ್ಟಂತೆ ಹೇಳುವ ಶಾಸನವೊಂದು[1] ಅರಸಿಕೆರೆ ತಾಲೂಕಿನ ಬಾಣಾವರದಲ್ಲಿದೆ. ೭೨ ಪಙ್ತಿಗಳ ಈ ಶಾಸನವು ಹೊಯ್ಸಳವಂಶಾವತಾರದ, ಬಳಿಕ ಚಟ್ಟಿಸೆಟ್ಟಿಯ ವಂಶಾವತಾರದ ವರ್ಣನೆಗಳನ್ನೊಳಕೊಂಡಿದೆ. ಅದರಲ್ಲಿ ಚಟ್ಟಿಸೆಟ್ಟಿಯ ವರ್ಣನೆ ಬಹುದೀರ್ಘವಾಗಿ ಬಂದಿದೆ. ಆತನ ಧರ್ಮಕಾರ್ಯಗಳನ್ನೂ ಪದ್ಯದಲ್ಲಿಯೆ ತಿಳಿಸಿದೆ. ಕೊನೆಯಲ್ಲಿ ಕೆಳಗಣ ಮೂರು ಪದ್ಯಗಳಿವೆ :

ಬುಧನಿಧಿ ವಿವೇಕನಿಧಿಗುಣ
ನಿಧಿಯಾದಿತ್ಯಾನುಜಂ ತದಂತೇವಾಸಂ
ಬುಧನಿಧಿ ವಿವೇಕನಿಧಿ ಗುಣ
ನಿಧಿ ತ್ರಿಕ್ರಮಾಂಕನೀ ಶಾಸನಮಂ ||

ವಿನುತಂ ಸೇನೋಜಂ ತ
ತ್ತನೆಯಂ ಬೈರೋಜ ಬಲ್ಲ ಸೋಮೋಜಂಗಳ್
ವಿನಯನಿಧಾನರ್ಚಟ್ಟೇ
ಶನಿವಾಸಮನೆತ್ತಿದರ್ಮನಃಪ್ರಿಯದಿಂದಂ ||

ಶ್ರೀಸೋಡಲ ಭಕ್ತಿಮಹಾ
ಪ್ರಾಸಾದ ಪ್ರಾಳಿ ತನಗೆ ನಿಜವೆನೆ ನೆಗರ್ದೀ
ಭಾಸುರಯಶಂ ಬ್ಯರೋಜಂ
ಲೇಶನೆ ಶಾಸನಮನರ್ತಿಯಿಂ ಟಂಕಿಸಿದಂ ||

---

1 Ep. Car. V-2, ಅರಸಿಕೆರೆ 22.

ಇವು ಕ್ರಮವಾಗಿ ಶಾಸನಕವಿ, ದೇವಾಲಯ ನಿರ್ಮಾತೃ, ಶಾಸನದ ಟಂಕಕಾರರ ಹೆಸರುಗಳನ್ನು ಸೂಚಿಸುತ್ತವೆ. ಮೊದಲ ಪದ್ಯದ ಕೊನೆಯ ಪಾದದಲ್ಲಿ ನಾಲ್ಕು ಮಾತ್ರೆಗಳ ಕೊರತೆಯಿಂದ ಛಂದೋಭಂಗವಾಗಿದೆ. ಅಲ್ಲಿ 'ನಿಧಿ ಪೇಳ್ದಂ ತ್ರಿಕ್ರಮಾಂಕ' ಎಂದಿದ್ದುದು ಬರೆಹಗಾರನಿಂದ 'ಪೇಳ್ದಂ' ಎಂಬುದು ಕೈತಪ್ಪಿ ಬಿಟ್ಟುಹೋಗಿದೆ. ತ್ರಿವಿಕ್ರಮಾಂಕನು ಶಾಸನ ಕವಿಯೆಂಬುದು ಸ್ಪಷ್ಟ. ಈತನೇ ಕಸಬಾ ಅರಸಿಕೆರೆಯ ಇದೇ ವರುಷದ ಶಾಸನವನ್ನು[1] ರಚಿಸಿದಂತೆಯೂ ಅರಸಿಕೆರೆ ತಾಲೂಕಿನ ಬೊಮ್ಮೇನಹಳ್ಳಿಯ ಶಾಸನವನ್ನು[2] (೧೧೯೪) ತಿದ್ದಿಕೊಟ್ಟಂತೆಯೂ ತಿಳಿದು ಬರುತ್ತದೆ. ತಿದ್ದಿಸಿಕೊಂಡ ಹರಿಹರಸೂರಿ ಈತನನ್ನು ಕವೀಶ್ವರ ಎಂದು ಹೊಗಳಿದ್ದಾನೆ.[3] ಅರಸಿಕೆರೆಯ ಶಾಸನದ ಕೊನೆಯಲ್ಲಿ 'ತ್ರಿವಿಕ್ರಮ ಪಂಡಿತರ ಪದ್ಯ, ತಲ್ಲಿಖಿತ' ಎಂದಿರುವುದು ಕವಿಯೂ ಬರೆಹಗಾರನೂ ತ್ರಿವಿಕ್ರಮ ಪಂಡಿತನೇ ಎಂಬುದನ್ನು ಹೇಳುತ್ತದೆ. ಎರಡು ಶಾಸನಗಳಿಂದಲೂ ಕೆಲವು ಪದ್ಯಗಳನ್ನು ಇಲ್ಲಿ ಎತ್ತಿಕೊಟ್ಟಿದೆ :

### ಬಾಣಾವರ

ಅನಿಶಂ ಗೋಮಾರ್ಗದಿಂ ಪೊಟ್ಟೆಯನೆ ಪೊರೆದುಕೊಂಡಿರ್ಪದೀ
ಗೂಡ ಮಾನು
ಷ್ಯನೆ ಹೇಳ್ ಧರ್ಮಾರ್ಥಕಾಮಂಗಳೊಳನುನಯದಿಂ
ವರ್ತಿಸಲ್ ಕೀರ್ತಿಯಿಂದಂ
ಧನಮಂ ವಾಣಿಜ್ಜದಿಂದಾರ್ಜಿಸುತೆ ಸಕಲಧರ್ಮಂಗಳೊಳ್
ಕಾಮನೊಳ್ ಸಂ
ದು ನಿತಾಂತಂ ಶೋಭಿಸಿರ್ಪಂ ಸಕಳಗುಣಯುತಂ
ಮಾರನತ್ಯಂತ ಧೀರಂ ||

---

1 Ep. Car. XV, ಅರಸಿಕೆರೆ 205.

2 Ep. Car. V—2, ಅರಸಿಕೆರೆ 118.

3 ಹರಿಹರಸೂರಿ ನೋಡಿರಿ.

ಹರಿಯ ಹಯಕ್ಕೆ ತೋಡೆಸಿಪ ಹೇಷಚಯಂಗಳನಿಂದ್ರದಂತಿಯೊಳ್
ದೊರೆಯೆನಿಸಿರ್ಪ ದಂತಿಗಳನಭ್ರದೊಳಾದ ಸುಪಾಣಿ ಮುತ್ತಿನೊಳ್
ಸರಿಯೆನಿಸಿರ್ಪ ಮುತ್ತುಗಳನೆಯ್ದೆ ಬಚಿತ್ರದೆ ತಂದು ಮಾಱುವಂ
ಧರಣಿಪಗೊಲ್ದು ಕಮ್ಮಟದ........ಚಟ್ಟಪಸೆಟ್ಟಿ ಸಂತತಂ ||

ಎಸೆದಿರ್ಪ ಬಾಣಪೂರೊಳ
ಗೆಸೆದಿರೆ ಚಟ್ಟೇಶ ಭವನಮುಮನೆತ್ತಿಸಿ ಕ
ಟ್ಟಿಸಿದಂ ಪಲ[ವುಂ]ಕೆಱೆಯುಮ
ನಸಮಾಸಂಗೆಣೆಯೆನಿಪ್ಪ ಚಟ್ಟಮವಣಿಜಂ ||

## ಕಸಬ ಅರಸಿಕೆರೆ

ಬಲ್ಲಾಳ್ ಬಲ್ಲಾಳನೃಪಂ
ಬಲ್ಲಾಳೇಶ್ವರ ನಿವಾಸನುಂ ಕೀರ್ತಿಶ್ರೀ
ವಲ್ಲಭನೆತ್ತಿಸಿದಂ ಸಲೆ
ಸಲ್ಲಲಿತಮೆನಲ್ಕೆ ಶೋಭಿಪರಸಿಯ ಕೆಱೆಯೊಳ್ ||

ಆ ಅರಸಿಯ ಕೆಱೆಯ ಪೆರ್ಮೆಯಂ ಪೇಳ್ವಡೆ,

ಪರಮೇಷ್ಠಿಪ್ರಮುಖ್ಯವಿಪ್ರಪ್ರತತಿಗಳಿನಿಳಾಪ್ರಮುಖ್ಯ ಶೂದ್ರಾಳಿಯಿಂ ಖೇ
ಚರಕಾಂತಪ್ರಮುಖ್ಯರಷ್ಟಾವಣಿಜರಿಸಿಜನಪ್ರಮುಖ್ಯ ಕೋಯಾಳ್ಗಳಿಂ ಸಾ
ಗರಮಂ ಪೋಲ್ವೀ ತಟಾಕಂಗಳಿನಮರಪುರೋದ್ಯಾನಮಂ
ಪೋಲ್ತು ಶೋಭಾ
ಕರಮುಪ್ಪುದ್ಯಾನದಿಂದೀಯರಸಿಯಕೆಱೆ ಭೂಭಾಗದೊಳ್
ಶೋಭಿಸಿರ್ಕುಂ ||

ಮುಳಿದಾಗಡೆ ಕೂರ್ಪವರೊಳ್
ತಿಳಿವುದು ತಿಳಿವುದು ಗಡೆಂದು ಸಾಱುವ ತೆಱದಿಂ
ಗಳಪುವ ಗಿಳಿವಿಂಡಿನ ಕಳ
ಕಳವರಸಿಯ ಕೆಱೆಯ ಬನದೊಳೊಪ್ಪುತ್ತಿರ್ಕುಂ ||

# ೧೦೪. ಮೂವರು ಕವಿಗಳು

## ವಾಸುದೇವ, ಬಾಚಯ್ಯ, ಕೇಶವ

( ೧೧೮೯ )

ಕಾದಂಬ ಕಾಮಭೂಪನು ರಾಮಯ್ಯನ ರಾಮೇಶ್ವರಕ್ಕೆ ಕಯ್ಯಡಿ ವಳ್ಳಿಯನ್ನು ಕೊಟ್ಟುದನ್ನು ಹೇಳುವ ಕುಪ್ಪಗೆಡ್ಡೆಯ ಸುದೀರ್ಘ ಶಾಸನ ವನ್ನು* (ಶಕ ೧೧೧೧) ಚಿಮ್ಮರ ವಾಸುದೇವ, ದೊಡ್ಡರ ಬಾಚಯ್ಯ ಮತ್ತು ಕೇಶವ ಎಂಬ ಮೂವರು ಕೂಡಿ ರಚಿಸಿದ್ದಾರೆ. ಇದನ್ನು ತಿಳಿಸುವ ತ್ರುಟಿತ ಪದ್ಯವಿದು :

ಒದವಿದ ಕುಪ್ಪಟೂರ ಸುಜನಾಗ್ರಣಿ ಚಿಮ್ಮರ ವಾಸುದೇವನುಂ
ಸದುಗುಣಯುಕ್ತನಪ್ಪ ಕವಿ ದೊಡ್ಡರ ಬಾಚಯನುಂ
ಸಮಸ್ತ ಸ
...................... ರ ಕೇಶವದೇವನೆಂಬಿವ
ರ್ಮುದದೊಳೆ ಕೂಡಿ ಪೇಳ್ದರಿದು ಸಲ್ಗು
ಶಶಾಂಕದಿನೇಶರುಳ್ಳಿನಂ ||

ಇಲ್ಲಿಯ ಕುಪ್ಪಟೂರು ಕುಪ್ಪಗೆಡ್ಡೆಯೇ ಆಗಿರಬಹುದು. ದಾನಗಳನ್ನೂ ಪದ್ಯದಲ್ಲಿಯೆ ವಿವರಿಸಿದುದೊಂದು ಇಲ್ಲಿಯ ವಿಶೇಷ. ಅದರ ಕೆಲ ಪದ್ಯಗಳು :

ಮಿಗೆ ತೇಜಂ ಪೆಱಗರ್ಗೆ ಸೈರಿಸುವನೇ ಮಿತ್ರಂ
ದಿಟಕ್ಕೆಂದು ಭಾ
ನುಗೆ ಸೈರಿಪ್ಪನುದಾತ್ತದಾನಗುಣಮಂ ಸಂತಾನಮೆಂದಳ್ಕಱಿಂ
ನೆಗಳ್ದಾ ಕಲ್ಪಕುಜಕ್ಕೆ ಸೈರಿಸುವನುತ್ತುಂಗತ್ವಮಂ
ಗೋತ್ರಮೆಂ
ದಗದೊಳ್ ಸೈರಿಪನುಂತೆ ಸೈರಿಸುವನೇ ಕಾದಂಬಕಂಠೀರವಂ ||

---

* Ep. Car. VIII, ಸೊರಬ 179.

ಧರೆಯೆಲ್ಲಂ ನವಗಂಧಶಾಳಿವನದಿಂದಂ ರಮ್ಯಮಾದಂ ಸರೋ
ವರಮೆಲ್ಲಂ ಕುಮುದೋತ್ಪಳಾಂಬುರುಹದಿವ್ಯಾ
ಮೋದದಿಂ ಸೇವ್ಯಮು
ರ್ವಿರುಹಾನೀಕಮುಮೆಲ್ಲಮುತ್ತಮಫಳವ್ರಾತಂಗಳಿಂ ರಮ್ಯಮಂ
ನರರೆಲ್ಲಂ ಸುಚರಿತ್ರರೂರ್ಜಿತಯಶರ್ಪುಷ್ಪಾವತೀ
ಗ್ರಾಮದೊಳ್ ||

ರಮ್ಯಮೆನಿಪ್ಪೀ ಧರೆ ಜೀ
ಯಯ್ಯನುತ್ತಂ ಪೊಗಳೆ ಸ[ಗ]ಳ್ದ ಕಾಮಮಹೀಶಂ
ಕಯ್ಯಡಿವಳ್ಳಿಯುನಾದಾ
ಮಯ್ಯನ ರಾಮೇಶ್ವರಕ್ಕೆ ಕೊಟ್ಟಂ ಮುದದಿಂ ||

[1]ಮನೆಯಂ[2] ಮೇಲಾಳಿಕೆ ಮಂ
[3]ತ್ತನೆಯ[4] ವಣಿವಾಯ ಸುಂಕದರ್ಶನಮೆಂಬೀ
ಬಿನ್ನಣದ ತೆಱ[5]ಯಿನದಱೊಳ್[6]
[7]ಪನೆನಿ[8] ತಪ್ಪಡಮುಮಂ [9]ಶಿರಿ[10]ಗೊಸೆದಿತ್ತಂ ||

---

೧-೨ ಮನ್ನೆಯು
೩-೪ ತ್ತನ್ನೆಯು
೫-೬ ಯುದಱೊಳು
೭-೮ ಪೊನ್ನನಿ.
೯-೧೦. ಗಿರಿಶಂ— ಎಂಬವುಗಳ ತಪ್ಪುಗಳಾಗಿರಬಹುದೇ ?

## ೧೦೫. ತ್ರಿಭುವನಶಕ್ತಿ

(೧೧೯೦)

ಚಿಕ್ಕನಾಯಕನಹಳ್ಳಿ ತಾಲೂಕಿನ ಬೂದಿಹಾಳು ಗ್ರಾಮದ ಒಂದು ಶಾಸನ (೧೧೯೦)ದ[1] ಕೊನೆಯಲ್ಲಿ ಹೀಗೆ ಬರುತ್ತದೆ :

"ತ್ರಿಭುವನಶಕ್ತಿ ಬರೆದ ಶಾಸನ; ರೂಹರಿ ಬೊಮ್ಮೋಜನ ಮಗ ಸುರಿಯಾಚಾರಿ ಬರೆದ."

—ಇಲ್ಲಿ, ಬರೆದ ಎಂಬುದು ಮೊದಲ ಸಲ 'ಕರ್ತೃತ್ವ'ವನ್ನೂ ಎರಡನೆಯ ಸಲ 'ಲೇಖಿತ್ವ'ವನ್ನೂ ಸೂಚಿಸುವುದು ಸ್ಪಷ್ಟವಿದೆ. ವೀರ ಬಲ್ಲಾಳನ ಆಳಿಕೆಯಲ್ಲಿ ದಮ್ಮೇಶ್ವರ ದೇವಾಲಯಕ್ಕೆ ಕೊಟ್ಟ ಕೊಡುಗೆ ಗಳನ್ನು ಉಲ್ಲೇಖಿಸಿರುವ ಈ ಶಾಸನದ ಕೆಲವು ಪದ್ಯಗಳಿವು[2] :

ಕಪ್ಪಮನಿತ್ತು ಕಂಡು ಬೆಸಕೆಯ್ದನೆ ತಾಂ ಸುಜನಂ ಬಳಿಕ್ಕವಂ
ತಪ್ಪಡವೊಪ್ಪಗಿಂತಿನಿತನೊಲ್ಲದೆ ಬಲ್ಲಿದೆನೆಂದ ಗರ್ವವಾ
ಗಿಪ್ಪನ ಬಂಟನೇೞಿಸುತೆ ಪಾಡಿಸುತಂ ಸೆಣಸುತ್ತೆ ಬಪ್ಪನಂ
ತೊಪ್ಪನೆ ಪೊಯ್ದನೆಯ್ದೆ ಸಿಡಿಲಂತವೆ ಬಲ್ಲೆಯನೇಂ
ಪ್ರತಾಪಿಯೊ ||

ಸಿಂದದೊಳೊಪ್ಪಿ ತೋರ್ಪ ಪುಲಿಯಾ ಹೊಳೆದಪ್ಪುದೇ
ವೀರಬಲ್ಲುವಾ
ಬಂದನೆ ಸೂಂಕಿ ಕೊಂಡ ದೆಸೆಯೊಳ್ ಮಿಗುತಂದು
ಬಿಲ್ಲು ...............

1 Ep Car. XII, ಚಿ. ನಾ. ಹ. 8.

2 ಈ ಪದ್ಯಗಳು ಚಿ. ನಾ. ಹ. 16 ರಲ್ಲಿಯೂ ಇವೆ.

ಎಂದಿರದೊಂದೆ ನೇಣೊಳನಿತುಂ ತುರಗಾವಳಿ
ನೂಂಕಿ ತಪ್ಪದೀ
ಬಂದೆಲಸೂಜೆಯಾಯ್ತೆನುತೆ ಸಂಭ್ರಮದಿಂದವೆ
ಬೆಟ್ಟವೋಡಿದಂ ||

ಪಲತೆಱದ ಹುಯ್ಯಲ್ ರಂಜಿಸೆ
ಪಲತೆಱದೋಜೆಗಳ ತತಿಯೊೞಾಸನಗತಿಯೊೞ್
ಪಲತೆಱದ ಮುಷ್ಟಿಯೊೞ್ ನಿ
ಪುಲವೆನೆ ತಿೞಿಪಲ್ಕೆ ಬಿಟ್ಟದೇವಂ ಬಲ್ಲಂ ||

# ೧೦೬. ಸೋಮನಾಥಪಂಡಿತ

(೧೧೯೦)

ವಿಜಾಪುರ ಜಿಲ್ಲೆಯ ಹಿರೇಬೇವಿನೂರು ಗ್ರಾಮದ ಒಂದು ಶಾಸನವನ್ನು[1] ಸೋಮನಾಥಪಂಡಿತನು ರಚಿಸಿದ್ದಾನೆ. ಯಾದವ ಭಿಲ್ಲಮನ ಮಂತ್ರಿ ಮಾಯಿದೇವನ ಅಧಿಕಾರಿ ಸಾವಿದೆಲ್ಲ ಬೊಪ್ಪಣ ನಾಯಕನ ಮಡದಿ 'ಕ್ಷಿತಿರುಹನೋಂಪಿ'ಯನ್ನಾಚರಿಸಿದಾಗ, ಆತನು ನಾನಾತೆರ ಮರಗಳನ್ನು ನಟ್ಟು 'ಧರ್ಮ್ಮಸಂಘ'ಯನ್ನು ನೆರಹಿ ಅನೇಕರಿಗೆ ವೃಕ್ಷದಾನ ಮಾಡುತ್ತಾನೆ. ಆಗ 'ಶಾಸನಪೇಳ್ದ ಬೆಡಗಿನ ಸೋಮನಾಥಪಂಡಿತರಿಗೂ' ಒಂದು ದಾನ ಸಲ್ಲುತ್ತದೆ. ಇದರಿಂದ ಈ ಸೋಮನಾಥನು ಬೆಡಗಿನ ಕವಿಯೆಂದು ಹೆಸರಾಗಿದ್ದನೆಂದು ತೋರುತ್ತದೆ.

ವಿಜಾಪುರದ ಪ್ರಾಚ್ಯವಸ್ತುಸಂಗ್ರಹಾಲಯದಲ್ಲಿಡಲಾಗಿರುವ ಇನ್ನೊಂದು ಶಾಸನವನ್ನೂ[2] ಈ ಕವಿ ರಚಿಸಿರುವನು. ಅದರಲ್ಲಿಯ ವರ್ಣನೆಯ ವಿವರಣೆಗಳಿಂದ ಮೂಲತಃ ಕಿಱಯಿಂಡಿ (ಈಗಿನ ಇಂಡಿ ತಾಲೂಕಿನ ಚಿಕ್ಕಿಂಡಿ) ಗ್ರಾಮದ್ದೆಂದು ಕಂಡುಬರುವ ಕ್ರಿ. ಶ. ೧೧೯೬ ರ ಈ ಶಾಸನವನ್ನು 'ಬೆಡಗಿನ ಸೋಮ' ಎಂಬ ಹೆಸರಿನಿಂದ ರಚಿಸಿದ್ದಾನೆ. ಈ ಹೆಸರುಗಳಲ್ಲಿಯ ಸಾರೂಪ್ಯ, ರಚನಾ ಕಾಲದ ಅತಿಸಾಮೀಪ್ಯ, ಪ್ರಾದೇಶಿಕ ಏಕತೆ ಇವುಗಳು ಹಿರೇಬೇವಿನೂರ ಸೋಮನಾಥಪಂಡಿತ ಹಾಗೂ ಚಿಕ್ಕಿಂಡಿಯ ಸೋಮ ಅಭಿನ್ನರೆಂಬುದನ್ನು ದೃಢಪಡಿಸುತ್ತವೆ. ಕಿಱಯಿಂಡಿಯ ದೋಣರ ದಾಸನ ಮೊಮ್ಮಕ್ಕಳಾದ ಚೀಲ ಓಲ ಕೇತರೆಂಬವರು ಬಂದೇಶದೇವರಿಗೆ ಹೊಲಮನೆಗಳನ್ನು ಧಾರೆಯೆರೆದು ಕೊಟ್ಟರೆಂಬುದನ್ನು ಈ ಶಾಸನವು ತಿಳಿಸುತ್ತದೆ. ಕೊನೆಯ :

---

1 ಶಿಲಾಶಾಸನಗಳ ಕೆಲವು ಕನ್ನಡ ಕವಿಗಳು (ಶ್ರೀನಿವಾಸ ರಿತ್ತಿ, ಎಂ. ಎ.): ಕ. ಸಾ. ಪ. ಪ. ೪೩-೩, ಡಿಸೆಂಬರ್ ೧೯೫೮. Bk. 36 of 1937-38.

2 Inscription in Northern Karnatak and Kolhapur State [late Sri. K. G. Kundangar].

ಕೇತೋಜಂ ಬಮ್ಮೋಜಂ
ನೂತನಮನುವಿಶ್ವಕರ್ಮರೆಂಬರ್ಕಡದರ್
ಖ್ಯಾತಂ ಪೆಡಗಿನ ಸೋಮಂ
ಸಾತಿಶಯೋಕ್ತಿಯೊಳೆ ಪೇಳ್ದನೆನೆ ಮೆಚ್ಚದರಾರ್ ||

ಎಂಬ ಕಂದ ಪದ್ಯದಲ್ಲಿ ಕಂಡರಣೆಕಾರರ ಮತ್ತು ತನ್ನ ಹೆಸರುಗಳನ್ನು ಶಾಸನಕವಿ ಹೇಳಿಕೊಂಡಿದ್ದಾನೆ. ಎರಡೂ ಶಾಸನಗಳಿಂದ ಕೆಲವು ಮಾದರಿ ಪದ್ಯಗಳನ್ನು ಇಲ್ಲಿ ಎತ್ತಿಕೊಟ್ಟಿದೆ :

ಹಿರೇ ಬೇಗೂರು

ಸುರಪತಿಯಿರ್ದ ದೇವಸಭೆ ಪಂಕಜವಿರ್ದ ಸರೋಜಷಂಡವಾ
ಸುರತರುವಿರ್ದ ನಂದನವನಂ ಹರಿಯಿರ್ದ್ದಮೃತಾಬ್ಧಿಯೊಪ್ಪುವಂ
ತಿರೆ ನೃಪಮೇರು ಭಲ್ಲಮನಮಾತ್ಯಶಿಖಾಮಣಿ ಮಾಯಿದೇವನಾ
ದರಿಸುವ ಮಂತ್ರಿ ಬೊಪ್ಪಣಜಮೂಪತಿಯಿರ್ದೊಡೆ-
ಯಿಂತಿದೊಪ್ಪುಗುಂ ||

ವ್ರತಸಾರಸಮುಚ್ಚಯದೊ
ಳ್ಕ್ಷಿತಿಯೊಳ್ಪೇಳೆನಿಪ ನೋಂಪಿಯೊಳ್ವಂತನಿತಂ
ಸತತಂ ನೋಂತೊಲವಿಂದಂ
ಕ್ಷಿತಿರುಹವಿದುವೊಂದು ನೋಂಪಿಯುಂಟೆನೆ ಕೇಳ್ದಳ್ ||

ಪಲವುಂ ವೇದದ ಶಾಸ್ತ್ರದಾಗಮದ ವಿದ್ಯಾಖ್ಯಾಪಿ ವಿಪ್ರರ್ಕಳಿಂ
ದಳಿಯಿಂ ಕೋಗಿಲೆಯಿಂ ಶುಕಪ್ರಕತಿಯಿಂ ಪೌಂಡ್ರೇ[1]ಕ್ಷು
ದಂಡಂಗಳಿಂ

1 ಮೂಲ : ಪೌಡ್ರೇಕ್ಷು. ರತ್ನ : ಪೌಡ್ರೇಕ್ಷು.

ಜಲರ್ದಂಭೋರುಹ ಷಂಡದಿಂ ಫಲವುಮುದ್ಯಾನಂಗಳಿಂ ಶಿಷ್ಟಸಂ
ಕುಳದಿಂದೊಪ್ಪುವ ಬೇವಿನೂರ್ಗೆ ದೊರೆಯೇ
ಭೂಲೋಕದೊಳ್ಪಟ್ಟಣಂ ||

## ಚಿಕ್ಕುಂಡಿ

(೩೬"×೧೯" ಎಡೆಯನ್ನಾವರಿಸಿದ ೫೪ ಸಾಲುಗಳ ಈ ಶಾಸನದಲ್ಲಿ ೨೬ ಕನ್ನಡ ಪದ್ಯಗಳುಂಟು.)

ಮೂವತ್ತಾಱುಂ ಬಾಡಂ
ಭೂವನಿತಾವದನಮುಕುರವಾ ಕಂಪಣದೊಳ್
ದೇವೇಂದ್ರಪುರಮನಿಳಿಪ್ಪುದು
ಭಾವಿಸೆ ಕಿಱುಯುಂಡಿಯುದಱ ಮಹಿಮೋನ್ನತಿ ತಾಂ ||

[ಔ*]ಪಾಸನಾಗ್ನಿಹೋತ್ರಿಗ
ಳಾಪದದೊಳು ನೀರ ಘಟ್ಟಿಯುಂ ತಳದೊಳು ತ
ಪಾರ್ಗ ಪತಿಹಿತೆಯುರ್ಸತಿಯು
ಶಾಪಾನುಗ್ರಹಸಮರ್ಥರಲ್ಲಿಯ ಹಾರ್ವರ್ ||

ಹರಿಗೃಹದಿಂ ಹರಗೃಹದಿಂ
ಸುರಗೃಹದಿಂದರುಹಗೃಹದೆ ಬೌದ್ಧಾಲಯದಿಂ
ಗೊರವರ ಸವಣರ ಬೌದ್ಧರ
ನೆರವಿಗಳಿಂದಿಂಡಿ ನಾಡೆ ಸೊಗಯಿಸಿತೋರ್ಕುಂ ||

ಆ ಕಿಱುಯುಂಡಿಯಲ್ಲಿ,

ಬೋಡರ ದಾಸನ ಕುಲದೊಳು
ನೋಡಿರೆ ಸೋಮಯ್ಯನೊಗೆದನಾತನ ಸತಿ ತಾಂ
ನೋಡ ಪತಿಬ್ರತೆ ಸದ್ಗುಣಿ
ರೂಢಿಯ ಹೊನ್ನಬ್ಬೆಯೆಂಬಳಬಳಾರತ್ನಂ ||

# ೧೦೩. ಜನ್ನಯ್ಯ

( ೧೧೯೧ )

ಚಿನ್ನರಾಯಪಟ್ಟಣದ ಆನೆಕೆರೆಗ್ರಾಮದಲ್ಲಿ ಶ. ವ. ೧೧೧೩ ರ ತಾಮ್ರ ಶಾಸನವೊಂದು* ಸಿಕ್ಕಿದೆ. ಕಿರಿದಾದ ೮ ಪತ್ರಗಳಲ್ಲಿ ೨೧೫ ಸಾಲುಗಳಾಗಿ ಹಬ್ಬಿದ ಈ ಶಾಸನಕ್ಕೆ 'ಮಲಪರೊಳಗಂಡ' ಎಂಬ ಅಂಕಿತವಿದೆ. ಅದಕ್ಕೆ ಪೂರ್ವದಲ್ಲಿ 'ಜನ್ನಯ್ಯನ ಕವಿತೆ, ದಾಸಣ್ಣನ ಬರಹ, ಮಲ್ಲೋಜನ ಕಂಡರಣೆ' ಎಂದಿದೆ. ಮಹಾಕವಿ 'ಜನ್ನ'ನ ಕವಿತೆ ಇದೆಂದು ಗುರುತಿಸಲಾಗಿದೆ.

ಕಬ್ಬಹು ನಾಡೊಳಗಣ ಆನೆಗನಗ್ರಾಮವನ್ನು (ಕೇಶವಾಪುರವೆಂಬ ಅಪರನಾಮದ ಪುರವನ್ನು) ನಾನಾ ಗೋತ್ರದ ಮಹಾಜನಂಗಳಿಗೆ ಅಗ್ರಹಾರಮಾಡಿ ಧಾರೆಯೆರೆದುದನ್ನು ಉಲ್ಲೇಖಿಸುವ ಈ ತಾಮ್ರಪಟವು ಸಂಪೂರ್ಣವಾಗಿ ಕನ್ನಡದಲ್ಲಿಯೇ ರಚಿತವಾಗಿದೆ. ಮೊದಲು ವರಾಹ ಸ್ತುತಿ ಪದ್ಯ :

ಶ್ರೀವಧುವಿಂಗೆ ಪೀಲಿದಟಿಯುರ್ವವೊಲಿರ್ದುದು ಕೋಡೊಳಿರ್ದ ಧಾ
ತ್ರೀವಳಯಂ ಸಮುದ್ರನದು ಝಲ್ಲರಿಯುರ್ವವೊಲಿರ್ದುದಾಂತದಂ
ಷ್ಟ್ರಾವರಕೋಟಿ ತೆತ್ತಿಸಿದ ಮುತ್ತಿನ ಶಾವುವೊಲಿರ್ದುದಿಂತು ಸ
ದ್ಭಾವಮನಾಳ್ದ ಸೂಕರವರಂ ಪೊರೆಗೇಗಿವಿ ದುರ್ಗಮಲ್ಲನಂ ||

ಮಾದರಿಗೊಂದೆರಡು ಪದ್ಯ-ಗದ್ಯ :

ಕದನಪ್ರೋದ್ದಂಡ ಭೂಮಂಡಳಪತಿಗಳ ಬೇರ್ವೇರ್ಗೆ
ಬೆನ್ನೀರಪೊಯ್ಯ
ದುದು ಕಾಲ್ಪಿಂ ಬಾಳನೀರ್ ಸಂಗರಸಮಯ-
ದೊಳಿಂತಂತವಷ್ಟಂಭದಿಂ ತೂ

---

* Ep. Car V-i, ಚನ್ನರಾಯಪಟ್ಟಣ 179.

ಗಿದ ಬಾಳ್ ಬಾಳ್ಗೊತ್ತು ಬಾಳ್ವಗ್ಗಡದ ಬಿರುದರಂ ತೂಗಿ
ತುತ್ತಿಟ್ಟುದೇಂ ತಾ
ಳ್ದಿದನೊ ವಿಕ್ರಾಂತಮುಂ ಯಾದವಕುಳತಿಳಕಂ
ವೀರಬಲ್ಲಾಳದೇವಂ ||

ತ್ರಿಭುವನ ಕರ್ಣಾಭರಣ
ಪ್ರಭದೊಳ್ ಕರ್ಣಾಟಕುಲದೊಳವರಿವರುವರೆಂ
ದುಭಯಕುಲಶುದ್ಧಿಗಾರುಮ
ನಭಿವರ್ಣಿಸವೇಡ ಮಾಚಿರಾಜನ ಸಭೆಯೊಳ್ ||

ಶ್ರೀಮನ್ಮಹಾಪ್ರಧಾನಘನಬುಧನಿಧಾನಂ, ಸರ್ವಾಧಿಕಾರಿ ಸಕಳೋಪಕಾರಿ, ಕರಣಾಗ್ರಗಣ್ಯಂ ಸಾಕ್ಷರಶರಣ್ಯಂ, ಋಗ್ವೇದಚೂಡಾಮಣಿ ಸತ್ಕುಲ ನಭೋಮಣಿ, ಗೋತ್ರಪವಿತ್ರಂ ಕವಿಜನಮಿತ್ರಂ, ಶ್ರೀಮತ್ಪ್ರಸನ್ನ ಕೇಶವ ದಿವ್ಯಶ್ರೀಪಾದಪಲ್ಲವೋತ್ತಂಸಂ ಸುಜನಾವತಂಸಂ ಶ್ರೀಕರಣದ ಹೆಗ್ಗಡೆ ಮಾಚಯ್ಯಂಗಳು.

# ೧೧೮. ಅಗ್ನಿಶರ್ಮ

(೧೧೯೨)

ಗದುಗಿನ ತ್ರಿಕೂಟೇಶ್ವರ ದೇವಸ್ಥಾನದಲ್ಲಿ ಒಂದು ಸಂಸ್ಕೃತಶಾಸನವಿದೆ. ಅದರ ಕಾಲ ಶಕವರುಷ ೧೧೧೪ ಎಂದು ಉಕ್ತವಾಗಿದೆ. ಈ ದತ್ತಿ ಶಾಸನದ ಕಾವ್ಯವನ್ನು ಹೊಯ್ಸಳ ವೀರಬಲ್ಲಾಳನ ಆದೇಶದಂತೆ ಅಗ್ನಿ-ಶರ್ಮನು ಬರೆದನೆಂದು ಅಲ್ಲಿ ಹೇಳಿದೆ. 'ಸಾರಸ್ವತ ಸಾರ್ವಭೌಮ' ಎಂಬ ಪ್ರಶಸ್ತಿ ಅಗ್ನಿಶರ್ಮನಿಗಿದ್ದಂತೆ ತಿಳಿಯುತ್ತದೆ.

ಬಲ್ಲಾಳದೇವನೃಪತೇರಾದೇಶಾಗ್ನಿಶರ್ಮಣಾ ಲಿಖಿತಾ |
ಶಾಸನಪದ್ಧತಿರೇಷಾ ಸಾರಸ್ವತಸಾರ್ವಭೌಮೇನ ||

ಕವಿಯ ಹೆಸರು ಬಿರುದುಗಳನ್ನು ತಿಳಿಸುವ ಈ ಆರ್ಯಾಗೀತಿಕೆಯನ್ನೊಳಗೊಂಡು ೪೭ ಶ್ಲೋಕಗಳು ಈ ಶಾಸನದಲ್ಲಿವೆ. ಬೆಳ್ವಲದ ಹೊಂಬಾಳಲು ಎಂಬ ಊರನ್ನು ತ್ರಿಕೂಟೇಶ್ವರನಿಗೆ ದತ್ತಿಯಾಗಿ ಬಿಟ್ಟುದನ್ನು ಹಾಗೂ ಶಾಸನಕಾಲವನ್ನು ಮಾತ್ರ ಗದ್ಯದಲ್ಲಿ ಹೇಳಿದೆ. ಹೊಯ್ಸಳ ಮನೆತನದ ಅರಸುಗಳ ಶೌರ್ಯಪ್ರತಾಪವಿಜಯಗಳ ವರ್ಣನೆ, ತ್ರಿಕೂಟೇಶ್ವರದ ಸ್ಥಾನಾಚಾರ್ಯನಾದ ಕಾಳಾಮುಖಸಿದ್ಧಾಂತಿಚಂದ್ರಭೂಷಣಪಂಡಿತನ ವರ್ಣನೆ ಇವು ಶ್ಲೋಕರೂಪದಲ್ಲಿವೆ.

# ೧೦೯. ಮಾಳಿಯ

( ೧೧೯೨ )

ಶಿಕಾರಿಪುರದ ೧೦೫ ನೆಯ ಶಾಸನವನ್ನು ಬರೆದುದಾಗಿ ತಿಳಿಯುತ್ತದೆ. ಶಾಸನದ ಕೊನೆಯಲ್ಲಿರುವ "ಕವಿರಾಜರ ಪಂಡಿತರ ಮಾಳಿಯನ ಕವಿತೆ" ಎಂದಿರುವುದರಿಂದ ಮಾಳಿಯನೆಂದು ತಿಳಿಯುತ್ತದೆ. ಈ ಶಾಸನ ೧೧೯೨ ರಲ್ಲಿ ಬರೆಯಲ್ಪಟ್ಟಿದೆ. ಒಂದು ಪದ್ಯ :

ತೆರಳದರಾತಿ ಭೂಭುಜರ ನಿಟ್ಟೆಲುವಂ ಸಲೆ ಕೇದು ಬೊಟ್ಟನಿ-
ಟ್ಟುರುಳ್ವ ಶಿರಂಗಳಂ ಬಲುಗರುಳ್ಗಳೊಳಾಗಳೆ
ಕೋದು ಕಂಠದೊಳ್
ಧರಿಸಿಕಪಾಳಮುಂ ಪಿಡಿದು ನೆತ್ತರನೀಂಟಿ ಮನೋನುರಾಗದಿಂ
ಧುರದೊಳೆ ಖಡ್ಗಕಾಳ ಕುಣಿದಾಡುವಳೀ
ನರಸಿಂಹ ಭೂಪನಾ || ೧ ||

# ೧೧೦. ಹರಿಹರಸೂರಿ

(೧೧೯೪)

ವೀರಬಲ್ಲಾಳನ ಕಾಲದಲ್ಲಿ ಮಾಚಿರಾಜಯ್ಯನೆಂಬ ದಂಡನಾಯಕನು ತನ್ನ ತಮ್ಮನು ಕಟ್ಟಿಸಿದ ಮಧುಸೂದನ ದೇವಾಲಯಕ್ಕೆ ಕೊಟ್ಟ ಕೊಡುಗೆಗಳನ್ನು ತಿಳಿಸುವ ಅರಸಿಕೆರೆ ತಾಲೂಕಿನ ಬೊಮ್ಮನಹಳ್ಳಿಯ ಕ್ರಿ. ಶ. ೧೧೯೪ರ ಶಾಸನದಲ್ಲಿ[1],

ಹರಿಹರಸೂರಿ ಸೀಗುರಿಯ ಕಾಮನ ತಮ್ಮನುಮೇಶದತ್ತ ವಾ
ಗ್ವಿರಚಿಸಿದಂ ತ್ರಿವಿಕ್ರಮ ಕವೀಶ್ವರನೂರ್ಜಿತವಾಣಿ ತಿದ್ದಿ ತಾಂ
ಬರೆದನುಪೇತಲಕ್ಷಣಗಣಂ ಗುಣಿ ದಾಸಮನೊಪ್ಪುವಂತೆ ಕಂ
ಡರಿಸಿದನಿಂತು ಶಾಸನದೊಳಾದುದಯಂ ಧರೆಗುತ್ತರೋತ್ತರಂ ||

ಎಂಬ ಪದ್ಯವು ಸೀಗುರಿಯ ಕಾಮನ ತಮ್ಮನಾದ ಹರಿಹರಸೂರಿ ಶಿವಪ್ರಸಾದವಾಣಿಯಿಂದ ಈ ಶಾಸನವನ್ನು ರಚಿಸಿದನು; ಶ್ರೇಷ್ಠವಾಣಿಯುಳ್ಳ ತ್ರಿವಿಕ್ರಮ ಕವೀಶ್ವರನು[2] ತಿದ್ದಿ ಬರೆದನು; ದಾಸಮನು ಕಂಡರಿಸಿದನು ಎಂದು ಹೇಳುತ್ತದೆ. ಈ ಶಾಸನದಿಂದ ಕೆಲವು ಪದ್ಯಗಳನ್ನು ಇಲ್ಲಿ ಎತ್ತಿಕೊಟ್ಟಿದೆ :

ಕೇಳ ವಸಂತ ಬಾಳಸಹಕಾರದ ತಣ್ಣೆಳಲಾಶ್ರಿತಾಳಿಗಾ
ಭೀಳ ಲಯಾಹಿ ನಿಷ್ಠುರ ಘನೌಘದ ಮೆಯ್ನೆಳಲುದ್ಧತಾರಿಗು
ನ್ಮೀಳಿತ ಪುಂಡರೀಕದ ನೆಳಲ್ ಜಯಲಕ್ಷ್ಮಿಗೆನಿಪ್ಪ ವೀರಬ
ಲ್ಲಾಳನ ತೋಳ ಬಾಳನೆಳಲಾದುದು ಧಾತ್ರಿಗೆ ವಜ್ರಪಂಜರಂ ||

---

1 Ep. Car. V-2, ಅರಸಿಕೆರೆ 118.

2 ಈತನೂ ಶಾಸನಕವಿ— ತ್ರಿವಿಕ್ರಮಪಂಡಿತ ನೋಡಿರಿ.

ಕರಚಕ್ರಂ ಮುರವಿದ್ವಿಷಂಗೆ ಬಳವಿದ್ವಿಷ್ಟಂಗೆ ವಜ್ರಂ ಭಯಂ
ಕರ ಬಾಳಪ್ರಬಳೇಕ್ಷಣಂ ಪುರಹರಂಗೊರ್ವಂಗೆ ಕಾಯ್ಪುಗ್ರಕೇ
ಸರಿಗುಚ್ಚಂಡಸಖಂ ಪ್ರಧಾನಮದುವೋಲ್ ಬಲ್ಲಾಳಭೂಪಂಗಿಳಾ
ಭರಣಂ ದ್ರೋಹಘರಟ್ಟ ಮಾಚಣನೆ ನಚ್ಚಿಂದುಂ
ಜಯಕ್ರೀಡೆಯೊಳ್ ||

ತಱುಗಿದ ನಂದನಂ ಪರಿವ ಕಾಲ್ವೆ ಕಡಲ್ಗಿವೆ ತೋಡೆನಿಪ್ಪ ಪೆ
ರ್ಗೆಱೆ ಬಳಸಿರ್ದ ಪೆರ್ವೆಳಸು ಸಂದಣಿವೆತ್ತ ಜನಂ ವಿಳಾಸದಿಂ
ಮೆಱೆವಮರಾಲಯಂ ಬಹುಗೃಹಂಗಳ ಸೊಂಪಿವಱಿಂದೆ ಚೆಲ್ವುಕ
ಣ್ದೆಱೆದವೊಲೊಪ್ಪುಗುಂ ಪುರವರಂ ಮಧುಸೂದನ
ದಂಡನಾಥನ ||

# ೧೧೧. ಬಾಚಯ್ಯ : ವೀರಬಲ್ಲಾಳ

(೧೧೯೪)

ಬೇಲೂರು ತಾಲೂಕಿನ ಮಾರೇನಹಳ್ಳಿಯ ಹೊಯ್ಸಳ ವೀರಬಲ್ಲಾಳನ ಕಾಲದ ಶಾಸನದಲ್ಲಿ[1], ಹೊಯ್ಸಳ ವಂಶವರ್ಣನೆ ವೀರಬಲ್ಲಾಳನ ಆಳಿಕೆಯ ಉಲ್ಲೇಖಗಳ ೧೪ ಪದ್ಯಗಳ (ಅವುಗಳಲ್ಲಿ ೨ ಸಂಸ್ಕೃತ) ತರುವಾಯ ಶಾಸನ ಮಧ್ಯದಲ್ಲಿಯೇ 'ಬಾಚಯ್ಯನು ಹೇಳ್ದ ಪದ್ಯ' ಎಂದು ಬರುತ್ತದೆ. ಮುಂದೆಯೂ ಗದ್ಯದ ಕೊನೆಗೆ ಮೂರು ಪದ್ಯಗಳುಂಟು. ಆ ಮೂರು ಪದ್ಯಗಳು ಮಾತ್ರವೇ ಬಾಚಯ್ಯನವೆಂದು ಕೆಳಗಣ ಅವತರಣಿಕೆಯಿಂದ ಸ್ಪಷ್ಟವಾಗಿ ಗೋಚರಿಸುತ್ತದೆ. ಮೊದಲಿನ ೧೪ ಪದ್ಯಗಳು ಅನ್ಯಕೃತಗಳು-ಬಹುಶಃ ಬೇರೆ ಶಾಸನದಿಂದ ಎತ್ತಿಕೊಂಡವು ಇರಬೇಕು.

"ತತ್ಪಾದ ಪದ್ಮೋಪಜೀವಿ ಜಿನಕನ ಮಾರವ್ವೆಯನ್ವಯವೆಂತೆಂದಡೆ—

ಬಾಚಯ್ಯನು ಹೇಳ್ದ ಪದ್ಯ :

ಜನನಿಧಿ ಕೇತಿಮಯ್ಯನ ಮಗಂ ವಿಭು ರಕ್ಕಸಮಲ್ಲನಯ್ಯನಾ
ರ್ಜನ ಕಣಿ ಕೇಸಿರಾಜನ ಮನಃಪ್ರಿಯೆ ಸೋವಲದೇವಿ ಪೆತ್ತಪೆಂ
ಪಿನ ಸುತೆ ಸಾತಿಕವ್ವೆ [ತನ* ?]ಗೆವ್ವೆಯೆನಲ್
ಬಬಬಾಪ್ಪ ನೋಂತರಾ
ರ್ಜನಕನುದಾರೆ ಮಾರವೆವ್ವೊಲೀ ಚತುರಬ್ಧಿ ಪರೀತ
ಧಾತ್ರಿಯೊಳ್ ||

ಜಂಗಮಕಲ್ಪಲತೆ[ಯೆ]ಫಲ
ಮಂ ಗೆಡೆಗೊಂಡವ್ವೊಲುದಾರೆ ಮಾರವೆ ಪೆತ್ತಳ್

---

1 Ep. Car. V-2, ಬೇಲೂರು 140.

ತುಂಗಯಶವೆಂಬ ಹೊಸವೆ
ಳ್ದಿಂಗಳ ಬಿತ್ತಿಸಿಪ ಭದ್ರನಂ ಸಂದನನಂ ||

ಅನುದಿನವುತ್ತರೋತ್ತರ ಶುಭೋದಯಮಂ ಪಡೆದೀಗೆ ರಾಗದಿಂ
ಬೆನಕನುದಾರಮಾನಗ[ಮ]ನೇಕಸುರೇಂದ್ರನರೇಂದ್ರರುಂದ್ರ ಕಾಂ
ಚನಮುಕುಟಾಳಿ[ಯಾ]ರಣರಣತ್ಕೃತಿ ಘೂರ್ಣಿತನೂತ್ನರಕ್ನರ
ಶ್ಮಿ ನಿವೃತಪಾದಪೀಠನಿಕಟಂ ತ್ರಿಜಗದ್ಗುರು ಶಾಂತಲೇಶ್ವರಂ ||

# ೧೧೨. ಮಾರಮರಸ

( ೧೧೯೬ )

ಮೂಲತಃ ಕನ್ನಡನಾಡಿನ ಬಳ್ಳಾರಿ ಜಿಲ್ಲೆಯಲ್ಲಿದ್ದು ರಾಜ್ಯಪುನರ್ಘಟನ ಕಾಲಕ್ಕೆ[ಕ್ರಿ.ಶ. ೧೯೫೬]ತೆಲುಗು ನಾಡಿಗೆ ಸೇರಿದ ರಾಯದುರ್ಗ ತಾಲೂಕಿನ ನಾಗೇನಹಳ್ಳಿಯಲ್ಲಿರುವ ಒಂದು ಶಾಸನವನ್ನು[1] ಈತನು ರಚಿಸಿದ್ದಾನೆ. ಶಾಸನಕಾಲ ಕ್ರಿ. ಶ. ೧೧೯೬. ಶಾಸನದ ಬರೆಹ ಹೆಚ್ಚುಮಟ್ಟಿಗೆ ಕೆಟ್ಟು ಹೋಗಿದೆ. ಶಾಸನದ ಕೊನೆಯಲ್ಲಿ "ಈ ಶಾಸನಮಂ ಮಾರಮರಸಂ ಪೇಳ್ದಂ" ಎಂದೂ "ಕೋಳೂರ ಬಾಚಣ್ಣಂ ಬರೆದಂ" ಎಂದೂ ಇದೆ. ಈ ನಷ್ಟ ಶಾಸನದಿಂದ ಕೆಡದೆ ಇಡಿಯಾಗಿ ಉಳಿದಿರುವ ಮೂರು ಪದ್ಯಗಳನ್ನು ಇಲ್ಲಿ ಕೊಟ್ಟಿದೆ :

ಸುರತರುಗೆ ಪ. ಶಾ ... ದೆ
ವಿರಾಜಿಪಂತೆಸೆವ ಕಣಿಯುಕಲ್ಲಾ ನಾಡೊಳ್
ವರಚಂದೆಯ ಮಂಗಳಪುರ
ವಿರಾಜಿಸಿ[ತು*]ತಾಂ ಪೊದಳ್ದ ಸಿರಿಯೊದವಿಂದಂ ||

ವಾಮರಸಂಗಂ ತತ್ಪ್ರಿಯ-
ಕಾಮಿನಿ ನಾಗಲೆಗಮುದಯಿಸಿದನಖಿಳಗುಣೋ-
ದ್ದಾಮಂ ಸಿಂಗೆಯ ಹೆಗ್ಗಡೆ
ಭೂಮಿಸುತ[ಮಿಾನುತ] ನೊಲವಿಸಿಂದದಂ ಪಾಳಿಸುವಂ ||

ಕನ್ನೇಶ್ವರಭೈರವಗೃಹ
ಮನ್ನೆಗಳ್ದಿಂದೆ ಪೊಜಗೆಯೂರೊಳ್ ಗೃಹಮಂ
ಚೆನ್ನಮರೆ ಮಲ್ಲಿಕಾರ್ಜುನ
ಕನ್ನೆಜಿ ಮಾಡಿಸಿದನೊಸೆದು ಹೆಗ್ಗಡೆ ಸಿಂಗಂ ||

---

1 South Indian Inscriptions Vol. IX Part I, Gen. No. 298.

# ೧೧೩. ಸುಬ್ಬ

(೧೨ನೆಯ ಶತಮಾನ)

ಅನೇಕ ವರ್ಣನಾಪದ್ಯಗಳೂ ಕಾಲೋಲ್ಲೇಖವೂ ನಶಿಸಿ ಹೋಗಿರುವ ಚಾಳುಕ್ಯ ಭೂಲೋಕಮಲ್ಲನ ಆಳಿಕೆಯದೆಂದು ಮಾತ್ರ ಕಂಡು ಬರುವ ಒಂದು ಶಾಸನವು ಧಾರವಾಡ ಜಿಲ್ಲೆಯ ರಾಣೆಬೆನ್ನೂರ ತಾಲೂಕಿನ ಅಸುಂಡಿಯಲ್ಲಿದೆ.[1] ಅದರ ಕರ್ತೃ ಸುಬ್ಬ.

ಬರೆವರ ಮಿತ್ರಂ ಸುಬ್ಬಂ
ವಿರಚಿಸಿ[ಪೇಳ್ದ*]ಸೆವ ಗದ್ಯಪದ್ಯೋಕ್ತಿಗಳಿಂ
ಬರೆದಂ ಶಾಸನಮನಿದಂ
ಧರೆಯೊಳ್ ಬುಧರೊಲ್ದು ಪೊಗಳೆ ಲಲಿತಾಕ್ಷರದಿಂ||

ಸುಬ್ಬ ಕವಿಯೇ ಬರೆದವನೆಂದೂ ಅವನದು ಲಲಿತಾಕ್ಷರದ ಬರೆಹವೆಂದೂ ಮೇಲಣ ಪದ್ಯದಿಂದ ತಿಳಿಯುತ್ತದೆ. ಪಬುಂಡಿ [ಈಗಿನ ಅಸುಂಡಿ]ಯ ಗಾವುಂಡ ಬರ್ಮಗಾವುಂಡನು ಕಲಿದೇವಸ್ವಾಮಿಗೆ ಭೂಮಿದಾನವಿತ್ತುದನ್ನು ಶಾಸನ ಹೇಳುತ್ತದೆ. ಕೆಡದುಳಿದ ಭಾಗದ ಕೆಲವು ಪದ್ಯಗಳು ಇಂತಿವೆ :

ಸ್ಥಿರನದ್ರೀಂದ್ರದಿನಂಬುರಾಶಿಗಧಿಕಂ ಗಂಭೀರದಿಂ ದಾನದೊ
ಳ್ಪಿರಿಯಂ ಕಲ್ಪಮಹೀಜದಿಂ ಸುಚರಿತಪ್ರೋದ್ಯದ್ಗುಣವ್ರಾತದೊ
ಳ್ಪರಮಾರ್ಥಂ ಮನುಗುನ್ನತಂ ವಿಜಯವಿಕ್ರಾಂತಕ್ಕೆ ಸಿಂಹಾಧಿಕಂ
ಧರೆಯೊಳ್ಪೆರ್ಗಡೆ ಮಾಚಣಂ ವಿಬುಧಸೇವ್ಯಂ
ವಾಗ್ವಧೂಭೂಷಣಂ ||

1 ಶಿಲಾಶಾಸನಗಳ ಕೆಲವು ಕನ್ನಡ ಕವಿಗಳು (ಶ್ರೀನಿವಾಸ ರಿತ್ತಿ, ಎಂ. ಎ.)- ಕನ್ನಡಸಾಹಿತ್ಯಪರಿಷತ್ಪತ್ರಿಕೆ. ಸಂ. ೪೭, ಸಂ. ; ಡಿಸೆಂಬರ್ ೧೯೬೮.
B. K. 104 of 1932-33.

ವರತೇಜಃಪ್ರಭೆಯೊಳ್ ದಿನಾಧಿಪತಿಯಂ
ಭಾಸ್ವತ್ಕಳಾಶೇಷದೊಳ್
ದೊರೆವೆತ್ತಿರ್ದ ಶರನ್ನಿಶಾಪತಿಯ[ತಾ]ನೌದಾರ್ಯ
ದೊಳ್ ಕರ್ಣನಂ
ಸ್ಥಿರಧೈರ್ಯಕ್ಕೆ ಕುಳಾಚಳಸ್ಥಿರತೆಯಂ ವಿಕ್ರಾಂತದೊಳ್
ಸಿಂಹದೊಳ್
ದೊರೆಯಾದಂ ಜಡರೂರುಗರ್ಮೊರೆಯೆ ಪೇಳ್
ಶ್ರೀಬರ್ಮಗಾವುಂಡನೊಳ್ ||

# ೧೧೪. ಕೇಶವರಾಜ ಮತ್ತು ಸರಣ

( ೧೨೦೦ )

ಧಾರವಾಡ ಜಿಲ್ಲೆಯ ಹಿರೇಕೆರೂರ ತಾಲೂಕಿನ ಅಬಲೂರು ಎಂಬ ಗ್ರಾಮದ ಕ್ರಿ. ವ. ಸು. ೧೨೦೦ರ ಶಾಸನದ[1] ಕರ್ತೃತ್ವದ ಶ್ರೇಯಸ್ಸು ಸೇನಾಪತಿಯಾದ ಕೇಶವರಾಜನಿಗೂ ಶಿವಶರಣನಾದ ಸರಣನೆಂಬವನಿಗೂ ಹಂಚಿಹೋಗುವುದೆಂದು, ಆ ಶಾಸನದ ಕೊನೆಯಲ್ಲಿರುವ ಪದ್ಯದ ಸಕ್ಯ-ದ್ದರ್ಶನಕ್ಕೆ ಕಂಡುಬರುವ ಅರ್ಥದಿಂದ ತೋರುತ್ತದೆ. ಕವಿ ನಾಮನಿರ್ದೇಶವುಳ್ಳ ಆ ಪದ್ಯವಿದು :

ಕೇಶವರಾಜಚಮೂಪಂ
ಶಾಸನವಂ ಪೇಳ್ದ ನಂತದಂ ತಿರ್ದಿ ನಿರಾ-
ಯಾಸನೆ ಬರೆದ[ವ?] ನೀಶನ
ದಾಸಂ ಶಿವಚರಣಕಮಲಶರಣಂ ಸರಣಂ ||

'ತಿರ್ದು' ಎಂಬ ಶಬ್ದಕ್ಕೆ 'ಕುಂದುಕೊರತೆಗಳನ್ನು ಸರಿಪಡಿಸು' ತಪ್ಪುಗಳನ್ನು ಒಪ್ಪುಗೊಳಿಸು' ಎಂದರ್ಥವಾಗುವುದರಿಂದ ಸರಣನೂ ಈ ಕಾವ್ಯದ ರಚನೆಯ ಕೆಲಸದಲ್ಲಿ ತಕ್ಕಮಟ್ಟಿಗೆ ಪಾಲುಗಾರನೆಂದು, ಪೂರ್ಣವಾಗಿ ಸುಂದರವಾಗಿ ಅದನ್ನು ಮೂರ್ತಿಗೊಳಿಸಿದವನು ಕೇಶವರಾಜ ಚಮೂಪತಿ ಏಕೈಕನಲ್ಲವೆಂಬ ತಿಳುವಳಿಕೆಯಾಗುತ್ತದೆ. ಆದರೆ 'ತಿದ್ದು' ಎಂಬುದು ಇನ್ನೂ ಒಂದು ಅರ್ಥದಲ್ಲಿ ಬಳಕೆಯಲ್ಲಿದೆ: ಜತನದಿಂದ ಸುಂದರವಾಗಿ ಬರೆಯುವ ಕ್ರಿಯೆಯನ್ನೂ ಈ ಧಾತುವಿನಿಂದ ಹೇಳುತ್ತಾರೆ. ಈ ಕ್ರಿಯಾರ್ಥದಲ್ಲಿ ತಿದ್ದಿ-ತೀಡಿ ಎಂದು ಜೋಡು ಪದಗಳನ್ನೂ ಉಪಯೋಗಿಸುವುದುಂಟು. ಆ ಅರ್ಥವನ್ನೇ ಇಲ್ಲಿ ಅನ್ವಯಿಸಿಕೊಂಡು 'ತಿದ್ದಿ-ತೀಡಿ ಅಂದವಾಗಿ' ಬರೆದವನು ಸರಣ ಎಂದು ತಿಳಿಯುವುದು ಹೆಚ್ಚು ಯುಕ್ತವಾದುದೆಂದು ತೋರುತ್ತದೆ. ಇಲ್ಲಿ ಇನ್ನೂ ಎರಡು ಶಬ್ದಗಳಿರುವುದನ್ನು ಗಮನಿಸಬೇಕು ೧. ಅಂತದಂ,

---

1. Epi. Ind. Vol. V, Page 245.

೨. ನಿರಾಯಾಸನೆ. ಅಂತಿಪಂ ಎಂದರೆ, ಕೇಶವರಾಜನು ಹೇಗೆ ಹೇಳಿದನೋ ಹಾಗೆ ಅದನ್ನು, ನಿರಾಯಾಸನೆ ಎಂದರೆ ಆಯಾಸವಿಲ್ಲದೆ ಸಹಜವಾಗಿ ಒರೆದವನು ಸರಣನು ಎಂಬುದೇ ಈ ಪದ್ಯದ ಸಹಜ ಭಾವಾರ್ಥವೆಂದು ತಿಳಿಯುವುದು ಲೇಸು. ಆದುದರಿಂದ ಈ ಶಾಸನದ ಕರ್ತೃತ್ವದ ಶ್ರೇಯಸ್ಸನ್ನು ಕೇಶವರಾಜ ಚಮೂಪತಿಗೊಬ್ಬನಿಗೇ ಸಲ್ಲಿಸಬೇಕಾಗುತ್ತದೆ.

ಈ ಅಬಲೂರು ಶಾಸನವು ಚಂಪೂರೂಪದಲ್ಲಿ ಬರೆದ ಚರಿತ್ರ ಕಥನ ಕಾವ್ಯವೆಂದು ಹೇಳಬಹುದು. ವೀರಶೈವ ಧರ್ಮದ ಉದ್ಧಾರಕಶ್ರೇಣಿಯಲ್ಲೊಬ್ಬನಾದ, ದೇವಾಂಶಸಂಭೂತನೆಂದೂ, ಪವಾಡಪುರುಷನೆಂದೂ ಹೆಸರಾದ ಏಕಾಂತದ ರಾಮಯ್ಯನ ಸಮಗ್ರ ಚರಿತ್ರೆ ಈ ಶಾಸನದಲ್ಲಿ ಬಂದಿದೆ: ಅವತಾರದ ಹಿನ್ನೆಲೆಯಿಂದ ಆರಂಭಮಾಡಿ, ಆಲಂದೆಯಲ್ಲಿ ರಾಮಯ್ಯನು ಜನಿಸಿದುದು, ತೀರ್ಥಯಾತ್ರೆಗೆ ಹೊರಟ ಆವನು ಪುಲಿಗೆರೆಗೆ ಬಂದು ನೆಲಸಿದುದು, ಅಲ್ಲಿ ಆತನಿಗೆ ಸೋಮೇಶ್ವರನಿಂದ ಸ್ವಪ್ನಸಂದೇಶ ದೊರೆತುದು, ಆ ಮೇರೆಗೆ ಆತನು ಅಬಲೂರಿಗೆ ಬಂದು ವಾಸಿಸಿರುವಾಗ ತನ್ನೊಡನೆ ಜಗಳಕ್ಕೆ ಬಂದು ಜೈನರನ್ನೆದುರಿಸಿ ಕಾದಿ, ಪವಾಡವನ್ನು ಮೆರೆದು ಅವರನ್ನು ಸೋಲಿಸಿ, ಜಿನನಮೂರ್ತಿಯನ್ನೊಡೆದು, ಆ ಎಡೆಯಲ್ಲಿ ವೀರಸೋಮೇಶ್ವರನನ್ನು ಪ್ರತಿಷ್ಠಿಸಿ, ಬಿಜ್ಜಳರಾಯ, ಕದಂಬ ಕಾಮದೇವ, ಚಾಳುಕ್ಯ ಸೋಮೇಶ್ವರ ಈ ಮೂವರಿಂದಲೂ ಗೌರವವನ್ನೂ ದತ್ತಿದಾನಗಳನ್ನೂ ಪಡೆವಲ್ಲಿಯ ವರೆಗಣ ವಿಷಯಗಳನ್ನೆಲ್ಲ ಕವಿ ಇಲ್ಲಿ ಚಿತ್ರಿಸಿದ್ದಾನೆ.

ಈ ಶಾಸನದ ಕೆಲ ಪದ್ಯಗಳು:

ಎನಲೇಕಾಂತದ ರಾಮಂ
ಮನಸಿಜರಿಪುಗಿತ್ತು ತಲೆಯನಾಂ ಪಡೆವೆ ನೀ-
ವೆನಗೀವ ಪಣಮದೇನೆನೆ
ಮುನಿದೆಂದರ್ಜಿನನ ಕಿತ್ತು ಶಿವನಂ ನಿಲಿಪೆವ್ ||

ಎನೆ ಕೊಡುವುದೋಲೆಯಂ ನೀ-
ವೆನಲಂದಿತ್ತೋಲೆಗೊಂಡು ಶಿರಮಂ ತಾಂ ಭೋಂ-

ಕೆನಲಿಱಿದು ಕುಡುವ ಪದದೊಳ್
ಶಿವನಂ ಸಾನ್ನಿಧ್ಯಮಾಡಿ ರಾಮಂ ನುಡಿಗುಂ ||

ಉಡುಗದೆ ಶಂಭು ನೀನೆ ಶರಣೆನ್ನಡಂ ಮನಮನ್ಯಭಾವದೊ-
ಳ್ತೊಡರ್ದಡಮೀ ಕೃಪಾಣಮುಖದಿಂ ತಲೆ ಪೋಗದೆ ನಿಲ್ಕದಲ್ಲದಿ-
ರ್ದಡೆ ಶಿವ ನಿನ್ನ ಮುನ್ನಡಿಗುರುಳ್ಗೆನುತಂ ಕಲಿ ರಾಮನಾರ್ದು ಕೆ-
ಯ್ಗಡದಿಂದಿಕ್ಕಲಾರಯಿಸಿದಂ ಶಿರಮಂ ಶಿವನಂಘ್ರಿಯುಗ್ಮದೊಳ್ ||

ಅರಗೈಗೊಂಡನೆ ಕಿತ್ತು ನೋಡಿದನೆ ಕೂರ್ಪಿಂಗಳ್ಕೆಮೆಯ್ಗಾಯ್ದನೇ
ಸೆರಗಂ ಪಾರ್ದನೆ ಬಾಳ್ಗೆ ಭಕ್ತರೆನುತಂ ಬಲ್ಲಾಳು ರಾಮಂ ಸ್ವಕಂ-
ಧರಮಂ ಚೆಕ್ಕನೆ ಹುಲ್ಲಕಟ್ಟ ಸರಿವಂತಕ್ಲೇಶದಿಂದಾಗಳಂ-
ಕರದೀಶಾಂಘ್ರಿಯೊಳಿ[ಕ್ಕೆ ಶಂಕರ]ಗಣಕ್ಕಾನಂದಮಂ ಮಾಡಿದಂ ||

*          *          *          *

'ಅಂತಪ್ಪಡೀ ತಲೆಯುನಂದವರ ಕೈಯೊಳೊಡ್ಡುವೆನವರದಂ ಸುಟ್ಟಂ ಬಳಿಕ್ಕವಾಂ ಪಡೆವೆನೆನಗಾನಸೆಜ್ಜೆಯ ಬಸದಿ ಮುಖ್ಯವಾಗಿಯೆಣ್ಣೂಱುಂ ಬಸದಿಯ ಜಿನರಂ ಪಣವನೊಡ್ಡುವುದೆ'ನೆ ಬಿಜ್ಜಣರಾಯಂ ನಾಮೀ ಕೌತುಕಮಂ ನೋಡುವಮೆಂದು ಬಸದಿಗಳ ಪಂಡಿತರುಮಂ ಜೈನಮಂ ಕರೆದು, 'ನೀಮಾರ್ಪಡೆ ಬಸದಿಗಳಂ ಪಣಂ ಮಾಡಿ ಓಲೆಯುಂ ಕುಡಿಪೆ'ಂದಡವ 'ರಾವೀ ಮುನ್ನೋಡದ ಬಸದಿಯುಂ ದೂಱಲ್ ಬಂದೆವಲ್ಲದಿನ್ನೊಡ್ಡಿ ಜನಪ್ರಳಯಮಂ ಮಾಡಲ್ ಬಂದವರಲ್ಲವೆ'ನೆ, ಬಿಜ್ಜಣರಾಯಂ ನಕ್ಕು 'ನೀವಿನ್ನುಸಿರದೆ ಪೋಗಿ ಸುಖದಿನಿರಿ'ಮೆಂದವರಂ ಕಳಿಪಿ, ರಾಮಯ್ಯಗಳಿಗೆಲ್ಲರುಮಱಿಯೆ ಜಯಪತ್ರಮಂ ಕೊಟ್ಟು—

## ೧೧೫. ಪಾರ್ಶ್ವ
(೧೦೯೬)

ಬೆಳಗಾವಿ ಜಿಲ್ಲೆಯ ಗೋಕಾವಿ ತಾಲೂಕಿಗೊಳಪಟ್ಟ ಕಲ್ಹೊಳೆ ಎಂಬ ಒಂದೂರಿದೆ. ಅಲ್ಲಿಯ ಬಸದಿಯಲ್ಲಿ ಒಂದು ಶಿಲಾಶಾಸನವುಂಟು. ಅದು ರಟ್ಟಕಾರ್ತವೀರ್ಯನ ಕಾಲದ್ದು. ಕ್ರಿ.ಶ. ೧೦೯೬ರಲ್ಲಿ ಹುಟ್ಟಿದುದು.[1] ಕನ್ನಡ ಪದ್ಯಗಳ ಸಂಖ್ಯೆ ೪೦ ಉಳ್ಳ ಒಂದು ಸುಂದರವಾದ ಕಾವ್ಯವಾಗಿದೆ, ಅದು ಕಲ್ಬರಹದ ೭೦ ಸಾಲುಗಳಲ್ಲಿ ಅದು ಹಬ್ಬಿದೆ. ಕಾರ್ತವೀರ್ಯದೇವನು ಶ್ರೀಶಾಂತಿನಾಥದೇವರ ಅಂಗರಂಗಭೋಗಕ್ಕೆ, ಅಲ್ಲಿರುವ ಮುನಿಜನಗಳ ಆಹಾರಭೈಷಜ್ಯ ಶಾಸ್ತ್ರದಾನಕ್ಕೆ ಭೂಮಿಯನ್ನು ಬಿಟ್ಟಂತೆಯೂ ಸೆಟ್ಟಿಯರೂ ಮುಮ್ಮುರಿದಂಡುಗಳೂ ಕೆಲವೊಂದು ಆಯಗಳನ್ನು ಬಿಟ್ಟಂತೆಯೂ ಈ ಶಾಸನದಲ್ಲಿ ಹೇಳಿದೆ.

ಅರಸರು, ಒಡೆಯರು, ಆಚಾರ್ಯರು ಮೊದಲಾದವರ ಗದ್ಯಪ್ರಶಸ್ತಿಗಳು ಚಿಕ್ಕವಾಗಿ ಚೊಕ್ಕವಾಗಿವೆ. ದತ್ತಿದಾನಗಳ ವಿವರಣೆಯ ಗದ್ಯವೂ ಅಂದವಾಗಿದೆ. ಈ ಸ್ವಲ್ಪ ಭಾಗವು ಮಾತ್ರ ಗದ್ಯದಲ್ಲಿದ್ದುದು; ಮಿಕ್ಕ ಮುಕ್ಕಾಲುಪಾಲು ಶಾಸನ ಪದ್ಯರೂಪದಲ್ಲಿಯೇ ಇದೆ. ಸೊಗಸಾದ ಈ ಚಿಕ್ಕ ನೀಳ್ಗಬ್ಬವನ್ನು ರಚಿಸಿದ ಕವಿ ಪಾರ್ಶ್ವನು. ತನ್ನ ಹೆಸರನ್ನು ಹೇಳುವಾಗ ಈ ಶಾಸನಕೃತಿಯನ್ನು ಕುರಿತು ಕವಿ ಇಂತು ನುಡಿದಿದ್ದಾನೆ:

ಲಲಿತಪದಾರ್ಥಕಳಂಕೃತಿ-
ಗಳಿನೊಸವರ್ರಸಂಗಳಿಂದೆ ಬುಧರೊಳ್ಪುಕೆಱಾ-
ವಳಿಸಸ್ಯಮೊಗೆಯೆ ಕವಿಕುಳ-
ತಿಳಕಂ ಶಾಸನಮನೊಲ್ದು ಪೇಳ್ದಂ ಪಾರ್ಶ್ವಂ ||

ಇದರಲ್ಲಿ ಕವಿ ಸತ್ಕೃತಿಯ ಮುಖ್ಯಗುಣ ಯಾವುದು, ಅದರ ಪರಿ

1 The Royal Asiatic Society (Bombay Branch) Journal, Vol. X, No. XXIX Page 220.

ಣಾಮ ಎಂತಹುದು ಎಂಬುದನ್ನು ಶುದ್ಧ ರಸಿಕ ವಿಮರ್ಶಕನ ಹಾಗೆ ಬಲು ಚೆನ್ನಾಗಿ ಬಣ್ಣಿಸಿದ್ದಾನೆ. 'ಕವಿಕುಲತಿಲಕ'ನೆಂಬ ಬಿರುದನ್ನು ಹೊದ್ದಿರುವ ಈ ಶಾಸನಕವಿ ಪಾರ್ಶ್ವನೂ, ಕನ್ನಡದಲ್ಲಿ 'ಪಾರ್ಶ್ವನಾಥಪುರಾಣ'ವನ್ನು ರಚಿಸಿದ (ಕ್ರಿ. ಶ. ೧೨೨೨) ಈ ರಟ್ಟ ಕಾರ್ತವೀರ್ಯನ ಆಸ್ಥಾನದಲ್ಲಿಯೇ ಇದ್ದಂತೆ ತಿಳಿಯುವ, 'ಕವಿಕುಲತಿಲಕ' ಎಂಬ ಬಿರುದನ್ನೇ ತಳೆದಿರುವ ಪಾರ್ಶ್ವಪಂಡಿತನಾಗಿರಬೇಕು ಎಂಬುದಾಗಿ ಕರ್ಣಾಟಕ ಕವಿಚರಿತಕಾರರು ಅಭಿಪ್ರಾಯಪಡುತ್ತಾರೆ. ಈ ಶಾಸನಕಾವ್ಯವನ್ನು ಓದಿದಾಗಲೂ ಪ್ರಸಿದ್ಧ ಸಾಹಿತ್ಯಜ್ಞ ಮಹಾಕವಿಯೆಂಬ ಮಾತು ಮನಕ್ಕೆ ಅರಿಕೆಯಾಗುತ್ತದೆ. ಆ ಪುರಾಣ ಕರ್ತೃ ಪಾರ್ಶ್ವ ತನ್ನನ್ನು 'ಸುಕವಿಜನಮನೋಹರ್ಷವರ್ಷಂ' ಎಂದುಕೊಂಡಿದ್ದರೆ, 'ಒನವರಸಂಗಳಿಂದೆ ಬುಧರೊಳ್ ಪುಳಕಾವಳಿಸಸ್ಯ ಮೊಗೆಯೆ' ತಾನು ಈ ಶಾಸನವನ್ನು ಹೇಳ್ದನೆಂದು ಶಾಸನಕವಿ ಪಾರ್ಶ್ವ ಹೇಳಿಕೊಂಡಿದ್ದಾನೆ. ಈ ಎರಡು ಮಾತುಗಳಲ್ಲಿಯೂ ಒಂದೇ ಭಾವ ವ್ಯಕ್ತವಾಗಿರುವುದಲ್ಲದೆ ಪದಗಳಲ್ಲಿಯೂ ಸುಮಾರು ಸಾಮ್ಯವೂ ಉಂಟು. ಇದು ಪುರಾಣ ಮತ್ತು ಶಾಸನಗಳೆರಡೂ ಏಕಕರ್ತೃಕಗಳೆಂಬ ಮಾತಿಗೆ ಪೋಷಕವಾಗಿದೆ. ಪಾರ್ಶ್ವನಾಥಪುರಾಣದ ಪಾರ್ಶ್ವಪಂಡಿತನು ಸ್ಮರಿಸಿರುವ ಕವಿಗಳಲ್ಲಿ 'ಬಾಳಚಂದ್ರ' ಎಂಬ ಕವಿಯೂ ಒಬ್ಬನಿದ್ದಾನೆ. ಬಹುಶಃ ಇವನು ಕಲ್ಲುಹೊಳೆಯ ಈ ಶಾಸನದ ಸಮಯದಲ್ಲಿಯೇ ಬೆಳಗಾವಿಯ ಮೂರು ಶಾಸನಗಳನ್ನು ಬರೆದ ಕವಿಕಂದರ್ಪ 'ಬಾಳಚಂದ್ರ'ನೇ ಎಂದು ತೋರುತ್ತದೆ.[1] ಇವನೂ ಒಳ್ಳೆಯ ಕವಿ ಎಂಬುದನ್ನು ಆತನ ಶಾಸನಗಳನ್ನು ಓದಿ ಮನಗಾಣಬಹುದು. ಈತನ ಪರಿಚಯ ಮುಂದೆ ಬಂದಿದೆ. ಒಂದೇ ಕಾಲದಲ್ಲಿ ಶಾಸನಗಳನ್ನು ಬರೆದ ಇವರಿಬ್ಬರೂ ಸಂಭವತಃ ಆ ಕಾರ್ತವೀರ್ಯನ ಆಸ್ಥಾನದಲ್ಲಿದ್ದವರೆಂದು ತಿಳಿಯಲಡ್ಡಿಯಿಲ್ಲ. ಅಭಿನ್ನ ಆಸ್ಥಾನದ ಸಹಸದಸ್ಯನಾದ ಒಬ್ಬ ಪಂಡಿತನನ್ನು, ತನ್ನ ಸಮಕಾಲೀನ ಕವಿಯನ್ನು ಹೀಗೆ ನೆನೆಯುವುದು ಪಾರ್ಶ್ವನ ಗುಣಗ್ರಾಹಕತೆಯ, ನಿರ್ಮಾತ್ಸರ್ಯದ ದೊಡ್ಡ ಮನಸಿನ ದ್ಯೋತಕವೆಂದು ಎಣಿಸಬಹುದು.

---

1 ಕರ್ಣಾಟಕ ಕವಿಚರಿತೆ ಸಂಪುಟ 2, ಪುಟ 256.

ಪಾರ್ಶ್ವಕವಿಯ ಶಾಸನಕಾವ್ಯದಿಂದ ಆಯ್ದ ಕೆಲವು ಪದ್ಯಗಳೂ ಗದ್ಯ ಭಾಗಗಳೂ ಇಲ್ಲಿ ಕೊಡಲಾಗಿವೆ :

ಶ್ರೀಕವಿವಿಬುಧಸ್ತ್ರೀರ-
ತ್ನಾಕಳಿತಂ ಜಳಧಿಯಂದದಿಂ ಯದುಕುಲಲ-
ಕ್ಷ್ಮೀಕಾಂತಂ ಶ್ರೀತಕಮಳಾ-
ನೀಕಂ ಹಗರಟಗೆ ನಾಡು ಜಗದೊಳಗೆಸೆಗುಂ ||

*                *                *                *

ಸಬಳಂಗೊಂಡು ಸಮುಗ್ರಸಿಂಹಮಹಿಪಂ ಮೇಲ್ವಾಯಿಸಲ್ವಾಜಿಯಂ
ಸಬಳಂ ವೈರಿಬಳಂ ಜವಂಗೆ ಕಬಳಂ ಬೇತಾಳಜಾಳಕ್ಕೆ ಕೊ-
ಟ್ಟ ಬಲಿಶ್ರೇಣಿ ಬಳಾರಿಗಿತ್ತ ಬಡಿನಂ ಹಾರ್ದಿರ್ದ ಹರ್ದಂಗೆ ಬೇ-
ರ್ದ ಬ್ರಕಕ್ಕೆತ್ತಿದ ಬುತ್ತಿಯೆಂದೊಡಹಿತರ್ನ್ನೆಯ್ದೋೞ್ ಮಾೞಾಂಪರೆ ||

ಕ್ಷತ್ರಿಯಮಸ್ತಕಾಭರಣರಾಜನೃಪಂ ವಿಭು ಸಿಂಗಸೂನು ರ-
ತ್ನತ್ರಯ ಮೂರ್ತಿ ನಿರ್ಮ್ಮಳಿನಧರ್ಮ್ಮಮೆನುತ್ತದನೊಲ್ದು ಪೇಳ್ವವೋ
ಲ್ದಾತ್ರಿಗೆ ಮಿಕ್ಕ ಕಲ್ಪೊಳೆಯೊಳೆತ್ತಿಸಿದಂ ಜಿನಶಾಂತಿಗೇಹಮಂ
ನೇತ್ರವಿಚಿತ್ರಮಂ ಮಹಿತೋತ್ಕಟಮನಪ್ರತಿಮತ್ರಿಕೂಟಮಂ ||

*                *                *                *

ಪದನಖಸಂಕುಳಂ ವಿಷಮಬಾಣವಿಷಾಹಿಮಹಾವಿಷಾಪಹಾ-
ರದ ಮಣಿ ನಾಮದಕ್ಕರಮ ಮೋಹಪಟುಗ್ರಹಭೇದಿಮಂತ್ರಮಂ-
ಗದ ಮಳಮಾಜವಂಜವರುಜಾಹರಣೌಷಧಮೆಂದೊಡೇನನೆಂ-
ಬುದೊ ಮಲಧಾರಿ ದೇವಮುನಿಪೋತ್ತಮಭಾವತಪಃಪ್ರಭಾವಮಂ ||

ವ|| ಕೂಂಡಿ ಮೂಱುಸಾಸಿರದ ಬಳಿಯ ಕುಱುಂಬೆಟ್ಟ ಕಂಪಣದೊಳಗಣ ಸಿಂದಸ ಕಲ್ಪೊಳೆಯಲ್ಲಿಯುಲ್ಲಿಯ ಕಳಗಡಿಯರ ಸಿಂದಗಾವುಂಡಂ ಮುಖ್ಯವಾಗ ಪನ್ನಿರ್ವರ್ಗ್ಗಾವುಂಡುಗಳಱಿಯೆ ಪನ್ನೆರಡು ತಪ್ಪಡಿಯ ಕುಱುಂಬೆಟ್ಟಗೋಲಿಂದೆರಡು ಸಹಸ್ರ ಕಂಬ ಕೆಯ್ಯಂ—

ಆ ಬಸದಿಯ ಸಂಬಂಧದ ಮನೆಯ ನಿವೇಶನವಿಪ್ಪೊಳಸುಂ ಗೇಣು. ಬಾಚೆಯವಿಡಿಯ ರಾಜಹಸ್ತದಲಾ ಬಸದಿಯಿಂ ಬಡಗಲ್ ರಾಜವೀಥಿಯಿಂ ಮೂಡಲ್ ಪಡುವಣೆಕ್ಕೆಯ ಹಸ್ತಂ ನಾಲ್ವತ್ತು; ಸಿರಿವಾಗಿಲ ಕಲ್ಲಿಂ ಮೂಡಲ್ ಪಂಚಬಸದಿಯ ಕೇರಿಯಲ್ಲಿಗೆ ಬಡಗಣೆಕ್ಕೆಯ ಹಸ್ತವಿಪ್ಪತ್ತಾಱು; ಆ ಕೇರಿಯಿಂ ಪಡುವಣ ಭಾಗಂಬಿಡಿದು ಮೂಡಣೆಕ್ಕೆಯ ಹಸ್ತನಾಲ್ವತ್ತು; ತೆಂಕಣೆಕ್ಕೆಯ ಹಸ್ತವೆರಡಾ ಮಾನ್ಯದೊಳಗಣಂಗಡಿನಾಲ್ಕು, ಗಾಣವೊಂದಾ ಬಸದಿಯ ಬಣಬೆಯ ನಿವೇಶನಮಿಯ್ದು —

ಮತ್ತಮೇಳುವರೆ ಹನ್ನೊಂದುವರೆಯ ಸಮಸ್ತ ಮುಮ್ಮುರಿದಂಡಂ ಮುಖ್ಯವಾಗಿ ನಾಡುಗಳ್ ಬಿಟ್ಟಾಯದ ಕ್ರಮವೆಂತೆಂದಡೆ ಸಕಳಧಾನ್ಯ ಮಾವುದು ಬಂದಡಂ ಹೇಱಿಂಗೊಮ್ಮನಂ, ಭಂಡಿಗೆ ಬಳ್ಳವೆರಡು. ಹಸಿವಕ್ಕಡಕೆ ಅಯ್ದು. ಹೇಱಿಂಗೆಲೆನೂಱು, ಪೊತ್ತುಲಕಯ್ವತ್ತು. ಹಾಡಕೆ ಸೊಲ್ಲಗೆ ಎಣ್ಣೆ. ಓಲೆ[1]ಯ ಹೊಱೆ ಮಾಱಿತಕ್ಕೆ ಒಂದು ಕಟ್ಟೋಲೆ. ಕಿಱುಕುಳವೇನು ಮಾಱಿದಡಂ ಸಟ್ಟುಗಾಯಂ ಹಿಡಿವತ್ತು. ಕಂಪಿಗೆ ಮಡಿಕೆ ಒಂದು.

ಮೇಲೆ ಉದ್ಧರಿಸಿಕೊಡಲಾದ ಪದ್ಯಗಳಲ್ಲಿ ಮೊದಲ ಪದ್ಯದ ಆರಂಭದ 'ಶ್ರೀ ಕವಿರತ್ನ' ಎಂಬುದು ಮಹಾಕವಿ ರನ್ನನ ಹೆಸರನ್ನು ಸೂಚಿಸಿ ಆತನನ್ನು ನೆನೆದಿರುವಂತೆ ತೋರುತ್ತದೆ. ಇದರಿಂದ ರನ್ನನು ಹಗರಟಿಗೆ ನಾಡಿನವನೆಂದು, ಈಗ ಅವನ ಊರೆಂದು ತಿಳಿದಿರುವ ಮುದವೊಳಲು ಆಗ ಹಗರಟಿಗೆ ನಾಡಿಗೆ ಸೇರಿದ್ದಿತೆಂದು ತಿಳಿಯುವುದು.

---

1 ಮಾನ್ಯ ಫ್ಲೀಟರು ಇದನ್ನು ಒಲೆ ಎಂದು ಓದಿದ್ದಾರೆ. ಮತ್ತು ಅದಕ್ಕೆ ಒಲೆಗೆ ಹಚ್ಚುವ (ಉರುವಲು) ಕಟ್ಟಿಗೆ (fire-wood) ಎಂದು ಅರ್ಥ ಮಾಡಿದ್ದಾರೆ. ಆದರದು ಓಲೆ: ತಾಳಗರಿಯೋಲೆ, ಓಲೆ ಗರಿಗಳ ಕಟ್ಟು ಎಂದು ನಾನು ತಿದ್ದಿಕೊಂಡು ಗ್ರಹಿಸಿದ್ದೇನೆ. ಓಲೆಗಳನ್ನು ಮಾರುತ್ತಿದ್ದ ವಿಷಯ ಬೆಳಗಾವಿ ಶಾಸನದಲ್ಲಿ (ಕ್ರಿ. ಶ. ೧೨೦೪) ಯೂ ಉಲ್ಲಿಖಿತವಾಗಿದೆ.

# ೧೧೩. ಬಾಳಚಂದ್ರ

(೧೨೦೪)

ಕ್ರಿ. ವ. ೧೨೦೪ ರ ಎರಡು ಶಿಲಾಶಾಸನಗಳು ಬೆಳಗಾವಿಯಲ್ಲಿ ಸಿಕ್ಕಿವೆ.[1] ಇವು ಮೂಲತಃ ಬೆಳಗಾವಿ ಕೋಟೆಯೊಳಗಣ ಜಿನಾಲಯವೊಂದರಲ್ಲಿದ್ದುವು. ಇವನ್ನು ಬ್ರಿಟಿಶ್ ಮ್ಯೂಜಿಯಮ್ಮಿನಲ್ಲಿ ಇಡಲಾಗಿದೆ. ಅವೆರಡರ ವರ್ಷ, ಮಾಸ, ತಿಥಿ, ವಾರಗಳೂ ಒಂದೇ—ಶಕವರ್ಷ ೧೧೨೭ (೬?) ರಕ್ತಾಕ್ಷಿ ಪೌಷ್ಯಶುದ್ಧ ೨ ವಡ್ಡವಾರ. ರಕ್ತಾಕ್ಷಿ ಸಂವತ್ಸರ ಶ. ವ. ೧೧೨೭ಕ್ಕಲ್ಲ, ೧೧೨೬ಕ್ಕೆ ಜೊತೆಯಾಗಿರುವುದು; ಎಂದರೆ ಆಗ ಕ್ರಿ. ವ. ೧೨೦೪-೦೫ ಇರುವುದು. ಈ ಎರಡು ಶಾಸನಗಳನ್ನೂ ರಚಿಸಿದ ಕವಿ ಬಾಳಚಂದ್ರದೇವ ಎಂಬವನೆಂದು ಉಲ್ಲೇಖಪ್ರಮಾಣದಿಂದಲೇ ತಿಳಿಯುತ್ತದೆ.

ರಟ್ಟ ಕಾರ್ತವೀರ್ಯನು ತನ್ನ ಮಗ ಹೀರಮಲ್ಲಿಕಾರ್ಜುನನೊಂದಿಗೆ ವೇಣುಗ್ರಾಮದ (ಬೆಳಗಾವಿಯ) ಸ್ಕಂಧಾವಾರದಲ್ಲಿದ್ದು, ಕರಣಾಗ್ರಗಣ್ಯ ಬೀಚಿರಾಜನು ಮಾಡಿಸಿದ ರಟ್ಟ ಜಿನಾಲಯದ ಶಾಂತಿನಾಥದೇವರಿಗೆ ಕೆಲ ಭೂಮಿಯನ್ನು ಕೊಟ್ಟಂತೆಯೂ ಅನೇಕ ಸೆಟ್ಟಿಯರು ತಮ್ಮ ಮಾರುವ ಹೇರುವ ನಾನಾ ವಸ್ತುಗಳ ಮೇಲೆ ಕೆಲವೊಂದು ಆಯವನ್ನು ಬಿಟ್ಟಂತೆಯೂ ಒಂದು ಶಾಸನದಲ್ಲಿ ಹೇಳಿದೆ. ಆ ಕಾರ್ತವೀರ್ಯನೆ, ಆ ಬಸದಿಗೇ ಕೂವರಳ್ಳಿ ಕಂಪಣದ ಉಂಬರವಾಣಿ ಗ್ರಾಮವನ್ನೂ ನಾಡೊಳಗೆ ಅಲ್ಲಲ್ಲಿ ಕೆಲ ಸ್ಥಳ ವೃತ್ತಿಗಳನ್ನೂ ಬಿಟ್ಟಂತೆ ಇನ್ನೊಂದು ಶಾಸನದಲ್ಲಿ ಹೇಳಿದೆ.

ಎರಡೂ ಶಾಸನಗಳ ಪೂರ್ವಾರ್ಧಗಳು ವಿವಿಧವೃತ್ತ-ಕಂದಪದ್ಯಗಳಿಂದ ರಂಜಿಸುತ್ತಿವೆ. ರಟ್ಟರಸರು, ಅವರ ಅಧಿಕಾರಿಗಳು ಮೊದಲಾದವರನ್ನು ಆ ಪದ್ಯಗಳು ಮನಸಿಡಿವಂತೆ ಬಣ್ಣಿಸುತ್ತಿವೆ. ಒಂದೊಂದು ಶಾಸನದಲ್ಲಿಯೂ ೨೮-೨೯ ಪದ್ಯಗಳುಂಟು. ಪದ್ಯರಚನೆ ಕಲ್ಪನಾವಿಲಾಸದಿಂದ ಮನೋಹರ

---

1 Epi. Ind. Vol. XIII. pp. 18 & 28

ವಾಗಿ, ರಸೋತ್ಕರ್ಷದಿಂದ ಹೃದ್ಯವಾಗಿ ರಸಿಕರಿಗೆ ತಣಿವನ್ನೀಯುತ್ತಿವೆ. ಈತನ ಸಮಕಾಲೀನನೇ ಆಗಿ, ರಟ್ಟ ಕಾರ್ತವೀರ್ಯನ ಆಸ್ಥಾನದಲ್ಲಿ ಬಹುಶಃ ಸಭಾಸದಸ್ಯನಾಗಿದ್ದ ಜೈನಪುರಾಣಕರ್ತ ಪಾರ್ಶ್ವಪಂಡಿತನು ಒಬ್ಬ ಉದ್ದಾಮ ಕವಿ, ತನ್ನ ಪಾರ್ಶ್ವನಾಥಪುರಾಣದಲ್ಲಿ ಇವನನ್ನು ನೆನೆದಿರುವುದು ಈತನ ಕವಿತ್ವದ ಹಿರಿಮೆಯನ್ನು ಸಾರುತ್ತದೆ. ಈ ಪದ್ಯಗಳಂತೂ ಸರಿ, ಇವುಗಳಿಗಿಂತ ಹೆಚ್ಚಾಗಿ, ದತ್ತಿದಾನಗಳನ್ನು ವಿವರಿಸುವ ಇವನ ಗದ್ಯದ ರೀತಿ, ತತ್ಕಾಲೀನ ವ್ಯಾವಹಾರಿಕ ಭಾಷೆಯ ಪ್ರಾತಿನಿಧಿಕತೆಯ ದೃಷ್ಟಿಯಿಂದ, ಕೆಲಮಟ್ಟಿಗೆ ಸಾಮಾಜಿಕ ಜೀವನದ ಪ್ರತಿಬಿಂಬನೆಂಬ ದೃಷ್ಟಿಯಿಂದ ಮಹತ್ತ್ವವುಳ್ಳುದೆಂದು ಹೇಳಬಹುದು. ಸರಳವೂ, ಶುದ್ಧವೂ, ಸಹಜವೂ, ಸುಂದರವೂ ಆಗಿದೆ ಆ ಗದ್ಯ. ಉಂಬಳನಾಣೆಯ ಸುತ್ತುಮುತ್ತಲ ಊರುಗಳ ಹಾಗೂ ಸ್ಥಳಗಳ ಹೆಸರುಗಳ ಉಲ್ಲೇಖವೂ ಮೇರೆಗಳನ್ನು ತಿಳಿಸುವ ರೀತಿಯೂ ಈ ಶಾಸನ ಗದ್ಯದಲ್ಲಿ ಕಂಡುಬರುವ ಇನ್ನೊಂದು ವಿಶೇಷವಾಗಿದೆ.

ಒಂದು ಶಾಸನದಲ್ಲಿ ಕವಿ ತನ್ನ ಹೆಸರನ್ನು ಎರಡು ಪದ್ಯಗಳಲ್ಲಿ ಹಾಗೂ ಗದ್ಯದಲ್ಲಿ ಹೇಳಿಕೊಂಡಿರುವುದು ಇಂತು :

ಪದಪಿಂದೀ ಧಾತ್ರಿಯೆಲ್ಲಂ ಮಿಗೆ ಪೊಗಳೆ ಚಿರಂ
ವರ್ತಿಸುತ್ತಿರ್ಕೆ ನಿತ್ಯಾ-
ಭ್ಯುದಯ ಶ್ರೀಕಾರ್ತವೀರ್ಯಕ್ಷಿತಿಪವಿಪುಳಸಾಮ್ರಾಜ್ಯ
ಸಂತಾನಮುರ್ವೀ-
ವಿದಿತಶ್ರೀಬೀಚಿರಾಜಪ್ರಥಿತವಿಮಳಶಾಂತೀಶ್ವರಾವಾಸಧರ್ಮಂ
ಸದಳಂಕಾರಸ್ಫುಟಾರ್ಥಾನ್ವಿತಪದಕವಿಕಂದರ್ಪಸುವ್ಯಕ್ತಸೂಕ್ತಂ ||

ದೋಷವ್ಯತೀತಮರ್ಥವಿ-
ಶೇಷಮಿದೆನೆ ಪೇಳ್ದನೊಲ್ದು ಶಾಸನಮಂ ಪೀ-
ಯೂಷಸಮಸೂಕ್ತಿ ಚಾತು-
ರ್ಭಾಷಾಕವಿಚಕ್ರವರ್ತಿ ಕವಿಕಂದರ್ಪಂ ||

ಶ್ರೀಮನ್ಮಾಧವಚಂದ್ರತ್ರೈವಿದ್ಯಚಕ್ರವರ್ತಿವಾಕ್ಸುಧಾರಸನಾಭ್ಯುದಿತ ನಿತ್ಯಸಾಹಿತ್ಯಕಮಳವನಮರಾಳಂ ಬಾಳಚಂದ್ರದೇವಂ ಪೇಳ್ದ ಶಾಸನಂ.

ಇನ್ನೊಂದು ಶಾಸನದಲ್ಲಿ ಈ ಕೆಳಗಣ ಪದ್ಯ ಕಾಣಬರುವುದು :

ಪ್ರಹತಾರಿಬ್ರಜಕಾತರ್ಗಪಿರಿಯರ್ಗಸಚಿವಂ ಶ್ರೀಬೂಚಿರಾಜಂ ಯಶೋ-
ಮಹಿತಂ ಪೇಳಿಮೆನಲ್ಕೆ ಶಾಸನಮನೊಳ್ಪಿಂ
ಬಾಳಚಂದ್ರಂ ಗುಣಾ-
ಗ್ರಹಿ ವಿದ್ವಜ್ಜನಸಮ್ಮತಸ್ಫುಟಪದಾರ್ಥಾಳಂಕ್ರಿಯಾಸಂಕುಳಾ-
ವಹಮಪ್ಪಂತಿರೆ ಪೇಳ್ದನಿಂತು ಕವಿಕಂದರ್ಪಂ ಬುಧಾಧೀಶ್ವರಂ ||

ತ್ರೈವಿದ್ಯ ಚಕ್ರವರ್ತಿಗಳಾಗಿದ್ದ ಮಾಧವಚಂದ್ರರು ಈ ಶಾಸನಕವಿ ಬಾಳಚಂದ್ರನ ಗುರುವೆಂದು ಮೇಲಣ ಗದ್ಯದಿಂದ ಗೊತ್ತಾಗುತ್ತದೆ. 'ಚಾತುಭಾರ್ಷಾಕವಿಚಕ್ರವರ್ತಿ' ಎಂದೂ 'ಕವಿಕಂದರ್ಪ' ಎಂದೂ ತನಗೆ ಬಿರುದುಗಳಿದ್ದುದನ್ನು ಇಲ್ಲಿ ತಿಳಿಯಪಡಿಸಿದ್ದಾನೆ. ಅಳಂಕಾರಯುಕ್ತವಾಗಿಯೂ ಅರ್ಥವು ಸ್ಫುಟವಾಗಿ, ನೇರವಾಗಿ ಮನಮುಟ್ಟುವಂತಿರುವುದು ತನ್ನ ಪದಪ್ರಯೋಗದ ವೈಶಿಷ್ಟ್ಯವೆಂದು, ಶಾಸನವೊಂದರಲ್ಲಿ ಅಲ್ಲ, ಎರಡರಲ್ಲಿಯೂ ಕವಿ ಹೇಳಿಕೊಂಡಿದ್ದಾನೆ. ಇದರಿಂದ ಬಾಳಚಂದ್ರನು, ಅಲಂಕಾರಗಳು ಕಾವ್ಯವನ್ನು ಉಕ್ಕಿನ ಕಡಲೆಯಾಗಿಸಬಾರದು, ನುಡಿ ಅಮೃತಕ್ಕೆ ಸಮಾನವಾದುದಿರಬೇಕು ಎಂಬ ಅಭಿಪ್ರಾಯದವನೆಂದು ವ್ಯಕ್ತವಾಗುತ್ತದೆ. ಇಂತಹ ಸಹಜ ಮನೋಹರವಾದ ಕಾವ್ಯವನ್ನು ರಚಿಸುವ ಕವಿಗೆ 'ಕವಿಕಂದರ್ಪ' ಎಂಬ ಬಿರುದು ಸಾರ್ಥಕವೆಂಬುದು ಒಪ್ಪತಕ್ಕ ಮಾತು.

ಕವಿ ಬಾಳಚಂದ್ರ ಹೇಳಿಕೊಂಡ ಮಾತು ಅತಿಶಯವಾದ ಆತ್ಮಸ್ತುತಿಯಲ್ಲ ಎಂಬುದಕ್ಕೆ, ಶಾಸನದ ಪದ್ಯಗಳು ಮಾತ್ರವಲ್ಲ, ಇತರ ಕವಿಗಳೂ ಕೊಂಡಾಡಿದ ಪ್ರಮಾಣಗಳಿವೆ. ಈತನ ಸಮಕಾಲೀನರಾದ ಪಾರ್ಶ್ವಪಂಡಿತ ಮತ್ತು ಜನ್ನ (ಕ್ರಿ. ಶ. ೧೨೦೯) ಇಬ್ಬರೂ ಈತನ ಕವಿತ್ವವನ್ನು ಮೆಚ್ಚಿ ಹೊಗಳಿದ್ದಾರೆ. ಪಾರ್ಶ್ವನು,

ವಕ್ರೋಕ್ತಿಭವಯಶೋಜ್ಯೋ-
ತ್ಸ್ನಾಕ್ರಾಂತಪರಾವಲೇಪತಿಮಿರಂ ಧರಣೀ-
ಚಕ್ರದೊಳತಿಚಿತ್ರಂ ಕವಿ-
ಚಕ್ರಪ್ರಿಯನೆನಿಸಿ ಬಾಳಚಂದ್ರ ನೆಗಟ್ಟಿಂ ||

ಎಂದು ತನ್ನ ಪಾರ್ಶ್ವನಾಥಪುರಾಣದಲ್ಲಿ ಹೊಗಳಿದ್ದಾನೆ (ಕ.ಚ. I-೨೨೪); 'ಕವಿಪ್ರಪಂಚಕ್ಕೆ ಪ್ರಿಯನೆನಿಸಿ ಬಾಳಚಂದ್ರ ಹೆಸರುವಾಸಿಯಾಗಿದ್ದಾನೆ' ಎಂದು ಗಮನಾರ್ಹವಾದ ಮಹತ್ವದ ಒಂದು ಮಾತನ್ನು ಈತನ ಬಗ್ಗೆ ಆಡಿದ್ದಾನೆ. ಅನಂತನಾಥಪುರಾಣದ ಕರ್ತೃವಾದ ಜನ್ನನ ಹೆಂಡತಿ ಲಕುಮಾದೇವಿಗೆ ಬಾಳಚಂದ್ರನು ಗುರುವಾಗಿದ್ದನೆಂದು ಆ ಪುರಾಣದಿಂದ ತಿಳಿಯುತ್ತದೆ. ಅಲ್ಲದೆ, ಈತನು ಪ್ರಸಿದ್ಧನಾದ ಕವಿಯೆಂದು ಜನ್ನನು ಹೇಳಿದ್ದಾನೆ.

ಬಾಳಚಂದ್ರನ ಒಂದೊಂದು ಶಾಸನದಿಂದ ಎರಡೆರಡು ಪದ್ಯಗಳನ್ನು ಇಲ್ಲಿ ಓದುಗರ ಅವಗಾಹನೆಗಾಗಿ ಇಳಿಸಿಕೊಂಡಿದೆ :

ಪರವಧುಗನುಮತಿಯಂ ಜೈ-
ನರೀಯಲಾಗದು ಪರಪ್ರವರ್ತನೆಯೊಳ್ ಜೈ-
ನರೊಳಧಿಕಂ ಬೀಚಂ ತಂ-
ದರಿನೃಪಭುಜವಿಜಯಲಕ್ಷ್ಮಿಯಂ ಪತಿಗೀವಂ ||

ವಿದಿತಜಿನಾಗಮಾಂಬುನಿಧಿವರ್ಧನದೊಳ್ನಿಜವಂಶವಾರಿಜಾ-
ಭ್ಯುದಯವಿಧಾನದೊಳ್ ಬುಧಮನೋಭಿಮತಾರ್ಪಣದೊಳ್
ಕಳಂಕಮಿ-
ಲ್ಲದ ಹಿಮರೋಚಿ ತಾಪಕೃತಿಯಿಲ್ಲದ ಭಾನು ವಿಮೂಢವೃತ್ತಿಯಿ-
ಲ್ಲದ ಸುರಭೂರುಹಂ ಧರೆಯೊಳಪ್ಪಸುತಂ ಬಲದೇವನೊಪ್ಪುಗುಂ ||

ಜನಮೆಲ್ಲಂ ಮೆಚ್ಚೆ ಚೆಲ್ಲಂ ಪಗೆವರುರದ ಸೆಲ್ಲಂ ಜಯಶ್ರೀಗೆ ನಲ್ಲಂ
ಮನುಮಾರ್ಗಂ ಸತ್ತ್ರಿವರ್ಗಂ ತನಗೆಸೆಯೆ ನಿಸರ್ಗಂ
ಗೃಹೀತಾರಿದುರ್ಗಂ

ಸನಯಾಲಾಪಂ ಸುರೂಪಂ ನೆಗಳ್ದನತಿ ದಿಲೀಪಂ
ಜಿತಾರಾತಿಭೂಪಂ
ಘನಶೌರ್ಯಂ ಕ್ಷತ್ರವರ್ಯಂ ಸುರಕುಜಸದೃಶೌದಾರ್ಯನೀ
ಕಾರ್ತವೀರ್ಯಂ ||

ಇದು ತಾಂ ಶ್ರೀಕರಣಾಪ್ಪಣಾಗ್ರಸುತಸತ್ಪುಣ್ಯಪ್ರಭಾಜಾಳಮಿಂ-
ತಿದು ರಟ್ಟಕ್ಷಿತಿಪಾಳಮಂತ್ರಿಯ ರಮಣೀಸ್ಮೇರಾವಲೋಕಾಂಶು ಮು-
ತ್ತಿದು ದಲ್ ಧಾರ್ಮಿಕ ಚಕ್ರವರ್ತಿಯ
ದಂಯಾದುಗ್ಧಾಬ್ಧಿವೀಚೀಸಮು-
ಭ್ಯುದಯಂ ತಾನೆನೆ ಬೀಚಿರಾಜನ ಯಶಂ ಪರ್ವಿತ್ತು
ಭೂಲೋಕಮಂ ||

# ೧೧೭. ಕಲ್ಲಯ್ಯ

(೧೨೦೬)

ಚಿತ್ರದುರ್ಗ ತಾಲೂಕಿನ ಗಂಜಿಗಟ್ಟಿ ಗ್ರಾಮದ ಕ್ರಿ. ವ. ೧೨೦೬ ರ ಶಾಸನವೊಂದನ್ನು* ಲಿ[ಲ]ಕ್ಕರಸನ ಮಗ ಕಲ್ಲಯ್ಯನು ರಚಿಸಿ ಬರೆದಂತೆಯೂ ಆವನು ಹುಲ್ಲೂರ ಸೇನಬೋವನಿದ್ದಂತೆಯೂ ಅವನಿಗೆ ನಡುಬಯಲೊಳಗೆ ೨೦೦ ಕಮ್ಮ ಗದ್ದೆಯನ್ನೂ ಅರಕೆಱೆಯೊಳಗೆ ೧ ಮತ್ತರು ಬೆದ್ದಲನ್ನೂ ೧ ಮತ್ತರು ಬಿಳ್ಳಿವತ್ತದ ಹಸಲು ಮಣಲನ್ನೂ ಕೊಟ್ಟಂತೆಯೂ ಕೊನೆಯ ಗದ್ಯದಿಂದ ತಿಳಿಯುತ್ತದೆ. ಸಮಸ್ತ ಪ್ರಭುಗಳು ಧರ್ಮೇಶ್ವರದೇವರಿಗೆ ಹೂಲಿಯ ಕೆರೆಯನ್ನು ಬಿಟ್ಟಂತೆ ಶಾಸನದಲ್ಲಿ ಹೇಳಿದೆ. ಶಿವಸ್ತುತಿಯಿಂದಾರಂಭವಾಗುವ ಈ ಶಾಸನದ ಅಲ್ಪಾಂಶವಿಲ್ಲಿದೆ :

ಶ್ರೀಮದ್ಬಾಳೇಂದುರುಚಿ
ಸ್ತೋಮಾಳಂಕೃತಕಿರೀಟನಘವಿಧ್ವಂಸಂ
ಕಾಮಾಂತಕನಗಜಾತಾ
ಪ್ರೇಮಂ ಸಮಗೀಗೆ ವಾಂಛಿತಾರ್ಥಮನೆಂದುಂ ||

ಸಳನಿಂದೂರ್ಜಿತವಾದ ಹೊಯ್ಸಳ ಕುಭೃದ್ವಂಶಾಬ್ಧಿ ನೀಹಂಸ ನಿ
ರ್ಮಳ ಕೀರ್ತಿಧ್ವಜನಾ ನೃಸಿಂಹವಿಭುಗಂ
ತತ್ಪಟ್ಟಮಾದೇವಿ ಕೋ
ಮಳೆ ತನ್ಮಧ್ಯೆ ವಿಲೋಳಲೋಚನೆ ಲಸತ್ ಶೃಂಗಾರವಾರಾಶಿಯೇ
ಚಲೆಗಂ ಯಾದವ ಚಕ್ರವರ್ತಿ ನೆಗಳ್ದಂ ಬಲ್ಲಾಳ ಭೂಪಾಲಕಂ ||

*　　*　　*　　*

.... ...　....ಹೊಳಲಕೆಱೆನಾಡುಮಂ ಹೊಂಕುಂದ ಮೂವತ್ತುಮಂ ದುಷ್ಟನಿಗ್ರಹಶಿಷ್ಟಪ್ರತಿಪಾಳನೆಯಿನಾಳುತ್ತಿರ್ದು .......... ಶ್ರೀಮದುತ್ತರ ಭೂಮಿಯೆನಿಸಿ[ದ]

---

* Ep. Car. XI, ಚಿತ್ರದುರ್ಗ 23.

ತಿಳಕತಮಾಳ ತಾಳವಕುಳಂ ಸಹಕಾರವಶೋಕ ಚಂಪಕಂ
ಕುಳಿರ್ವ ಸರೋಜ ಷಂಡವಲರ್ದೊಪ್ಪುವ ಮಲ್ಲಿಗೆ ಮಾಧವೀಲತಾ
ವಳಿ ತನಿಗೊಬ್ಬಿ ದಿಕ್ಷುವನಮೊಯ್ಯನೆ ತೀಡುವ ಮಂದವಾಯು ಕ
ಣ್ಗೊಳಿಸುವುದೆತ್ತ ನೋಡೆ ಹೊಸುಕುಂದದ
ವೃತ್ತಿಯುತೀವ ರಮ್ಯದಿಂ ||

ಸಮದರಿಪುಪದಾತಿಸಾರ್ಥದರ್ಪಪ್ರಭಂಜ
ಸುಮನಸುಜನ ಚಾತುಸ್ತೋಯಧಿರ್ಸಕ್ತರಾಜ
ಕುಮುದನಯನಕಾಂತಾಸಂತತಶ್ರೀತನೂಜ
ವಿಮಳಯಶಪುರಂಧ್ರೀಕಾಂತಸಾಮಂತಮಾಳ ||

# ೧೧೮. ವಾಮನ

(೧೨೦೬)

ಯಾದವ ಸಿಂಘಣನ ಕಾಲದಲ್ಲಿ ಸಹದೇವದಂಡನಾಥನ ಸೋದರನಾದ ಕೇಶವನು ಮೂರು ದೇವರುಗಳಿಗೆ ದತ್ತಿಗಳನ್ನು ಬಿಟ್ಟುದನ್ನು ಹೇಳುವ ಕ್ರಿ. ಶ. ೧೨೦೬ ರ ವಿಜಾಪುರ ಜಿಲ್ಲೆಯ ಬಾಗಿಲುಕೋಟೆ ತಾಲೂಕಿನ ಮುಂಕಣಿಗ್ರಾಮದ ಶಾಸನವನ್ನು[1] ವಾಮನನೆಂಬವನು ರಚಿಸಿದ್ದಾನೆ. ಒಟ್ಟಿಗೆ ಅದು ೮೧ ಸಾಲುಗಳ, ಆರಂಭದಲ್ಲಿಯೇ ಕವಿ ತನ್ನ ಹೆಸರನ್ನು ಹೇಳಿಕೊಂಡಿರುವ, ಕಂದಪದ್ಯವಿದೆ :

ಶಾಸನವಾಗಿರೆ ಪೇಳ್ವುದು
ಶಾಸನವಂ ಬರೆವುದಂತೆ ಶಾಸನವಾಗಲ್
ಶಾಸನಪದ್ಧತಿ ಲಿಖಿತಂ
ಶಾಸನಕಾದಂಬರೀ[?] ವಾಮನರಚಿತಂ ||

ಇಲ್ಲಿ, ಇದರ ರಚನೆ ಶಾಸನಪದ್ಧತಿಗನುಗುಣವಾಗಿರುವುದೆಂದು, ಕವಿ ಅದನ್ನರಿತು ನುರಿತವನಾಗಿದ್ದನೆಂದು ಹೇಳಲಾಗಿದೆ. ಅದಲ್ಲದೆ ಈ ವಾಮನ ಕವಿ, ಅಲ್ಲಲ್ಲಿ ಸಂದರ್ಭೋಚಿತವಾಗಿ ಪುರವರ್ಣನ, ದೇವತಾವರ್ಣನ, ಸಮುದ್ರ ಅದರ ದ್ವೀಪ ಕ್ಷೇತ್ರ ವಿ[ಷಯ] ವರ್ಣನ, ರಾಜಾವಳೀವರ್ಣನ ಎಂದು ಮೊದಲಾಗಿ ತಲೆಬರೆಹ ಕೊಟ್ಟಿರುವುದು ವೈಶಿಷ್ಟ್ಯಪೂರ್ಣವಾಗಿದೆ.

ಸುಮಾರು ಮೊದಲ ಅರೆವಾಸಿ ಶಾಸನದ ಬರೆಹವು ಚೆನ್ನಾಗಿದ್ದು ಬಳಿಕಿನದು ಕ್ರಮಶಃ ಹೆಚ್ಚು ಹೆಚ್ಚು ಕೆಟ್ಟುಹೋಗಿದೆ. ಇಡಿಯಾಗಿ ಉಳಿದಿರುವ ಭಾಗದ ಕೆಲವು ಪದ್ಯಗಳನ್ನು ಇಲ್ಲಿ ಕೊಟ್ಟಿದೆ :

ಸರಸಕವಿಹೃದಯಸರಸಿಜ
ದಿವಾಕರಂ ಗೋತ್ರಮಿತ್ರಚಿಂತಾಮಣಿ ಭಾ

---

1 B. K. I. Vol. II, No. 155.

ಸುರಕೀರ್ತಿ ಕೇಶವಂಗಾ
ಸರಸತಿ ಷಣ್ಮುಖರು ಮೊಗೆ ಬೇಡಿದ ಬರವಂ ||

ವಿನಯಮುದಾರಮುದ್ಘಯಶಮುನ್ನತಿಯೊಳ್ಪು ನೆಗರ್ತೆವೆತ್ತ ಪೆಂ
ಪಿನ ಕಣಿ ಮಾನವಾಕೃತಿಯ ಭಾರತಿ ರೂಪವಿಳಾಸಲಕ್ಷ್ಮಿ ಪಾ
ವನಮಭಿಮಾನ ಜಾಹ್ನವಿಯೆನಲ್ಕೆಗಳ್ದಳ್ಕತಕೀರ್ತಿ ಶಿಷ್ಟಭ
ಟ್ಟನ ಸತಿ ಪುಣ್ಯಪುತ್ರವತಿ ಸೋವಲದೇವಿಯೆ ಳಾತಳಾಗ್ರದೊಳ್ ||

ಮಲೆವರ ಗಂಡ ಮೆಚ್ಚದರ ಗಂಡ ತೋಡರ್ಪರ ಗಂಡ ದರ್ಪದೊ
ಳ್ಗಲಿಗಳ ಗಂಡ ಕೂರದರ ಗಂಡ ಸೆಣಪ್ಪರ ಗಂಡ ಬೀರದೊಳ್
ನಲಿವರ ಗಂಡ ಮುಂದೆ ಬಿರುದೆಂಬರ ಗಂಡ ರಣೈಕಗಂಡ ತಾಂ
ಛಲಿಗಳ ಗಂಡ ವೊ[೯ ?]ಡೆಯರ ಗಂಡ
ತ್ರಿವಿಕ್ರಮದೇವನುರ್ವಿಯೊಳ್ ||

## ೧೧೯. ನಾಗದೇವ

( ೧೨೧೭ )

ಕಡೂರು ತಾಲೂಕಿನ ಈಗ ಮಾದಾಪುರವೆಂದು ಹೆಸರಾಗಿರುವ ಮಾಧವಪುರದ ಅತಿಪ್ರಸಿದ್ಧವಾದ ಮಹಾಪಂಡಿತರ ಮನೆತನವೊಂದರಲ್ಲಿ ನಾಗದೇವನೆಂಬವನು ಕವಿತಿಲಕನೆನಿಸಿದ್ದನೆಂದು ಆ ಊರ ಶಾಸನದ* ಒಂದು ಪದ್ಯದಿಂದ ಗೊತ್ತಾಗುತ್ತದೆ. ಅವರದು ಗೌತಮಗೋತ್ರ. ತಂದೆಯ ಹೆಸರು ನಾಗದೇವ, ತಾಯಿ ಚಾಮವ್ವೆ. ಪದ್ಯದಲ್ಲಿ ಹೆಸರು ಬಂದ ಕ್ರಮದ ಮೇರೆಗೆ ಸೋಮನಾಥ ಮತ್ತು ಮಲ್ಲ ಎಂಬಿಬ್ಬರು ಕವಿಯ ತಮ್ಮಂದಿರು. ಆ ಪದ್ಯವಿದು :

ಶ್ರೀಮಚ್ಚಾಮವ್ವೆಗಂ ವಿಶ್ರುತವಿಮಳಯಶಂ ನಾಗದೇವಂಗವಾದ
ಭೂರ್ಮಿತ್ರಪ್ಪುತ್ರರಾರೆಂದಡೆ ಕವಿತಿಳಕಂ ನಾಗದೇವಂ ಗಭೀರೋ
ದ್ದಾಮಂ ಶ್ರೀಸೋಮನಾಥಂ ಜನವಿನುತವಚೋವಲ್ಲಭಂ
ಮಲ್ಲನೆಂದೀಂ
ತೀ ಮೂವರ್ಗೋತ್ರಚಿಂತಾಮಣಿಗಳನುಪಮ-
ಗೌತಮಾಂಕಪ್ರಗೋತ್ರರ್ ॥

---

* Ep. Car. VII, ಕಡೂರು 129.

# ೧೨೦. ಸವಣಬಲ್ಲರದೇವ

( ೧೨೨೦ )

ಅರಸಿಕೆರೆ ಕಸಬದಲ್ಲಿ ಸಹಸ್ರಕೂಟ ಜಿನಾಲಯದ ಗರ್ಭ ಗೃಹದ ಕಂಬದ ಮೇಲೆ* ಕಂಡರಿಸಿರುವ ಕೆಳಗಣ ಒಂದು ಪದ್ಯವನ್ನು ಸವಣಬಲ್ಲರ ಧೇವನು ರಚಿಸಿದಂತೆಯೂ ತಿಳಿಯುತ್ತದೆ :

ಭರದಿಂ ಜೋಳದ ಕೂಳುಮೆಣ್ಣೆಯುಮನುಂಡತ್ಯಾಸೆಯಿಂ ಪನ್ನೆರ
ಶ್ವರಿಸಂ ಕೂಡಿ ಸಹಸ್ರಕೂಟಗೃಹಮಂ ಶ್ರೀರೇಚಿದಂಡೇಶನಿಂ
ಪರಿಪೂರ್ಣಬ್ರುತನಾಗಿ ಮಾಡಿಸಿದನೀ ಸೈದ್ಧಾಂತಿಕಾಗ್ರ್ಯಂಗೆ ಸಾ
ಗರಣಂದಿಬ್ರುತಿಪಾಳಕಂಗೆ ದೊರೆಯಾರಾರಬ್ಧಿನಿರ್ವಾದಲಿ ||

ಸವಣ ಬಲ್ಲರದೇವ
ರೂವಾರಿ ನೇಮೋಜ.

* Ep. Car. XV Hn. Sup., ಅರಸಿಕೆರೆ 201.

# ೧೨೧. ಹಂಸದೇವ

(೧೨೨೧)

ವಿಷು ಸಂವತ್ಸರ [ಶ. ವ. ೧೧೪೩] ಚೈತ್ರಶುದ್ಧ ೫ ರಂದು ಹುಟ್ಟಿದ ಚಿಕ್ಕನಾಯಕನ ಹಳ್ಳಿಯ ೩೨ ನೆಯ ಶಾಸನದಲ್ಲಿ ಕೊನೆಯಲ್ಲಿ ಬಿರುದು ಹೇಳಿದ ಕವಿ ಹಂಸದೇವ ಎಂದಿದೆ. ಹೊಯ್ಸಳ ನಾರಸಿಂಹನ ಕಾಲದಲ್ಲಿ ಚಟ್ಟರಸನು ಕಟ್ಟಿಸಿದ ಚಟ್ಟೇಶ್ವರ ದೇವಾಲಯಕ್ಕೆ ದತ್ತಿಗಳನ್ನು ಬಿಟ್ಟಂತೆ ಹೇಳಿದ ಈ ಶಾಸನದಲ್ಲಿ ಮೂರು ಕಂದಪದ್ಯಗಳಿವೆ; ಬರೆಹ ಅಶುದ್ಧವಾಗಿದೆ. ಆ ಪದ್ಯಗಳಿವು :

ಪಟ್ಟಸ್ತ್ರೀ ಗಂಗಾನ್ವಯ
ಪಟ್ಟದ ಮನೆಯಾದಿ ಪೀಠ ಶ್ರೀಕೋಲಾಳಂ
ಕಟ್ಟುಗ್ರಪಾಲ ದೇವನ
........ತಂಗೆ ತಾ ಪಟ್ಟದರಸಿ ಸಾತಲದೇವಿ ||

ಗಂಗಕುಳ ತಿಳಕನೆಸೆದಿರೆ ಚಿಂ
ಬೊಂಗಳ ಕುಡುವ... ....ಗೋತ್ರಪವಿತ್ರಂ
ಸಂಗ್ರಾಮಧೀರ[ನಾನರ ?]
ಸಿಂಗಂ ಕೋಳಾಲದರಸ ಮನ್ನೆಯ ಚಟ್ಟ ||

ಚಟ್ಟರಸಂಗಂ ನೆಗಳ್ದಾ
ಚಟ್ಟರಸಿಗಮಧಿಕ ಬಲರು ಗೋತ್ರ ಪವಿತ್ರರ್
ಸೃಷ್ಟಿಯಲು ನೆಗಳ್ದ ಪುರುಷರು
ನೆಟ್ಟನೆ ಶ್ರೀಮಾಚ ಬೆನವ ಮಹದೇವರಸರ್ ||

ಜಂಗಮಕಲ್ಪಲತೆ[ಯೆ*]ಫಲ
ಮಂಗೆಡೆಗೊಂಡವೊಲುದಾರೆ ಮಾರವೆ ಪೆತ್ತಳ್

ತುಂಗಯಶವೆಂಬ ಹೊಸವೆ
ಳ್ದಿಂಗಳ ಬಿತ್ತೆನಿಪ ಭದ್ರನಂ ನಂದನನಂ ||

ಅನುದಿನವುತ್ತರೋತ್ತರ ಶುಭೋದಯಮಂ ಪಡೆದೀಗೆ ರಾಗದಿಂ
ಬೆನಕನುದಾರ ಮಾವಗ[ಮ]ನೇಕಸುರೇಂದ್ರ-
ನರೇಂದ್ರರುಂದ್ರ ಕಾಂ
ಚನ ಮಕುಟಾಳಿ[ಯಾ]ರಣ ರಣತ್ಕೃತಿ ಘೂಣಿತನೂತ್ನರತ್ನರ
ಶ್ಮಿನಿವೃತ ಪಾದಪೀಠನಿಕಟಂ ತ್ರಿಜಗದ್ಗುರು ಶಾಂತಲೇಶ್ವರಂ ||

# ೧೨೨. ನಾಗದೇವ

(೧೨೨೩)

ಚೌಂಡಿಸೆಟ್ಟಿ ಪ್ರತಿಷ್ಠಿಸಿದ ಶಂಭುದೇವಸ್ಥಾನಕ್ಕೆ ದತ್ತಿಯನ್ನು ಬಿಟ್ಟುದನ್ನು ಉಲ್ಲೇಖಿಸಿರುವ ಕಡೂರು ತಾಲೂಕು, ಕೆರೆಸಂತೆ ಗ್ರಾಮದ ಶಾಸನವನ್ನು* ಕವಿ ನಾಗದೇವನು ನಿರ್ಮಿಸಿದ್ದಾನೆ. ನಡುವೆ ೨೩ ಸಾಲುಗಳು ಸಂಪೂರ್ಣವಾಗಿಯೂ ಉಳಿದ ಭಾಗ ಅಲ್ಲಲ್ಲಿಯೂ ನಷ್ಟವಾಗಿರುವ ಈ ಶಾಸನದ ಆರಂಭ ಪದ್ಯವಿಂತಿದೆ :

ಧರೆ ರುಚಿರಕೇತಕೀ-ಮಧು
ಕರವೋಲ್ ದಂತಾಗ್ರದೊಳ್ವಿರಾಜಿಸೆ ಮಹಿಮಾ
ಕರನಾದಾದಿ ವರಾ[ಹಂ]
ವರಾಹಮಂ ನಮಗೆ ಕೂರ್ತು ಮಾಳ್ಕನವರತಂ ||

ಕೊನೆಯಲ್ಲಿ ಕವಿನಾಮನಿರ್ದೇಶವುಳ್ಳ ಪದ್ಯವಿಂತಿದೆ :

ಹರಿಹರ ಮಾಯಿದೇವಿಗಳ ಪುತ್ರನನಿಂದಿತವಾಜಿವಂಶಜೇ
ಖರನಕಳಂಕಕೀರ್ತಿ ಕಲಿಕಾಲಬೃಹಸ್ಪತಿ ಸೋಮನಾಥ ಶಂ
ಕರರನುಜಂ ಬುಧಪ್ರಿಯಗಳೆ ನಿರ್ಮಿಸಿದಂ ಕವಿ ನಾಗದೇವನೀ
ಸ್ಥಿರತರಮಪ್ಪ ಶಾಸನಮನುತ್ತಮ ಕಾಶ್ಯಪ ಗೋತ್ರವರ್ಧನಂ ||

ಕವಿ ಕಾಶ್ಯಪಗೋತ್ರದವನು; ವಾಜಿವಂಶದವನು; ಹರಿಹರ ಮತ್ತು ಮಾಯಿದೇವಿಯರ ಮಗನು. ಇವನಿಗೆ ಸೋಮನಾಥನೆಂದೂ, ಶಂಕರ ಎಂದೂ ಇಬ್ಬರು ಅಣ್ಣಂದಿರಿದ್ದರು. ೮ ಅಡಿ × ೩ ಅಡಿ ಹರವಿನ ೭೪ ಸಾಲುಗಳ ಇವನ ಶಾಸನದಲ್ಲಿ ಅಳಿದುಳಿದ ಮೂರು ಪದ್ಯಗಳನ್ನು ಇಲ್ಲಿ ಕೊಟ್ಟಿದೆ :

---

* Ep. Car VI, ಕಡೂರು 95.

ಪದುಳಂ ವಾಸಂತಿಕಾದೇವಿಯನೊಸೆದು

ತದುರ್ವೀಶನಾರಾಧಿಸುತ್ತಿ

ರ್ಪುದುಮೊಂದತ್ಯುಗ್ರರೂಪಂ ಪುಲಿ ಕಡುಮುಳಿದೆಯ್ತಂದು

ಮೇಲ್ವಾಯೆತತ್ಪಾ

ರ್ಶ್ವದೊ[ಳೊಪ್ಪಿರ್ಪ] ಮುನೀಂದ್ರಂ ಪಿಡಿದ

ಸೆಳೆಯನಿತ್ತಿಂತಿದಂ ಪೊಯ್ಸಳೆಂದೆಂ

ಬುದುಮಾತಂ ಪೊಯ್ದೊಡಂ ಪಿಂದೆಸೆದುದು ಧರೆಯೊಳ......

..........ಮನಾಮಂ ||

ಪುಲಿಯುಂ ಸೆಳೆಯುಂ ಯಾದವ
ಕುಲೋದ್ಭವೋರ್ವೀಶರೊಳೆ ಸಲುತ್ತಿರೆ ತದ್ವಂ
ಶಲಲಾಮನೊಗೆದ....... ...
........ತಮಃಪ್ರಭೇದಿ ವಿನಯಾದಿತ್ಯಂ ||

ಒದವಿದ ಪೂರ್ವಜನ್ಮಕೃತ ಪುಣ್ಯದ ಪುಂಜಮೆ ಪುಟ್ಟುವ[ಂತೆ ಪು
ಟ್ಟಿದ] ನೆಱೆಯಂಗಭೂಪತಿಗಮೇಚಲದೇವಿಗ ಮುದ್ಧತಾರಿ ಭೂ
ಭೃದಶನಿಸನ್ನಿಭಂ ವಿಬುಧಕಳ್ಪಮಹೀರುಹ ಸನ್ನಿಭಂ.......
ದಿತಜಯದಿರಾಕಳಿತ ಭೂರಿಭುಜಂ ಕಲಿ ವಿಷ್ಣುವರ್ಧನಂ ||

## ೧೨೩. ಪೋಲಾಳ್ವ

( ೧೨೧೪ )

ಹೊಯ್ಸಳ ೨ನೆಯ ನಾರಸಿಂಹನ ಮಂತ್ರಿ ಪೋಲಾಳ್ವನು ಹರಿಹರದ ಹರಿಹರೇಶ್ವರ ದೇವಾಲಯವನ್ನು ಎತ್ತಿಸಿದನೆಂದು ಅಲ್ಲಿಯ ಒಂದು ಶಿಲಾ ಶಾಸನದಿಂದ[1] ತಿಳಿಯುತ್ತದೆ. ಅಲ್ಲಿ ಬರುವ ಆ ಪೋಲಾಳ್ವ ದಂಡಾಧಿಪನ ಸುದೀರ್ಘವರ್ಣನೆಯಲ್ಲಿ ಈ ಒಂದು ಪದ್ಯವಿದೆ :

ಗುರುಧರ್ಮದ್ವಿತಯಕ್ಕೆ ನೀನೆ ದಿಟದಿಂ ಪೋಲಾಳ್ವಕೇಳ್ಮುನ್ನವಾ
ದರೊಳಿನ್ನಪ್ಪರೊಳಿಂದು ವರ್ತಿಪರೊಳಾರ್ಗುಂಟಾದುವೀ
ಧರ್ಮವಾರ್
ಹರಿಚಾರಿತ್ರಮುನೊಲ್ದು ಷಟ್ಪದದೆ ಪೇಳ್ದರ್ನಿನ್ನವೋಲ್ನಿನ್ನವೋಲ್
ಧರೆ ಚೋದ್ಯಂಬಡುವಂತಿರಾರ್ ಹರಿಹರಶ್ರೀಗೇಹಮಂ
ಮಾಡಿದರ್ ||

ಷಟ್ಪದದಲ್ಲಿ ಹರಿಚಾರಿತ್ರವನ್ನು ರಚಿಸಿದ ಈ ಪೋಲಾಳ್ವನು ಆಂಧ್ರ ದೇಶದ ನಾರಣಪುರದವನು. ತಂದೆ ಅತ್ತಿರಾಜ; ತಾಯಿ ನವಿಲಾಡೆಯಕ್ಕ. 'ಕಣ್ದೆ ಋತದನಸಮುಸಾಹಿತ್ಯದಿಂ' ಎಂದೂ ವರ್ಣಿತನಾಗಿದ್ದಾನೆ. ಮಂತ್ರ ಶಕ್ತಿಯಲ್ಲಿಯೂ ಸಮರಶಕ್ತಿಯಲ್ಲಿಯೂ ಮೇಲುಗೈಯಾಗಿದ್ದ ಪೋಲಾಳ್ವನು ಬಲ್ಲಾಳನಿಗೂ ನಾರಸಿಂಹನಿಗೂ ಅಮಾತ್ಯನಾಗಿದ್ದನು. ಇವನ ಹರಿಹರ ದೇವಾಲಯದ ನಿರ್ಮಾಣವೂ ಅದ್ಭುತವಾದುದು.

---

1 Ep. Car. XI, ದಾವಣಗೆರೆ 25.

# ೧೨೪. ಮಾದಿರಾಜ

( ೧೨೨೯ )

ಬೆಳಗಾವಿ ಜಿಲ್ಲೆಯ ಸವದತ್ತಿಯಲ್ಲಿ ದೊರೆತಿರುವ ರಟ್ಟ ಲಕ್ಷ್ಮೀದೇವನ ಕಾಲದ ಒಂದು ಶಾಸನವು ಮಾದಿರಾಜನಿಂದ ವಿರಚಿತವಾಗಿದೆ. ಇದರ ಕಾಲ ಕ್ರಿ. ಶ. ೧೨೨೯.[1] ಈ ಕವಿ ವಿಜಾಪುರ ಜಿಲ್ಲೆಯ ಕೋಲಾರದ ವಿಭುವಾದ ಕೇಶಿರಾಜನ ಮಗ. ಅನುಪಮ ಶಿವಭಕ್ತನಾದ ಕೇಶಿರಾಜನು ಶ್ರೀಶೈಲದಿಂದ ಮಲ್ಲಿಕಾರ್ಜುನಲಿಂಗವನ್ನು ತಂದು ಸವದತ್ತಿಯಲ್ಲಿ ಸ್ಥಾಪಿಸಿದುದನ್ನೂ ಆ ತನ್ನ ಎತ್ತಿಸಿದ ಗುಡಿಗೆ ದತ್ತಿಗಳನ್ನು ಬಿಡಿಸಿದುದನ್ನೂ ಈ ಶಾಸನ ಹೇಳುತ್ತದೆ. ಶಾಸನನಾಯಕನಾದ ತನ್ನ ತಂದೆಯ ಪರಿಚಯವನ್ನು ಮಾಡಿಕೊಡುವ ನೆಪದಿಂದ, ತನ್ನ ವಂಶದ ಪೂರ್ವೇತಿಹಾಸವನ್ನು ಮೂಲಪುರುಷನಿಂದ ಮೊದಲುಮಾಡಿ ಕವಿ ವಿವರಿಸಿದ್ದಾನೆ. ಅದರಿಂದ ಕವಿಯ ವಂಶಾವಳಿಯನ್ನು ಸುಲಭವಾಗಿ ಸಿದ್ಧಪಡಿಸಬಹುದು.[2] ಒಟ್ಟು ೯೩ ಸಾಲುಗಳ ವ್ಯಾಪ್ತಿಯುಳ್ಳ ಈ ಶಾಸನಕಾವ್ಯವು ೬೫ ಪದ್ಯಗಳಿಂದೊಡಗೂಡಿದೆ. ರಾಜಾದಿಗಳ ಪ್ರಶಸ್ತಿ, ದತ್ತಿಗಳ ವಿವರಣೆ ಇವನ್ನು ಮಾತ್ರ ಬಿಟ್ಟು ಉಳಿದೆಲ್ಲವೂ ಪದ್ಯದಲ್ಲಿದೆ.

ಶಾಸನದ ಕೊನೆಯಲ್ಲಿ ಕವಿ ತನ್ನ ಹೆಸರನ್ನು ತಿಳಿಯಪಡಿಸುವ ಕಂದ ಪದ್ಯವಿದು :

ಎಸೆವೀಶಾಸನಮಂ ವಿರ-
ಚಿಸಿ ಬರೆದಂ ಪೂರ್ವಜನ್ಮದೊಳ್ ಸುಕೃತಮನಾ-
ರ್ಜಿಸಿ ಕೇಶಿರಾಜವಿಭುವಿನ
ಸಿಸುವೆನಿಸಿದ ಮಾದಿರಾಜನಾವಿಭುಮತದಿಂ ||

---

1 The Royal Asiatic Society (Bombay Branch) Journal No. XXIX, Vol. X.

2 ಈ ಗ್ರಂಥದಲ್ಲಿ ಈ ಮೊದಲು ಬಂದಿರುವ ರುದ್ರಭಟ್ಟನ ಪರಿಚಯವನ್ನು ನೋಡಿ.

ಕವಿ ಕೊಟ್ಟ ತನ್ನ ವಂಶವಿವರಣೆಯಿಂದ ಈತನು ಅತ್ರಿಗೋತ್ರದ ಸಾಮೂಸಿಗ (ಸೋಮವಂಶಿಕ)ನೆಂದು ಗೊತ್ತಾಗುತ್ತದೆ. ಬನಿಹಟ್ಟಿ ಮೊದಲಾದ ೧೪ ಗ್ರಾಮಗಳ ಪ್ರಭುತ್ವ ಈ ಕವಿಯ ಮನೆತನಕ್ಕೆ ಸೇರಿತ್ತು. ಈತನ ಅಜ್ಜ, ಕೇಶಿರಾಜನ ತಂದೆ ಕೋಲಾರದ ಪ್ರಭು ಮನೆತನದ ಕನ್ಯೆಯನ್ನು ಮದುವೆಯಾಗಿದ್ದನು; ತನ್ನ ಮಾವನಿಗೆ ಗಂಡುಮಕ್ಕಳಿಲ್ಲದುದರಿಂದ ಕೋಲಾರದ ಪ್ರಭುತ್ವವನ್ನೂ ಪಡೆದಿದ್ದನು. ಈ ಶಾಸನಕವಿ ಮಾದಿರಾಜನೂ ಇವನಣ್ಣ ಮಲ್ಲಿಕಾರ್ಜುನನೂ ಸುಗಂಧವರ್ತಿ ಕಂಪಣವನ್ನಾಳುತ್ತಿದ್ದ ಮುನಿಚಂದ್ರದೇವನ ಮಂತ್ರಿಗಳಾಗಿದ್ದರು. ಈ ಮುನಿಚಂದ್ರದೇವನೂ ಕವಿಯಾಗಿದ್ದಂತೆ ತಿಳಿದುಬರುತ್ತದೆ.[1]

ಮಾದಿರಾಜ ವಿರಚಿತ ಸವದತ್ತಿ ಶಾಸನಕಾವ್ಯದಿಂದ ಕೆಲವೊಂದು ಪದ್ಯಗಳನ್ನು ಹಾಗೂ ಗದ್ಯದ ತುಣುಕನ್ನು ಇಲ್ಲಿ ಕೊಟ್ಟಿದೆ :

ಪತಿವಶವಕ್ಕುಮಿಂತು ತಮಗೆಂದು ದುರೌಷಧಮಂ ಪ್ರಯೋಗಿಪ-
ಕೃರ್ತಕೆಯರಂತಜೀಂಪೆ ಪುರುಷಕ್ಷಯ ಕಾಮಳೆ
ಪಾಂಡು ಗುಲ್ಮದಿಂ-

---

1 ಪುಷ್ಪದಂತಪುರಾಣವನ್ನು ಬರೆದ ೨ನೆಯ ಗುಣವರ್ಮನು ಈ ಮುನಿಚಂದ್ರನ ಶಿಷ್ಯ. ಆತನು ತನ್ನಾ ಕಾವ್ಯದಲ್ಲಿ ಈತನನ್ನು 'ಉಭಯಕವಿ ಕಮಲಗರ್ಭ' ಎಂದು ಹೊಗಳಿದ್ದಾನೆ. ಮಹಾಬಲಿ (ಕ್ರಿ. ಶ. ೧೨೫೪) ತನ್ನ ನೇಮಿನಾಥ ಪುರಾಣದಲ್ಲಿ 'ಅಖಿಲತರ್ಕತಂತ್ರ ಮಂತ್ರ ವ್ಯಾಕರಣ ಭರತಕಾವ್ಯನಾಟಕ ಪ್ರವೀಣಂ' ಎಂದು ಬಣ್ಣಿಸಿರುವುದು ಈ ಮುನಿಚಂದ್ರನನ್ನೇ. ಆದುದರಿಂದ ಈತನು ಘನವಿದ್ವಾಂಸನೂ ಸಂಸ್ಕೃತ ಕನ್ನಡ ಭಾಷೆಗಳೆರಡರಲ್ಲಿಯೂ ಕಾವ್ಯರಚನಾ ಸಾಮರ್ಥ್ಯವುಳ್ಳವನೂ ಆಗಿದ್ದನೆಂದು ತಿಳಿದುಬರುತ್ತದೆ. (ಕ. ಕ. ಚ. I ೩೬೭). ಆದರೆ ಈ ಸವದತ್ತಿ ಶಾಸನದಲ್ಲಿ ಮುನಿಚಂದ್ರನ ವರ್ಣನಾಪರ ಪದ್ಯಗಳು ನಾಲ್ಕಿದ್ದರೂ ಅವನ ಕವಿತ್ವ ಶಕ್ತಿಯ ದ್ಯೋತಕವಾದ ಒಂದು ಪ್ರಶಸ್ತಿಯಾಗಲಿ, ಸೂಚಕವಾದ ಒಂದು ಪದಪ್ರಯೋಗವಾಗಲಿ ಕಂಡು ಬರುವುದಿಲ್ಲ.

ದತಿಕೃಶರಾಗೆ ಬಿಜ್ಜಳಿಸುತಿಪ್ಪನರೆಂತೊ ಕುಲಾಂಗನಾಜನಂ
ಪತಿಹಿತೆ ಮಾಳಿಯವ್ವೆಯೆ ಕುಲಾಂಗನೆ
ವಾರ್ಧಿಪರೀತಧಾತ್ರಿಯೊಳ್ ||

* * * *

ವಿನುತಂ ಶ್ರೀಪರ್ವತಾಧೀಶ್ವರನ ಚರಣಮಂ ಕಾಣಲೀ
ಕೇಶಿರಾಜಂ
ಮುದದಿಂ ಪೋಪಲ್ಲಿ ತಾಂ ರಕ್ಷಿಸುವನಿಬರೊಳಂ
ಪಿಂತೆ ರೋಗಾದಿಗಳ್ತೋ-
ಱಿದೊಡಂ ಮತ್ತಿತ್ತ ಬಾರೆಂ ದಿಟವೆನಲಭವಂ ಕೂರ್ತು
ತತ್ಪುತ್ರವರ್ಗಂ
ಪದುಳಂ ನಿಶ್ಚಿಂತವಿಪ್ಪಂತಿರಿಸಿದನಧಿಕಂ
ಧಾತ್ರಿಗಾಶ್ಚರ್ಯಮಾಗಲ್ ||

ಮತ್ತಮಾ ತೀರ್ಥಯಾತ್ರೆಯೊಳ್,

ತನಗಾರುಂ ಪರಿಚರ್ಯೆಯಂ ಮುದದೆ ಮಾಡಲ್ಬಾರದಂದೂರ್ಗೆ ತ-
ನ್ನ ನೆರಂಬಾರ್ದೊಡಗೂಡಿ ಬಪ್ಪವರ್ಗೆ ಕಾಲಪ್ರಾಪ್ತಿ-
ಯಂದಾದೊಡೊ-
ಯ್ಕನೆ ಸಾವಂತವರ್ಗಗಲಾಗದೆನಿಪೀ ವೀರವ್ರತಂ ಮಲ್ಲಿಕಾ-
ರ್ಜುನದೇವಂ ದಯೆಗೆಯ್ಯಲೀ ಪ್ರಭುಗೆ ಸಲ್ದಿಂ
ಕೇಶವಂಗುರ್ವಿಯೊಳ್ ||

ಇಂತಿವಾದಿಯಾಗಿರನಂತವೀರಬ್ರತಂಗಳಿಂ ಶ್ರೀಶೈಳದ ಮಲ್ಲಿಕಾರ್ಜುನ ದೇವರಂ ಮೂಱುಸೂಳ್ದರ್ಶನಂ ಮಾಡಿ, ತತ್ಪ್ರೀತಿಯಿಂ ಪರ್ವತಲಿಂಗಮಂ ತಂದು, ಕೊಂಡಿ ಮೂಱುಸಾಸಿರದ ಬಳಿಯ ಕಂಪಣಂ ಸುಗಂಧವರ್ತಿ ಪನ್ನೆರಡಱ ಮೊದಲ ಬಾಡಂ ಶ್ರೀಮದ್ರಾಜಗುರುಗಳ್ ಮುನಿಚಂದ್ರದೇವರಾಳ್ಕೆ ವಾಡಂ ಪಟ್ಟಣಂ ಸುಗಂಧವರ್ತಿಯ ಪೊಱವೊಳಲ ನಾಗರಕೆಱೆಯಲಿ

ತನ್ನ ತಂದೆ ಮಲ್ಲಿಕಾರ್ಜುನನ ಪೆಸರೊಳ್ ಶ್ರೀಮಲ್ಲಿನಾಥದೇವರ ಪ್ರತಿಷ್ಠೆಯಂ ಮಾಡಿ,—

ಎಲ್ಲ ಶಾಸನಗಳಲ್ಲಿ ಕೊನೆಗೆ ಸಾಮಾನ್ಯವಾಗಿ ಬರುವ 'ಸ್ವದತ್ತಾಂ....' ಹಾಗೂ ಹಲಕೆಲರಲ್ಲಿ ಬರುವ 'ಮದ್ವಂಶಜಾಃ....' ಎಂಬ ಫಲಶ್ರುತಿಯ ಸಂಸ್ಕೃತ ಶ್ಲೋಕಗಳನ್ನು ಕೊಟ್ಟಿರುವುದರ ಜೊತೆಗೆ ಅವುಗಳನ್ನು ಪದ್ಯ ರೂಪದಲ್ಲಿ ಕನ್ನಡಕ್ಕೆ ಪರಿವರ್ತಿಸಿಯೂ.ಮಾದಿರಾಜನು ಕೊಟ್ಟಿದ್ದಾನೆ :

ತನ್ನಿತ್ತುದ ಮೇಣನ್ಯರು-
ಲೋನ್ನತರಿತ್ತುದುಮನವನಿಯುಂ ಧರ್ಮಾರ್ಥಂ
ಮನ್ನಿಸದಳಿದಾ ಮನುಜಂ
ಮುನ್ನಂ ಕ್ರಿಮಿಯಾಗಿ ಬಳಿಕೆ ನರಕಕ್ಕಿಳಿಗುಂ ||

ತಾನೋಲಗಿಸಿದ ನೃಪಕುಲ-
ದಾ ನೃಪರಕ್ಕನ್ಯಭೂಪರಕ್ಕೀ ಧರ್ಮ-
ಕ್ಕೇನುಮನಳಿವಂ ತಾರದ-
ಡಾ ನೃಪರಿಗವಿಂದೆ ಮುಗಿದ ಕಯ್ಯಿಂದಿರ್ಪೆಂ ||

ಇದಾ ಕೇಶಿರಾಜನ ವಚನ.

ಮೂಲದಲ್ಲಿ 'ಭೂಯೋ ಭೂಯೋ ಯಾಚತೇ ರಾಮಭದ್ರಃ—' 'ಶ್ರೀರಾಮಭದ್ರನು ಮತ್ತೆ ಮತ್ತೆ ಬೇಡಿಕೊಳ್ಳುತ್ತಾನೆ'-ಎಂದು ಸಾಮಾನ್ಯ ರೀತಿಯಲ್ಲಿದ್ದ ಮಾತನ್ನು ಮಾದಿರಾಜ 'ಆ ನೃಪರಿಗೆ (ಮುಂದಣ ಅರಸರಿಗೆ) ನಾನು (ಕೇಶಿರಾಜನು) ಇಂದೇ ಕೈಮುಗಿದುಕೊಂಡಿರುವೆ' ಎಂದು ಅರ್ಥ ವಿಶೇಷವನ್ನು ತುಂಬಿ ಅನುವಾದಿಸಿದ್ದಾನೆ. ಬಸವಣ್ಣನವರು ತಮ್ಮೊಂದು ವಚನದಲ್ಲಿ 'ಮುಗಿದ ಕಯ್ಯಾಗಿರಿಸು' ಎಂದಿರುವುದನ್ನು ಬಳಸಿಕೊಂಡು ಮಾತಿಗೆ ಹೆಚ್ಚಿನೊಂದು ಅಂದವನ್ನು ತಂದಿದ್ದಾನೆ.

## ೧೨೫. ಶ್ರೀವಿಜಯರ್ ದಶಕೀರ್ತಿದೇವರ್

(೧೨೩೪)

ಚನ್ನಗಿರಿ ೫೨ನೆಯ ಶಾಸನವನ್ನು ವೀರನಾರಸಿಂಹನ ಆಳಿಕೆಯಲ್ಲಿ ೧೨೩೪ ರಲ್ಲಿ ಬರೆದಿದ್ದಾನೆ.* ಶಾಸನದ ಅಂತ್ಯದಲ್ಲಿ ಹೇಳಿರುವ "ಶ್ರೀವಿಜಯರ್ ದಶಕೀರ್ತಿದೇವರ್ ವಿರಚಿಸಿದರ್ ಸೇವ್ಯಶಾಸನಕೃತಿಯಂ" ಎಂಬ ಭಾಗದಿಂದ ಕವಿಯ ಹೆಸರು ತಿಳಿಯುತ್ತದೆ. ದ್ವಿಕವಿಕರ್ತೃಕವೆಂದು–ಶ್ರೀವಿಜಯ ಮತ್ತು ದಶಕೀರ್ತಿದೇವರ್ ಎಂದು– ತೋರುತ್ತದೆ. [ನೃಪತುಂಗನ ಕಾಲದಿಂದ ಈವರೆಗೆ ಶ್ರೀವಿಜಯವೆಂಬ ಹೆಸರು ಹೀಗೆಯೇ ಅನೇಕ ಸಲ ಗೊಂದಲ ಹಾಕಿದೆ.] ಇವನ ಒಂದು ಪದ್ಯ :

ನರಪತಿ ನಾರಸಿಂಹನೊಳಿದಿರ್ಚಿದೊಡೆಚ್ಚರದೆಂಬ ಭೀತಿಯಿಂ<br>
ಹರಣದ ಹಾನಿಗಂಜಿ ಜವನಂ ಮಱೆವೊಕ್ಕು<br>
ಬರ್ದುಕಂಕುವೋಪ ರಾ<br>
ಯರ ನಡುಬೆನ್ನೊಳುಂಡಿಗೆಯನೊತ್ತುವೆನೆಂದಮೃತಾಂಶು<br>
ತಾಳ್ದನೊಂ<br>
ದೆರಳೆಯನೆಂದೊಡೇನ್ಪೊಗಟ್ವುದುನ್ನತಿಯಂ ಶಶಿವಂಶರತ್ನನಾ ॥ ೧ ॥

---

* ಶಕಚ ೮.

# ೧೨೬. ಚಿದಾನಂದಕವಿ

(೧೨೩೪)

ಈತನು ಮಂಡ್ಯದ ೧೨೧ ಮತ್ತು ೧೨೨ ನೆಯ ಶಾಸನವನ್ನು ಬರೆದಿದ್ದಾನೆ.* ಎರಡನೆಯ ಶಾಸನದ ಕೊನೆಯಲ್ಲಿ ಬರುವ,

> ಧರೆವೊಗಟೆ ಚಿದಾನಂದಂ
> ವಿರಚಿಸಿದಂ ಸತ್ಕವೀಶ್ವರಂ ಶಾಸನಮಂ
> ಪರಮಪ್ರಕಾಶಯೋಗೀ-
> ಶ್ವರತನಯಂ ಬ್ರಹ್ಮವಿದ್ಯೆಗಾಸ್ಪದರೂಪಂ ॥ ೧ ॥

ಎಂಬ ಪದ್ಯದಿಂದ ಪರಮಪ್ರಕಾಶಯೋಗೀಶ್ವರನ ಮಗನಾದ ಚಿದಾನಂದ ಎಂಬ ಸತ್ಕವೀಶ್ವರನು ಇದನ್ನು ರಚಿಸಿದನೆಂದು ತಿಳಿಯುತ್ತದೆ. ಇವನು ಬ್ರಹ್ಮವಿದ್ಯೆಯನ್ನು ಬಲ್ಲವನಾಗಿದ್ದನು. ಮೊದಲನೆಯ ಶಾಸನವನ್ನು ಹೊಯ್ಸಳ ನಾರಸಿಂಹನ ಕಾಲ [೧೨೩೪] ದಲ್ಲಿಯೂ ಎರಡನೆಯದನ್ನು ಸೋಮೇಶ್ವರನ ಕಾಲ[೧೨೩೭]ದಲ್ಲಿಯೂ ಬರೆದಿದೆ. ಅವನ ದೇವಾಲಯ :

> ಮೊದಲಿಂದಂ ಕಲಶಂಬರಂ ಮೆಱೆವ ನಾನಾಚಿತ್ರ ಪತ್ರಂಗಳಿಂ
> ಮುದಮಂ ಬೀಱುವ ಭಾರತಾದಿ ಕಥೆಯಿಂ ಮೆಯ್ವೆತ್ತ
> ಕೂಟಂಗಳಿಂ
> ದಿದು ಪಾಂಚಾಳಿಕೆ ತಳ್ತ ಮೇರುಗಿರಿಯೋ ಪೇೞೆಂಬಿನಂ
> ವಿಭ್ರಮಾ-
> ಸ್ಪದಮಾಗಿರ್ಪುದು ಮಲ್ಲಿಕಾರ್ಜುನ........ದೇವಾಲಯಂ ॥ ೨ ॥

---

* ಕಕಚ ೧.

# ೧೨೭. ಸೋಮನಾಥಪಂಡಿತ

(೧೨೩೪)

ಜಯ [ಶಕ ೧೧೫೬] ಮತ್ತು ಮನ್ಮಥ ಸಂವತ್ಸರಗಳ ಸಂಗತಿಗಳನ್ನು ಉಲ್ಲೇಖಿಸಿರುವ, ಅರಸಿಕೆರೆ ತಾಲೂಕಿನ ಹಾರನಹಳ್ಳಿ ಗ್ರಾಮದ ಶಾಸನದಲ್ಲಿ[1] ಅದರ ಕರ್ತೃವಿನ ವಿಷಯವಿಂತು ಬಂದಿದೆ :

"ಶ್ರೀಮದಾನಂದ ಬೋಧಪ್ರಭುಗಳ ದಾಸ ಗ[ಣಕ*] ಕುಳತಿಳಕ ಸುಕವಿಕಂಠಾಭರಣ ಸೋಮನಾಥಪಂಡಿತರು ಪದ್ಯಂಗಳ ಹೇಳಿದರು. ಉಭಯ ಹಸ್ತಲೇಖನ ಕುಶಲಸಪಧಾನ ಚಕ್ರವರ್ತಿ ಶ್ರೀಕರಣದ ವಿಶ್ವನಾಥದೇವ ಬರೆದ." ಎಂದರೆ ಸುಕವಿ ಕಂಠಾಭರಣನೆನಿಸಿದ ಸೋಮನಾಥನು ಈ ಶಾಸನದಲ್ಲಿಯ ಪದ್ಯಗಳನ್ನು ರಚಿಸಿಕೊಟ್ಟನೆಂದೂ ಉಳಿದ ಗದ್ಯಭಾಗವನ್ನು ಬರೆಹಗಾರ ವಿಶ್ವನಾಥದೇವನು ರಚಿಸಿಕೊಂಡನೆಂದೂ ತಿಳಿದುಬರುತ್ತದೆ. ಈ ಲೇಖಕನು ಸಾಮಾನ್ಯನಲ್ಲ— ಎರಡು ಕೈಗಳಿಂದಲೂ ಬರೆಯುವಲ್ಲಿ ನಿಷ್ಣಾತನು. ಕವಿಯು ಗುರುವಾಗಿದ್ದ ಶ್ರೀಮದಾನಂದಬೋಧಪ್ರಭುಸಿಂಡವಿಗೆಯ ನಿವಾಸಿಯೆಂದು ತಿಳಿದುಬರುತ್ತದೆ.

ಸೋಮನಾಥಪುರವಾದ ಹಾರುವನಹಳ್ಳಿ ಮಹಾಜನಗಳು ಲಕ್ಷ್ಮೀನರಸಿಂಹ ದೇವಾಲಯಕ್ಕೆ ಬಿಟ್ಟ ದತ್ತಿಗಳನ್ನು ತಿಳಿಸುವ ಈ ಶಾಸನದ ಕೆಲವು ಪದ್ಯಗಳನ್ನು ಉದ್ಧರಿಸಿ ಕೆಳಗೆ ಕೊಟ್ಟಿದೆ.

ಉರುತರ ಯಾದವಾನ್ವಯ ಸುಧಾಬ್ಧಿ ಸಮುದ್ಭವ ಕಲ್ಪವಲ್ಲಿಯಂ
ತಿರೆ ಸಕಳದ್ವಿಜವ್ರಜದಭೀಷ್ಟ ಫಲಂಗಳನಿತ್ತು ತಾಂ ವಿಕ
ಸ್ವರನವಕೌಮುದೀವಿಶದ ಕೀರ್ತಿಯನಾಳ್ದ ಸೆದೊಪ್ಪಿ ತೋಱುವ
ಕ್ಷ್ವರಪತಿ ನಾರಸಿಂಹನ ಸಹೋದರಿ ಸೋವಲದೇವಿ
ಧಾತ್ರಿಯೊಳ್ ||

---

1 Ep. Car. V-2, ಅರಸಿಕೆರೆ 123.

ಅಲಘುತರದಾನಧಾರಾ
ಜಲದಿಂ ಕೀರ್ತಿಲತೆ ಕೊರ್ವಿಪರ್ವುವಿಸಂ ಸೋ
ವಲದೇವಿ ಮಾಡಿದಳ್ ಭೂ
ತಳದೊಳ್ ಶ್ರೀಸೋಮನಾಥಪುರಮಂ ಸ್ಥಿರಮಂ ||

ವರಭೂದೇವರ್ ಛಂದಃ
ಪರಿಣತರತಿ ನಿಶಿತ ಶಾಸ್ತ್ರಬಲಸಂಪನ್ನರ್
ಪರಮಕವೀಶ್ವರರು ನರೇ
ಶ್ವರರೊಪ್ಪಮನಪ್ಪುಕೆಯ್ವರಂತಾಪುರದೊಳ್ ||

ಪರಮಮುನಿವರಿಷ್ಟಂ ಬ್ರಹ್ಮಕರ್ಮೈಕನಿಷ್ಟಂ
ನಿರುಪಮತರವೃತ್ತಂ ಶಾಂತಚಿತ್ತಂ ತಪಸ್ವೀ
........ ಶದಿಶಾಂತಂ ದಾಂತನಾಮ್ನಾಯವಿದ್ಯಾ
ಪರಿಣತ ಜಿತವೇಧಂ ಶ್ರೀಮದಾನಂದ ಬೋಧಂ

ಈ ಪಂಡಿತಸೋಮನಾಥನಲ್ಲದೆ ಹಾರನಹಳ್ಳಿಯ ವಿಪ್ರವರ್ಗದಲ್ಲಿ ಬೇರೆ ಕವಿಗಳೂ ಛಂದಃಪರಿಣತರೂ ಇದ್ದರೆಂದು ಇಲ್ಲಿಯ ಪದ್ಯವೊಂದರಿಂದ ಗೊತ್ತಾಗುತ್ತದೆ.

# ೧೨೮. ವೈಜನಾಥ

(೧೨೪೦)

ಯಾದವ ಸಿಂಘಣನ ಕಾಲದಲ್ಲಿ ಧಾರವಾಡ ಜಿಲ್ಲೆಯ ಕುಂದ-ಗೋಳ ಗ್ರಾಮದ ಕ್ರಿ. ಶ. ೧೨೪೦ ರ ಶಾಸನವೊಂದರಲ್ಲಿ[1] ವೈಜನಾಥ ಕವಿಯ ಉಲ್ಲೇಖ ಬರುತ್ತದೆ. ಶಾಸನ ಅರ್ಧಭಾಗ ಸಂಸ್ಕೃತದಲ್ಲಿ ಅರ್ಧ ಭಾಗ ಕನ್ನಡದಲ್ಲಿ ಇದೆ. ಅರಸುಗಳ ಹಾಗೂ ಊರ ವರ್ಣನೆ ಸಂಸ್ಕೃತ ದಲ್ಲಿದೆ; ಪದ್ಯರೂಪದಲ್ಲಿದೆ. ಈ ಸಂಸ್ಕೃತ ಭಾಗದ ಕೊನೆಯಲ್ಲಿ ಶಾಸನ ಮಧ್ಯದಲ್ಲಿಯೇ 'ವೈಜನಾಥಕೃತಿಃ' ಎಂದಿರುವುದರಿಂದ ಇವನು ಸಂಸ್ಕೃತ ಭಾಗವನ್ನು ಮಾತ್ರ ರಚಿಸಿಕೊಟ್ಟಂತೆ ತೋರುತ್ತದೆ. ಮುಂದಿನ ಭಾಗದಲ್ಲಿ ಮಹಾಜನಪ್ರಶಸ್ತಿ ಮತ್ತು ದಾನವಿವರಣೆ ಕೇವಲ ಕನ್ನಡ ಗದ್ಯದಲ್ಲಿರುವುದ ರಿಂದ— ಕನ್ನಡ ಪದ್ಯಾಭಾವದಿಂದ— ಈ ವೈಜನಾಥನು ಕನ್ನಡದಲ್ಲಿ ಪದ್ಯ ರಚನೆ ಮಾಡಬಲ್ಲವನಾಗಿದ್ದನೆಂಬುದಕ್ಕೆ ಪುಷ್ಟಿದೊರೆಯುವುದಿಲ್ಲ. ಇವನು ಕೇವಲ ಸಂಸ್ಕೃತ ಕವಿಯೆಂದು ಎಣಿಸಬೇಕಾಗುತ್ತದೆ.

ಈ ಕೆಳಗಣ ಸಂಸ್ಕೃತ ಪದ್ಯವು ಕುಂದಗೋಳವನ್ನು ವರ್ಣಿಸುತ್ತದೆ.

ಅಸ್ತಿ ಕ್ಷೋಣೀನಿವಾಸಃ ಶ್ರುತಿತತಿ ವಸತಿಃ
ಶ್ರೀವಧೂಲಾಸ್ಯಭೂಮಿಃ
ಶ್ರೀವತ್ಕುಂಡುಂಗುಳಾಖ್ಯೋ ದಶಮುಖವಿಜಯೀ
ರಾಮದತ್ತಾಗ್ರಹಾರಃ
ಯತ್ರಾಜಸ್ರಾಧ್ವರಾಳೀ ನಿಯಮಿತಪಿಳಸನ್ಮಂತ್ರ ಪೂತಾಹುತೀನಾಂ
ಸಾರ್ಥೈಃ ಸಂಪ್ರಾಪ್ತಶಕ್ತಿಸ್ತ್ರಿಭುವನಮಭಯಂ ಪಾತಿ
ದೇವೋಽಪಿ ಶಕ್ರಃ ||

# ೧೨೯. ದೇವ

( ೧೨೪೪ )

ದೇವನು ವಿಜಾಪುರ ಭಾಗದ ಶಾಸನಕವಿ. ಸಿಂದಗಿ ತಾಲೂಕಿನ ಕಲಕೇರಿಯ ಪ್ರಭು (ಧರೆಯೆರೆಯ) ಬೀಚಿದೇವನ ಮಗನಾದ ಪಾಯಿಗನ ಧರ್ಮಸಾಮ್ರಾಜ್ಯದ ಮೆಯ್ಸಿರಿಯೆನಿಸಿದ (ಮಗ ?) ಕುರುಹಿನ ಕವಿ ಇವನು. ತನ್ನನ್ನು 'ಕನ್ನಡ ಸರಸತಿ' ಎಂದು ಕೊಂಡಿರುವ ದೇವನು ಕಲ ಕೇರಿಯ ಕ್ರಿ. ವ. ೧೨೪೪ರ ೧೦೨ ಪಂಕ್ತಿಗಳಲ್ಲಿ ಶಾಸನಕಾವ್ಯಲತೆಯನ್ನು[1] ಹಬ್ಬಿಸಿದ್ದಾನೆ. ಈ ಲತೆ ೫೩ ಕನ್ನಡ ಪದ್ಯ ಕುಸುಮಗಳು ಅರಳಿವೆ. ಕೊನೆಯ ಕಂದಪದ್ಯದಲ್ಲಿ,

> ಧರೆಯೊಡೆಯರೆಯ ಬೀಚೀದೇವನ
> ವರಸುತ ಪಾಯಿಗನ ಧರ್ಮಸಾಮ್ರಾಜ್ಯದ ಮೆ
> ಯ್ಸಿರಿ ಕುಱುಹಿನ ಕವಿ ಕನ್ನಡ
> ಸರಸತಿ ವಿರಚಿಸಿದ ದೇವನೀ ಶಾಸನಮಂ ||

ಎಂದು ಹೇಳಿದ್ದಾನೆ.

ಶಾಸನದ ದೋಷಯುಕ್ತವಾದ ಬರೆವಣಿಗೆ, ಕೆಲವೊಮ್ಮೆ ಕಲ್ಲು ಸವೆದ ಅಸ್ಪಷ್ಟವಾದ ಉಳಿಮೆಯಿಂದಾದ ತಪ್ಪೋದಿಕೆ ವಾಚನಕ್ಕೆ ತೊಡಕನ್ನೂ ಅರ್ಥಕ್ಕೆ ಸಂದಿಗ್ಧತೆಯನ್ನೂ ಉಂಟುಮಾಡುತ್ತದೆ. ಶುದ್ಧ ಪಾಠವನ್ನು ಗುರುತಿಸುವುದು ಕಠಕಷ್ಟ. ಛಂದೋಭಂಗದೆಡೆಯಲ್ಲಿ ವಾಚನಸುಗಮತೆ ಗಾಗಿ ತಕ್ಕಮಟ್ಟಿಗೆ ಶುದ್ಧೀಕರಿಸಿ ಕೆಳಗಣ ಪದ್ಯಗದ್ಯಗಳನ್ನೆತ್ತಿಕೊಟ್ಟಿದೆ; ಮೂಲಪಾಠಗಳನ್ನು ಅಡಿಯಲ್ಲಿ ತೋರಿಸಿದೆ :

ವಚನ || ಆ ಸಮಸ್ತಭವ್ಯಜನಾಭಿವಂದಿತಪದಕಮಳಂ ಕಮಳಸೇನ-ಭಟ್ಟಾರಕದೇವರಖಿಳಭಟ್ಟಾರಕದೇವರಖಿಳಧರಾವಳಯ ವಿಳಸಿತ ದಿವ್ಯ-ತೀರ್ಥಾಭಿವಂದನಾನಿಮಿತ್ತ ವಿಹಾರಿಸುತ್ತ ಬಂದು,

---

1 B. K. I. Vol IV, No. 202.

ನೆಟ್ಟನೆ ಜಂಬೂದ್ವೀಪ
ಕ್ಕಿಟ್ಟಳ ಹಗರಟಗೆ ನಾಡು ನೊಸಲಾ ನೊಸಲಿಂ
ಗಿಟ್ಟಸೆವ ತಿಳಕದಂತಿರೆ
ಪಟ್ಟಣವಿದು ರಾಯಮುಱಿಗೆ ಕಲುಕೆಱೆಯೆಸೆಗುಂ ||

ಆದಲ್ಲದೆಯುಂ,

[1]ದಯುದಿರವೀಡು[1] ದಾನದ ತವರ್ಮನೆ ಧರ್ಮದ ಜನ್ಮಭೂಮಿ ನೀ
ತಿಯ ನಿಜದಾಗರ[ಂ*] ಮುಹಿಯ[—*]ಗರಕುತ್ತಮ
[ವಾದ*]ಭವ್ಯಕೋ
ಟಿಯ ಮನಮೆಚ್ಚು ಮೆಚ್ಚುವೊಲ[2]ನೆಂಬನೆಗಂ[2] ಸೊಗಯಿಪ್ಪುದೀಧರಿ
ತ್ರಿಯೊಳತಿ ಶೋಭೆಯಿಂ ಸೊಬಗನಾಂತು ಕಲು[3]ಕ್ಕೆಱೆ[3]ಯೆಂಬ
ಪಟ್ಟಣಂ ||

[ಅಂತೆಸೆವ]ದಿಬ್ಯತೀರ್ಥಸ್ಥಳ ಕಲುಕೆಱೆಯೊಳಶೇಷಭವ್ಯಜನ ಚೂಡಾಮಣಿ ಶ್ರೀಧರ್ಮರಕ್ಷಾಮಣಿ ಪಾಯಿಸೆಟ್ಟಿಯರ್ಗಂ [4]ಅವರ್[4] ತೀರ್ಥಕರ ಪ್ರತಿಷ್ಠೆಯ ಚೈತಾಲ್ಯಯುಮಂ ಸುಮುಹೂರ್ತದಿಂ ನಿರ್ಮಿಸುವುದೆಂದು ಬೆಸಸೆ ತದ್ಗುರೂಪದೇಶವಾಕ್ಯಮನುತ್ತಮಾಂಗದೊಳಾಂತ ಮಹಿಮನಾತನ ಕುಲಾನ್ವಯ ಪ್ರಭಾವ [ಮಂ]ತೆಂದೊಡೆ,

* * * *

ಕ್ಷೋಣೀಮಧ್ಯದೊಳಂಕುರಂ ನೆಗರ್ದು [5]ಪರ್ಬೀ[5]ಲೋಕವಿದ್ವಜ್ಜನ
ಶ್ರೇಣೀಹಸ್ತತಳಂಗಳಲ್ಲಿ ಫಳಮಾಯ್ತ್ರಾಕಾಧಿನಾಥಾಂಗನಾ
ವೇಣೀಭಾರದ ಮೇಲೆ ಪೂತುದಮಮಾ ಕಾಯಿಲ್ಲ ಹೂವಲ್ಲಿದೇ
[6]ಜಾಣೋ[6] ಬೀಚನ ಸೂನು ಪಾಯನ ಯಶೋವಲ್ಲೀಲತಾಡಂಬರಂ||

---

1 ಮೂ. ದಮುದಿರವಿದು.
2 ಮೂ. ನ್ನೆಂಬನೆನ್ನೆಗಂ.
3 ಮೂ. ಕೆಱೆ.
4 ಮೂ. ಅವನ.
5 ಮೂ. ದರ್ಬೀ.
6 ಮೂ. ಜಾಣ್ಮೆ.

# ೧೩೦. ಚೇರೆಯ ಅಲ್ಲಾಳಬುಧ
# ಕಬ್ಬದ ದಾಮೋದರ

( ೧೨೪೯ )

ಚಿಕ್ಕಮಗಳೂರಿನ ೨೦ ನೆಯ ಶಾಸನವನ್ನು ಕಬ್ಬದ ದಾಮೋ-ದರನೂ...... ಚಕ್ರೇಶ ಚೇರೆಯ ಅಲ್ಲಾಳಬುಧನೂ ಬರೆದರೆಂದು,

ಕವಿ ಕಬ್ಬದ ದಾಮೋದರ
........ಚಕ್ರೇಶ ಚೇರೆಯುಲ್ಲಾಳ ಬುಧಂ
ಸವಿನಯದೆ ಪೇಟ್ದರೆನೆ ಪೞ
ವವನೆಂಬವನಾವ........ಕವಿಗಳ ಕೃತಿಯುಂ || ೧ ||

ಎಂಬ ಪದ್ಯದಿಂದ ತಿಳಿಯುತ್ತದೆ. ಈ ಶಾಸನವು ೧೨೪೯ ರಲ್ಲಿ ಬರೆದುದು.
**ಒಂದು ಪದ್ಯ :**

ಮುನಿದನೆ ಮೂಜುರಾಯರಿದಿರಾಂತೊಡೆ ಗೆಲ್ದಪನೀವೆನೆಂದು ಪೂ-
ಣ್ದನೆ ಜಗತೀತಳಂ ನೆಱೆಯೆ ಬೇಡಿದೊಡಿತ್ತಪನೊಲ್ದು ಕಾವೆನೆಂ-
ದನೆ ಜವನಟ್ಟಿ ಕೊಂದಪೆನೆನುತ್ತಿರೆ ಕಾದಪನೆಂದೊಡಿನ್ನದಾರ್
ನಗೆಣೆ ವೈರಿವಾರಣವಿದಾರಣಕೇಸರಿ ಕೇಶಿರಾಜನೊಳ್ || ೨ ||

# ೧೩೧. ನಯಕೀರ್ತಿದೇವ

( ೧೨೫೫ )

ಹಾಸನ ತಾಲೂಕಿನ ಹೆರಗುಗ್ರಾಮದ ಕ್ರಿ. ಶ. ೧೨೫೫ ರ ಒಂದು ಶಾಸನದಲ್ಲಿ[1] ನಯಕೀರ್ತಿದೇವನೆಂಬ ಯತಿಯ ವರ್ಣನೆ ಬರುತ್ತದೆ. ಆ ಪ್ರಕಾರ ಅವನು ವಸ್ತುಕ ಕವಿತ್ವದಲ್ಲಿ ಪ್ರವೀಣನಾಗಿದ್ದನೆಂದು ತೋರುತ್ತದೆ. ಇವನು ವ್ಯಾಕರಣ ಶಬ್ದಶಾಸ್ತ್ರ ಸಿದ್ಧಾಂತಗಳಲ್ಲಿಯೂ ನಿಷ್ಣಾತನಾಗಿದ್ದನು. ಅವನನ್ನು ಕುರಿತು ವರ್ಣನಪದ್ಯ :

ಸಕಳವ್ಯಾಕರಣಾರ್ಥಶಾಸ್ತ್ರಚಯದೊಳ್ ಕಾವ್ಯಂಗಳೊಳ್ ಮಿ[ಕ್ಕ]ವಸ್ತುಕ ...... ಕವಿತ್ವದೊಳ್ ನೆಗಳ್ದ ಸಿದ್ಧಾಂತಂಗಳೊಳ್ ಪಾರಮಾರ್ಥಿಕದೊಳ್ .... ಕಿತದೊಳ್ ಸಕಳೆಯೊಳ್ ಪಾಂಗಿನ ನುಡಿಯ ಕನಾದಂ ನಯಕೀರ್ತಿದೇವ ಯತಿಪಂ ಸಿದ್ಧಾಂತ ಚಕ್ರೇಶ್ವರಂ ||

---

1 Ep. Car. V-2, ಹಾಸನ 57.

# ೧೩೨. ಗೋಪಿರಾಜ

(೧೨೬೫)

ವಿಜಾಪುರ ಜಿಲ್ಲೆಯ ಬಾಗೇವಾಡಿ ತಾಲೂಕಿನಲ್ಲಿರುವ ಇಂಗಳೇಶ್ವರ ಎಂಬೂರ ನಾರಾಯಣದೇವರ ಗುಡಿಯ ಒಂದು ಶಾಸನವನ್ನು[1] ಗೋಪಿರಾಜ ಎಂಬ ಕವಿ ರಚಿಸಿದ್ದಾನೆ. ಅವನು ಹರಿತಗೋತ್ರದ ಶೈವಬ್ರಾಹ್ಮಣ. ಕವಿಯ ಪರಿಚಯ ಶಾಸನದ ಕೊನೆಕೊನೆಯಲ್ಲಿ ಈ ಕೆಳಗಣ ಕಂದಪದ್ಯದಲ್ಲಿ ಬಂದಿದೆ :

ಗುರುಚರಿತಸದಾಶಿವ
ಚರಣಾಂಬುಜಭೃಂಗ ಹರಿತಗೋತ್ರೋದ್ಭವನೊ-
ಪ್ಪಿರಲೀ ಶಾಸನಗಬ್ಬಮ
ವಿರಚಿಸಿದಂ ಗೋಪಿರಾಜ[2] ನಿಳೆಗಿಂತೆಸೆದಂ ||

ಈ ಶಾಸನದ ಬರೆಹದ ಕ್ಷೇತ್ರ ೩೫'' × ೨೫''. ಅದರೊಳಗೆ ೬೯ ಸಾಲುಗಳನ್ನು ಕಂಡರಿಸಲಾಗಿದೆ. ಈ ಚಿಕ್ಕ ಚಂಪೂಕವನದಲ್ಲಿ ಕನ್ನಡ ಪದ್ಯಗಳು ೧೪ ಇವೆ.

ಯಾದವ ನಾರಾಯಣ ಶ್ರೀಮಹಾದೇವರಾಯನು ರಾಜಧಾನಿ ದೇವಗಿರಿಯಲ್ಲಿ ರಾಜ್ಯಂಗೆಯ್ಯುತ್ತಿರಲಾಗಿ, ಸುಂಬರ ಚೌಡರಸನ ಮಾಡಿಸಿದ ಊರೊಡೆಯರ್ಗೇರಿಯ ಗೋಪಾಳರಾಜದೇವರ ದೇವಸ್ಥಾನಕ್ಕೆ ಬಿಟ್ಟ ಕೆಲವು ದತ್ತಿಗಳ ಉಲ್ಲೇಖ ಇದರಲ್ಲಿ ಬಂದಿದೆ. ಶಾಸನದ ಮೊದಲಲ್ಲಿಯೂ ಕೊನೆಯಲ್ಲಿಯೂ 'ಶ್ರೀಗೋಪೀನಾಥ ಶರಣು' ಎಂಬ ಮಾತಿದೆ. ಶಂಭುಸ್ತುತಿಯ ಸರ್ವಸಾಮಾನ್ಯ ಸಂಸ್ಕೃತ ಶ್ಲೋಕದ ತರುವಾಯ ಗೋಪಿನಾಥನ ಸ್ತೋತ್ರ

---

1 B. K. I. Vol. IV, Gen. No. Ins. in N. K. & K. S., p. 91.

2 ಕುಂದಣಗಾರರ ಪಾಠ (Ins. in N.K & K.S ) ವಿರಚಿಸಿದ ಗೋಪಾಳರಾಜ.

ಪದ್ಯವಿದೆ. ಕೊಟ್ಟ ದತ್ತಿಗಳನ್ನು ಕೂಡ, ಹೊಲವೇರಿ ಮೊದಲಾದುವು ಸಹಿತವಾಗಿ, ಪದ್ಯಗಳಲ್ಲಿಯೇ ಹೇಳಿರುವುದು ಶಾಸನಕವಿ ಗೋಪಿರಾಜನ ವೈಶಿಷ್ಟ್ಯವಾಗಿದೆ.

ಮಾದರಿಗಾಗಿ ಕೆಲ ಪದ್ಯಗಳನ್ನು ಇಲ್ಲಿ ಕೊಟ್ಟಿದೆ :

ಶ್ರೀಮದ್ವಿದ್ಯಾಧರೇಂದ್ರೋರಗಸುರನತ ಶ್ರೀಪಾದಪಂಕೇಜರಮ್ಯೋ-
ದ್ದಾಮಂ ಕ್ಷೀರಾಬ್ಧಿವಾಸಂ ಸುರಭುಪಿರುಹಮಂ ನೆರೆ
ಮಿತ್ರೌ......ಬಂಗಿಯೋ-
ಳಾಮೂಱುಂ ಲೋಕಮಂ ರಕ್ಷಿಸಲು ಮುದದಿ ವೇಣ್ವಾದಮಂ
ಮಾಳ್ಪ ಲಕ್ಷ್ಮೀ-
ರಾಮಂ ಗೋಪಾಳಕೃಷ್ಣಂ ಸಲಹುವನೆರಡೈನೂರ್ವರಂ ಪ್ರೇಮದಿಂದಂ ||

ಸಿರಿವಾಗಿಲಿಂದೆ ಬಡಗಲು
[ಕರ]ವೊಪ್ಪುವ ಕಲ್ಲಗಾಣವಾಚಂದ್ರಾರ್ಕಂ
ಬರ ನಡೆವಂತಿರೆ ತಾವಿ-
ತ್ತರು ಗೋಪೀನಾಥದೇವಗೆರಡೈನೂರ್ಬರ್ ||

ಶ್ರೀವರದ ಗೋಪಿನಾಥಂ-
ಗೀವೂರಿನ ತೆಲ್ಲಿಗಯ್ವತೊಕ್ಕಲು ನಂದಾ-
ದೀವಿಗೆಗೆ ಪಳಿಗೆಯೆಣ್ಣೆಯ
ತಾವನುನಯದಿಂದವಿತ್ತರಾಚಂದ್ರಾರ್ಕಂ ||

# ೧೩೩. ಕವಿಕಂದನನಂದ

(೧೨೭೫)

ಕಡೂರು ತಾಲೂಕು ಕೇದಗಿಗೆರೆಯ ಶಾಸನವು[1] ಪಂಚ ಸ್ಥಾನದವರು **ಕೂಡಿ** ಹೊಲ್ಲವ್ವೆಯ ಮೊಮ್ಮ ಹಡಿಹಾರ ವಾಮಯ್ಯನಿಗೆ ದತ್ತಿಕೊಟ್ಟು ದನ್ನು ಹೇಳುತ್ತದೆ. ಇದನ್ನು ಬರೆದ ಕವಿ,

ಶಿವವರವಾಚಂದ್ರಾರ್ಕಂ
ಕವಿಕಂದನನಂದಲಿಖಿತವಿದು ಶಿಲಲಿಖಿತಂ ||

**ಆದರ ಮೂರು** ಕಂದಪದ್ಯಗಳು :

ಶ್ರೀಮದು ಹೊಯ್ಸಣ ನಾಡಶಿ
ರೋಮಣಿಯಾಸಂದಿನಾಡ ಕಂಪಣಚಾರ್ಯರ್
ನಾಮಾವಳಿಯೆಂತೆಂದಡೆ
ನೇಮದ ತಪಸಿಯತ ಗುರುಸಪುತ್ರಕ[ರವ]ರೊಳ್ ||

ಮೊದಲೆನಿಪನಾದಿ ಗುರುಗಳಿ
ಗುದಯಿಸಿದಾ ಬ್ರಹ್ಮಯಾ ಬಾಚಯಸುಂ
ಸದುಗುಣಿ ದೊಂದುರ ಕಲ್ಲವು
ನಧಿಕಂ ಬೈಚಯ್ಯನಾತ್ಮಜಂ ಕಲಿದೇವಂ ||

ವಾಮಶಿವರ[ವಂ] ಕಲ್ಲಯ್ಯನ [ಯಂ]
ವಾಮಯ್ಯಂ ನಾರಸಿಂಹ ಸುತ ಕಲ್ಲಯ್ಯಂ
ಗ್ರಾಮಕ್ಕಧಿಕರಸಿಯಕೆಚಿ
ವಾಮಯ್ಯಂಗೂಡಿ ಪಂಚಮಠದಾಚಾರ್ಯರ್ ||

---

1 Ep. Car. VI, ಕಡೂ. 143.

# ೧೩೪. ಈಶ್ವರಾರ್ಯ

(೧೨೭೬)

ಹರಿಹರ ಹೋಬಳಿಯ ಭಾನುವಳ್ಳಿಯ ಒಂದು ಶಿಲಾಶಾಸನವು* ಈಶ್ವರಾರ್ಯನೆಂಬ ಕವಿಯಿಂದ ರಚಿತವಾಗಿದೆ. ಭಾನುವಳ್ಳಿಯ ಮಹಾಜನಗಳಿಗೆ ಯಾದವ ರಾಮಚಂದ್ರನ ಮಹಾಪ್ರಧಾನ ತಿಪ್ಪರಸನು ಮೂರು ಕಾಲುವಳ್ಳಿಗಳ ಸಹಿತವಾದ ಆ ಊರಿನ ಸುಂಕವನ್ನು ಬಿಟ್ಟುಕೊಟ್ಟುದನ್ನು ಅದು ಹೇಳುತ್ತದೆ. ಬಹುಶಃ ಪ್ರಶಸ್ತಿ ವಿನಾ ಪೂರ್ಣಶಾಸನ ಕಂದಪದ್ಯಗಳಲ್ಲಿದೆ. ಪದ್ಯಗಳ ಸಂಖ್ಯೆ ೧೬. ಕೆಳಗಣ ಪದ್ಯದಲ್ಲಿ ಕವಿ, 'ಬೃಹಸ್ಪತಿಗೂ ಅಚ್ಚರಿಯಾಗುವಂತೆ ಸಂಕ್ಷೇಪವಾಗಿ ಶಾಸನವನ್ನು ಹೇಳಿದೆನೆಂದಿದ್ದಾನೆ:

ಆ ಚಂದ್ರಾರ್ಕಂ ಸಲುವಿನ
ಮಾಚರಿಸಿದನತುಳಧರ್ಮಮಂ ತಿಪ್ಪರಸಂ
ವಾಚಸ್ಪತಿಗರಿದೆನೆ ಸಂ
ಕೋಚದೆ ಶಾಸನಮನೀಶ್ವರಾರ್ಯಂ ಪೇಳ್ದಂ ||

ಅವನ ಶಾಸನ ಹೇಳಿಕೆ ಸಹಜ ಕಥನದ ಮಾದರಿಯಾಗಿದೆ:

ದೇವಗಿರಿಯಲ್ಲಿ ಸಿಂಗಣ
ದೇವನಿಳಾನಾಥನಾಗಿ ರಾಜ್ಯಂಗೆಯ್ದಂ
ಕಾವನವನತರನಾಂತಡೆ
ಜೀವವನಪಹರಿಸುತಿಪ್ಪನರೆಸರದವರಾ ||

ಕಾಮಂ ಖ್ಯಾತಂ ಚೆಲ್ವಿಂ
ಭೀಮಂ ಭುಜಬಲದಿನಮೃತತನುವಿಂ ಸೋಮಂ
ಕಾಮಂ ಭೀಮಂಸ್ಸೋಮಂ
ರಾಮಮಹೀಪತಿಯೆ ತದ್ಗುಣಂಗಳಿನೆಸೆವಂ ||

---

* Ep. Car. XI, ದಾವಣಗೆರೆ 70.

ರಾಮಂಗಣುಮನ ತೆಱದಿಂ
ರಾಮಮಹೀವಲ್ಲಭಂಗೆ ತಿಪ್ಪಾಮಾತ್ಯಂ
ಚಾಮೀಕರವೀ[ಶಾ]ಳಾಂ
ಭೂಮೀಕರಸಂಕ್ರಮಕ್ಕವೇಕಾಚಾರ್ಯಂ ||

ಎಲೆವಟ್ಟ ಹೇಳಿಹಾಳುಂ
ಸಲೆ ಜಿಗುಳಿಯುಮೆಂದು ಮೂಱುಪಳ್ಳಿಗಳುಳ್ಳಂ
ಫಲಭೋಗಕ್ಕೆನೆ ಸೊಲ್ಲಿಂ
ನೆಲೆಯಾದುದು ಬಾನುವಳ್ಳಿ ಸಕಳಸುಖಕ್ಕಂ ||

ಸುಂಕದ ಪೊಂಪನ್ನೆರಡಂ
ಸಂಕ್ರಮಣದೊಳೊಸೆದು ನೂಱನಾಲ್ವರ್ಗೆ ನಿರಾ
ತಂಕವೆನೆ ತಿಪ್ಪರಾಜಂ
ಪಂಕಜನಾಭಾರ್ಪಿತಂ ದಲೆನುತಂ ಕೊಟ್ಟಂ ||

# ೧೩೫. ಪದ್ಮ

(೧೨೯೦)

ಕಸಬಾ ಹಳೇಬೀಡಿನಲ್ಲಿರುವ ಒಂದು ಸಮಾಧಿಮಂಟಪದ ಕಲ್ಲಮೇಲೆ ಒಂದು ಶಾಸನವಿದೆ.* ಶಾಸನ ಚಿಕ್ಕದು. ಆರಂಭದಲ್ಲಿ ಒಂದು ಸಂಸ್ಕೃತ ಶ್ಲೋಕವೂ ಎರಡೋ ಮೂರೋ ಕನ್ನಡ ಪದ್ಯಗಳೂ ಇದ್ದಂತೆ ತೋರುತ್ತದೆ. ಅರ್ಧಕ್ಕಿಂತ ಹೆಚ್ಚು ಭಾಗ ನಷ್ಟವಾಗಿರುವುದರಿಂದ ವಾಚ್ಯವಾಗಿಲ್ಲ. ಆದರೆ ಕೊನೆಯಲ್ಲಿ ಕವಿಯ ಹೆಸರನ್ನು ಸೂಚಿಸಿರುವ ಕಂದಪದ್ಯವೊಂದು ಇಡಿಯಾಗಿ ಉಳಿದಿವೆ. ದೋರಸಮುದ್ರದ ಸಮಸ್ತ ಭವ್ಯಜನಂಗಳು ವರ್ಧಮಾನ ಮಲಧಾರಿದೇವರ ನಿಷಿಧಿಯನ್ನು ಮಾಡಿಸಿದರು ಎಂದು ಹೇಳಿದ ತರುವಾಯ ನಾಲ್ಕು ಜನ ಭವ್ಯರ ಹೆಸರುಗಳನ್ನು ಸೂಚಿಸಿದ ಬಳಿಕ ಕೆಳಗಣ ಕಂದಪದ್ಯದಿಂದ ಶಾಸನ ಕೊನೆಗೊಳ್ಳುತ್ತದೆ :

ಸರಸಕವಿತುಂಗನೆನಿಸಿದ
ವರಕವಿ ಪದ್ಮಂದಲೆನಿಸಿ ನಿಶಿದಿಗೆ ಪದ್ಯಂ
ಬರಸಿ ಪರೋಕ್ಷದ ಪದನಂ
ವಿರಚಿಸಿ ಜಿನಸಭೆಯೊಳಗ್ರಪೂಜೆಯ ಪಡೆದಂ ||

* Ep. Car. XV ಬೇಲೂರು 3?2.

# ೧೩೬. ಬೊಮ್ಮಯರಾಯ

(೧೩೦೩)

ಇವನು ಶಿವಮೊಗ್ಗೆ ಜಿಲ್ಲೆಯ ಸಾಗರ ತಾಲೂಕಿನ ಮತ್ತಿಕೊಪ್ಪ ಗ್ರಾಮದ ಮಜರೆ ರಾವಣದ ಕಾಡಿನಲ್ಲಿರುವ ಒಂದು ವೀರಶಾಸನವನ್ನು[1] ರಚಿಸಿದ್ದಾನೆ. ಈತನು ಧಾರವಾಡ ಜಿಲ್ಲೆಯ ಚಿಕ್ಕೆರೂರವನೆಂದು ತಿಳಿದು ಬರುತ್ತದೆ. ತನ್ನನ್ನು 'ಕವಿದರ್ಪಣ' ಎಂದು ಹೇಳಿಕೊಂಡಿದ್ದಾನೆ. ದೋಷಭೂಯಿಷ್ಠವಾದ ಬರೆವಣಿಗೆಯ ಈ ಶಾಸನವನ್ನು ಇಡಿಯಾಗಿ ಇಲ್ಲಿ ಉದ್ಧರಿಸಲಾಗಿದೆ.

ಸ್ವಸ್ತಿ ಸಮಸ್ತ ಪ್ರಶಸ್ತಿಸಹಿತಂ ಸಮೂಧಿಗತ ಪಂಚ ಮಹಾಶಬ್ದ ಸಹಿತಂ ಹಂನೊಂದು ಮಂಡಳಿಕರ ಗಂಡಂ ಮೂಜುಮುಡಿ ರಾಹುತರಾಯ ಕಲಿಗಳಂಕುಸ ಜಗದ್ವಳೆಯ ಗಂಗೆಯ ಸಹಣಿಯ ಮೇಲೆ ಹೊಯಿಸಣ ಗಂಡ ಭೇರುಂಡ ಗುಂಮನಾತದೇವರ ದಿಬ್ಯಶ್ರೀಪಾದ ಪದ್ಮಾರಾಧಕನುಮಪ್ಪ ಬಲ್ಲಾಳರಾಯನು ತಂನ ಸರ್ವ್ವದಳಸಹಿತವಾಗಿ ನಡದು ಬಂದು ಬನವಸೆ ಯಲಿ ಬಿಟ್ಟು ಕದಬೊಳಲಗೆ ಸಡವಲ್ಲಿ ಸಿರಿಸೆಯ ಕಾಳಗವೆಂದೆನೆ (ಇಲ್ಲಿ ಮಿತಿ) ರಾವಣದ ಕಡಪದ ಸಾತಯನ ಮಗ ಮಾಗವಳಿಯ ಜಕ್ಕಿಯಬ್ಬೆಯ ಸು[ಪು]ತ್ರ ರಣವಗ್ಗ ಬೀರಸಿಜೀದನದೆಂತೆನೆ—

ಕಂದ || ವರತುರಗ ಕರಿಯದಳಮುಂ
ಕರಮುನಿದಜಿರಿಯಟ್ಟ ರಿಪುಗಳಂಕುಸ ರಾಯನು
ಧರೆಯೊಳು ಬಿರುದಳೆ ತಿವಿದನ
ಚ್ಚರಿ ಬಿರುದರ ಸಿರ[ವರಿ*]ಯಲಮಮ ಬೀರಂದರನು ||

ನೆರೆಯಾಗಲು ತವನಹಿತರ
ನುಜುವನೆ ರಂಗಕಮಹಾವೀರರ ಮೆಚ್ಚನು

---

1 Ep. Car. VIII, ಸಾಗರ 10!.

ಜಜಿದಜ್ಜದೆಯಿಜ್ಜಿದೆ ತುರಗವ
ಯಿಜಿ....ಂಮಹೀ....ಂಗಮಮ ಬೀರಂದರನು ||

ಇಂತು ತಳ್ತಿಱಿದು ಮೆಱೆದು ಹೊಯ್ಸಣದಳಮಲ ಬೀರಸುರಲೋಕಪ್ರಾಪ್ತನಾದ ಮಂಗಳಮಹಾಶ್ರೀಶ್ರೀಶ್ರೀ.

ಈ ಬೀರಗಲ್ಲಯಿಂತಿಗಿದಾತ ಬೀರನ ಅಣ್ಣ ಹಡಪದ ಬರಮಯ್ಯರಾಯ, ಬಿಂನಾಣಗಾ ತುಂಬೆಗೆಳದ ಅಬ್ಬಲೂರ ಸಂಕೋಜ, ಚಿಕಕೆಜಿವೂರ ಕವಿದಪಣ ಬೊಮ್ಮಯುರಾಯ ಬರದ ಮಂಗಳ ಶ್ರೀಶ್ರೀ."

# ೧೩೭. ಸುಧಾಕರದೇವ

( ೧೩೩೦ )

ತುಮಕೂರು ಜಿಲ್ಲೆಯ ಗುಬ್ಬಿ ತಾಲೂಕಿನ ಸಂಪಿಗೆ ಗ್ರಾಮದ ೯೨ ಸಾಲುಗಳ ದೊಡ್ಡ ಶಾಸನವು[1] ಗದ್ಯಮಯವಾಗಿದೆ. ಹೊಯ್ಸಳ ಪ್ರಶಸ್ತಿ, ತತ್ಪಾದಪದ್ಮೋಪಜೀವಿಗಳ ಪ್ರಶಸ್ತಿ, ದೇವಾಲಯಕ್ಕೆ ದತ್ತಿ ಎಲ್ಲವೂ ಗದ್ಯದಲ್ಲಿ. ವೀರಬಲ್ಲಾಳನ ಒಪ್ಪಕೂಡ ಮುಗಿದ ಒಂದು ಸಂಸ್ಕೃತ ಶ್ಲೋಕ, ಅದರ ಅರ್ಥವೇ ಆದ ಒಂದು ಕಂದಪದ್ಯ ಮಾತ್ರ ಇವೆ; ಎರಡೂ ಅಷ್ಟೇ ಅಪ್ರಬುದ್ಧವಾಗಿವೆ. ಅದರ ತರುವಾಯದ ಹೇಳಿಕೆಯಿಂದ ಹೆಗ್ಗಡೆಯ ವಿಷ್ಣುದೇವನ ಮಗನಾದ ಜೋಯಿಸ ಸುಧಾಕರದೇವನು ಇದರ ಕರ್ತೃವೆಂದು ವಿದಿತವಾಗುತ್ತದೆ.

ಹೊಯ್ಸಣಾನ್ವಯ ಭೂಪಸ್ಯ ಶ್ರೀಬಲ್ಲಾಳ ಮಹಾನೃಪಃ
ಶ್ರೀನೃಸಿಂಹಸ್ಯ ಕಾರುಣ್ಯಂ ದತಸ್ಯಾ ಚಂಪಕಾಪುರಂ ||

ರಾಯಕುಲಕುಮುದರಾಜಂ
ರಾಯಂ ನರಸಿಂಗಸುತನು ಕಲಿಬಲ್ಲಾಳಂ
ರಾಯ ಭುಜಬಳನು ಸಿಂಗಗೆ
ರಾಯಂ ಯದುರಾಯ ಕೊಟ್ಟ ಚಂಪಕಪುರಮಂ ||

ಹೇಳಿ ಬರಸಿದವರು ಹೆಗ್ಗಡೆಯ ಶ್ರೀಮದ್ವಿನಯನಿಧಾನ ವಿಷ್ಣುದೇವರ ಮಕ್ಕಳು ಜೋಯಿಸ ಶ್ರೀಸುಧಾಕರದೇವರು.

1 Ec. XII, ಗುಬ್ಬಿ 30.

# ೧೩೮. ಮಲ್ಲಣಾರಾಧ್ಯ

(೧೩೪೭–೭೦)

ಕೋಲಾರ ಜಿಲ್ಲೆಯ ಮುಳುಬಾಗಿಲ ತಾಮ್ರಶಾಸನವನ್ನೂ[1] [ಕ್ರಿ. ಶ. ೧೩೪೭] ಗೌರಿಬಿದನೂರು ತಾಲೂಕಿನ ಹೊಸೂರ ತಾಮ್ರಶಾಸನವನ್ನೂ[2] [ಸು. ಕ್ರಿ. ಶ. ೧೩೭೦] ಆತ್ರೇಯಗೋತ್ರದ ಯಜುಶ್ಶಾಖೆಯ ಕೋಟಿ ದೇವಾರಾಧ್ಯರ ಮಗನಾದ ಮಲ್ಲಣಾರಾಧ್ಯನು ರಚಿಸಿದ್ದಾನೆ. ಅದರ ಉಲ್ಲೇಖ ವಿಂತಿದೆ :

ಆತ್ರೇಯಾಣಾಂ ಯಾಜುಷೋ ಕೋಟಿದೇವಾ
ರಾಧ್ಯಾಚಾರ್ಯಸ್ಯಾಂಗಜೋ ವಾಥಮೂರ್ತಿಃ
ಚಕ್ರೇ ಸಮ್ಯಕ್ ಸರ್ವಶಾಸ್ತ್ರಪ್ರವೀಣಃ
ಶ್ಲೋಕಾನೇತಾನ್ ಮಲ್ಲಣಾರಾಧ್ಯವರ್ಯಃ ||

1 Ep. Car. X, ಮುಳಬಾಗಿಲು 158.

2 Ep. Car. X, ಗೌರಿಬಿದನೂರು 46.

# ೧೩೯. ಸೋಮ

(೧೩೭೦)

ಮಲ್ಲಣಾರಾಧ್ಯರು ರಚಿಸಿದ, ಕೋಲಾರ ಜಿಲ್ಲೆಯ ಗೋರಿಬಿದನೂರು ತಾಲೂಕಿನ ಹೊಸೂರು ಗ್ರಾಮದ ಸಂಸ್ಕೃತ ತಾಮ್ರಶಾಸನದಲ್ಲಿ,[1] ಎಂಟು ಭಾಷೆಗಳಲ್ಲಿ ಕವಿತ್ವಶಕ್ತಿಯುಳ್ಳ ವಾಕ್ಸಂಪತ್ತನ್ನು ಸೂರೆಗೊಂಡ ಸೋಮನು ಗುತ್ತಿದುರ್ಗರಾಜ್ಯದಲ್ಲಿ ಕೋಡೂರು ನಾಡಿನ ಪೆನ್ನಮಾಗಣೆಯಲ್ಲಿ ವೃತ್ತಿಗಳನ್ನು ಪಡೆದ ಬಗೆಗೆ,

ಆಪಸ್ತಂಭಾಖ್ಯ ಸೂತ್ರಾಯ ಭಾರದ್ವಾಜಾನ್ವಯಾಯಿನೇ ।
ಯಾಜುಷಾಣಾಂ ವರೇಣ್ಯಾಯ ಸಕಲಾಗಮವೇದಿನೇ ॥
ಅಷ್ಟಾದಶಪುರಾಣಾನಾಮಭಿಜ್ಞಾತಾರ್ಥವೇದಿನೇ ।
ಅಷ್ಟಭಾಷಾಕವಿತ್ವ ಶ್ರೀವಾಣೀವಿಜಿತಸಂಪದೇ ॥
ಸೋಮಾಯ ನಾಚನಾಂಬೋಧೇಃ ಸೋಮಾಯಾಮಿತತೇಜಸೇ ॥

ಈ ಸೋಮನು ನಾಚನ (ನಾಚಣ್ಣ) ಎಂಬವನ ಮಗನು. ಅಷ್ಟಭಾಷಾ ಕವಿತ್ವವುಳ್ಳವನೆಂದಲ್ಲದೆ ಮುಂದೊಂದು ಶ್ಲೋಕದಲ್ಲಿ ಇವನು 'ಮಹಾಕವಿವರಃ' ಎಂದು ವರ್ಣಿತನಾಗಿದ್ದಾನೆ. ಮತ್ತು ರಾಜನನ್ನು ಚಿರಾಯುಷಿಯಾಗೆಂದು ಹರಸಿ ೧೧೦ ವೃತ್ತಿಗಳನ್ನು ಪಡೆದನೆಂದೂ ಹೇಳಿದೆ.

1 Ep. Car X, ಗೋಬಿ 46.

# ೧೪೦. ನೃಸಿಂಹ

( ೧೩೮೨ )

ಮೈಸೂರು ಜಿಲ್ಲೆ ಮಳವಳ್ಳಿ ತಾಲೂಕು ಅರುವನಹಳ್ಳಿಯ ಒಂದು ಶಾಸನದ[1] ಕೊನೆಯಲ್ಲಿ ಕವಿ ತನ್ನ ಹೆಸರನ್ನು ಹೇಳಿಕೊಂಡಿರುವ ಪದ್ಯವಿದು :

ಪದ್ಯವ ವಿರಚಿಸಿದಂ ನಿರ
ವದ್ಯಂ ಸುಕವೀಂದ್ರಲಪನ ಮಣಿಮಯಮುಕುರಂ
ಮಾದ್ಯತ್ಕಂಠೀರವರವ
ನುದ್ಯತ್ತುಹಿನಾಂಶುಕಿರಣಕೀರ್ತಿ ನೃಸಿಂಹಂ ||

ಕ್ರಿ. ಶ. ೧೩೮೩ರಲ್ಲಿ ಕೆರೆಕಾಲುವೆ ಅರವೆ ಮೊದಲಾದವನ್ನು ಮಾಡಿಸಿದ ಬಾಚೆಯಪ್ಪನವರ ಗುಣವರ್ಣನ ಪದ್ಯಗಳು ಇಂತಿವೆ :

ಜನತಾಧಾರನುದಾರನನ್ಯವನಿತಾದೂರಂ ವಚಃಸುಂದರೀ
ಘನವೃತ್ತಸ್ತನಹಾರ ಶೂರನು ಸುಹೃದ್ವಕ್ತ್ರಾಬ್ಜಮಾರ್ತಾಂಡನುಂ
ವನಜಾತಾಯತನೇತ್ರ ಪುಣ್ಯಕೃತಗಾತ್ರಂ ಸಚ್ಚಾರಿತ್ರನುಂ
ವಿನುತಪ್ರಾಭವಕೀರ್ತಿರಾಜನ ಸುತಂ ಶ್ರೀಬಾಚರಾಜಾರ್ಯ್ಯಯುಂ ||

ಸುಕವಿಜನಸಮಾಜಃ ಕಾಮಿನೀನಾಂ ಮನೋಜಃ
ಚಕಿತಹರಿಣನೇತ್ರಃ ಕಾಂತಿರಾಜತ್ಸುಗಾತ್ರಃ
ಬಕರಿಪು ಸಮಬಾಹುರ್ದುರ್ಜನಗ್ರಾಹ್ಯರಾಮಃ
ಸಕಲಗುಣನಿಧಾನೋ ಬಾಚರಾಜಾಭಿಧಾನಃ

ಶೂರತೆಯುಂ ಮೃಗಾಧಿಪನೊಳಾ ಕ್ಷಮೆಯುಂ ಕ್ಷ್ಮೆಯೊಳ್ಗಭೀರಮುಂ
ವಾರಿಧಿಯೊಳ್ಸ್ಮರನೊಳ್ರಮ್ಯತೆಯುಂ ಮಕರಧ್ವಜನೊಳ್ಪ್ಪ ಶಾಂತಿಯುಂ

---

1 Ep. Car. III, ಮಳವಳ್ಳಿ 21.

ನಾರಿಜನವೈರಿಯೊಳ್ಪಡೆದು ಪದ್ಮಜ ನಿರ್ಮಿಸಿದಂತಿರಂಚಿತಂ
ಚಾರುಚರಿತ್ರ ಕೀರ್ತಿಯುತಸೂಭವ ಬಾಚನುದಾರಸುರ್ವಿಯೊಳ್ ||

ಪರಬಲಭೀಮ ಪುಣ್ಯಜನಧಾಮ ದಯಾಂಬುಧಿಸೋಮ ಸಂತತಂ
ಪರಭುಜದಂಡ ಸದ್ಗುಣಕರಂಡ ವಿರಾಜಿತತುಂಡಸುನ್ನತಂ
ಸುರುಚಿರಗಾತ್ರ ಧೈರ್ಯಸುರಗೋತ್ರ ಕುಶೇಶಯನೇತ್ರನೆಂದು ಮಿ
ಧರಣಿ ನಿರಂತರಂ ಪೊಗಳ್ಗು ಕೀರ್ತಿತಸೂಭವ ಬಾಚಿರಾಜನಂ ||

ಇಲ್ಲಿಯ ಅನುಪ್ರಾಸದ ಅಲಂಕಾರವನ್ನು ಗಮನಿಸಬೇಕು. ಎರಡನೆಯ ದಾದ ಸಂಸ್ಕೃತಪದ್ಯವು ಈ ನೃಸಿಂಹನು ಉಭಯಕವಿ ಎಂಬುದಕ್ಕೆ ದ್ಯೋತಕವಾಗಿದೆ. 'ಪರಬಲಭೀಮ' ಎಂಬ ಕೊನೆಯ ಪದ್ಯವು ಇದೇ ಊರ ಕ್ರಿ. ಶ. ೧೩೨೮ ರ ವೀರಗಲ್ಲಿನಲ್ಲಿಯೂ ಬಂದಿರುವುದರಿಂದ ಅದೂ ನೃಸಿಂಹ ಕೃತವೋ ಎಂದೆನಿಸುತ್ತದೆ.

# ೧೪೧. ವಜ್ರ

(೧೩೯೩)

ಸೊರಬದ ೨೬೪ ನೆಯ ಶಾಸನವನ್ನು ಬರೆದಿರುವಂತೆ ಶಾಸನದ ಕೊನೆಯ,

ವಪುವಂ ಗೋಪತಿಯುೞಿಯಲ್
ವಿಪುಳತರ ಪರೋಕ್ಷನುತಿಯು ಪೇೞ್ದಂ ವಜ್ರಂ
ತಪನಶಶಿಯಿರ್ಪಿನಂ ವ-
ರ್ತಿಪ ತೆರದಿಂ ಸದ್ಬುಧಾಳಿ ಪೊಗೞಲ್ ಕೃತಿಯಂ ॥ ೧ ॥

ಈ ಶಾಸನದಲ್ಲಿ ಸ್ವರ್ಗಸ್ಥನಾದ ಕುಪ್ಪಟೂರು ಗೋಪಿನಾಥನ ಸ್ತುತಿರೂಪವಾದ ಪದ್ಯಗಳಿವೆ. ಇದು ೧೩೯೩ ರಲ್ಲಿ ಬರೆದುದು. ಶಾಸನವು ನಷ್ಟಪ್ರಾಯವಾಗಿದೆ. ಒಂದು ಪದ್ಯವನ್ನು ಅಂತೂ ಆಯ್ದು ಬರೆದಿದೆ :

........... .......... ಮನೋರಥಾರ್ಥಮಂ
ಕುಡುವನದಾರೊ ಬಂಧನದಿನಿರ್ದರನಕ್ರಮದಿಂದೆ ಭೇಗದಿಂ
ಬಿಡಿಸುವರಿಲ್ಲ ಬಂಧುಗಳ ಪಾಲನೆ ಪೋದುದು ಗೋಪಿನಾಥ ಹಾ
ಮಡಿದನೆನುತ್ತೆ ಕಣ್ಬನಿಯ ತಂದುದು ಕುಂದದೆ
ಧಾರಿಣೀಜನಂ ॥ ೨ ॥

## ೧೪೨. ಮಧುರ

(೧೪೧೧)

ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲೂಕಿನ ಹಂಪೆಯಲ್ಲಿ, ಕೃಷ್ಣ ದೇವಾಲಯದ ಪೂರ್ವದಿಕ್ಕಿನ ಕೃಷ್ಣಬೀದಿಯ ಉತ್ತರಕ್ಕಿರುವ ಗುಡ್ಡದೋರೆಯಲ್ಲಿ ಬಿದ್ದಿದ್ದ ಶಿಲೆಯಲ್ಲಿ ಕಂಡರಿಸಿರುವ ಒಂದು ಶಾಸನದ[1] ಕರ್ತೃ ಮಧುರ ಕವಿ ಎಂದು ಅದರಲ್ಲಿಯೇ ಹೇಳಿದೆ. ವಿಜಯನಗರದಲ್ಲಿ ಪ್ರೌಢಪ್ರತಾಪದೇವ ರಾಯನು ಆಳುತ್ತಿದ್ದ ಕಾಲದಲ್ಲಿ, ಕ್ರಿ. ಶ. ೧೪೧೧ ರಲ್ಲಿ ಅದು ಹುಟ್ಟಿದೆ. ದೇವರಾಯನಲ್ಲಿ ಅಮಾತ್ಯಪದವನ್ನಲಂಕರಿಸಿದ್ದ ಲಕ್ಷ್ಮೀಧರನು, ಪಂಪಾ ಕ್ಷೇತ್ರದ ಮೂಡಣಕ್ಕಿರುವ ಮಾಲ್ಯವಂತಗಿರಿಯ ತೆಂಕಣಪಕ್ಕದಲ್ಲಿ ಅಕೃತ್ರಿಮ ದಿವ್ಯಾಗಾರದಂತಿದ್ದ ಗುಹೆಯೊಂದರಲ್ಲಿ ಮಹಾಗಣಪತಿಯನ್ನು ಪ್ರತಿಷ್ಠಿಸಿ, ದೇವರ ಪೂಜಾದಿವಿನಿಯೋಗಕ್ಕಾಗಿ ದತ್ತಿಗಳನ್ನು ಬಿಟ್ಟ ವಿಷಯ ಇಲ್ಲಿ ಹೇಳಿದೆ. ವಿಜಯನಗರದ ರಾಯರ ಶೌರ್ಯಾದಿ ಗುಣಗಳು, ಅವರ ಮಂತ್ರಿಗಳ ಹಿರಿಮೆ, ವಿಶೇಷವಾಗಿ ತತ್ಕಾಲದ ಲಕ್ಷ್ಮೀಧರಾಮಾತ್ಯನ ಬಹುಮುಖ ಯೋಗ್ಯತೆ, ಮಹಾಗಣಪತಿಯ ಪ್ರತಿಷ್ಠಾಪ್ರಸಂಗ, ಧರ್ಮತೋಟ ಮೊದಲಾದ ವಿಷಯಗಳನ್ನು ಒಳ್ಳೆಯ ಚಿತ್ರರಮ್ಯವಾಗಿ ವಿಶದವಾಗಿ ವರ್ಣಿಸುವ ಸುಂದರಸಾಹಿತ್ಯವೆ ಈ ಕಲ್ಲ ಮೈಮೇಲೆ ಮೂಡಿದೆ. ಸುರಸಮನೋಹರ ಕಾವ್ಯಾಕ್ಷರಗಳನ್ನು ರೋಮರೋಮದಲ್ಲಿಯೂ ಬರೆದುಕೊಂಡು ನೀಳ್ಗವನದ ಒಂದು ಹೆಣವೇ ಕೊಳೆತುಹೋಗಬಾರದೆಂದು ಕಲ್ಲಾಗಿ ಬಿದ್ದಿದೆ ಎಂದು ಹೇಳಿದರೆ ವರ್ಣನೆ ಅತ್ಯುಕ್ತಿಯದಾಗಲಿಕ್ಕಿಲ್ಲ. ಈ ಕಲ್ಬರೆಹದ ಸಾಲುಗಳು ೧೩೪; ಕನ್ನಡ ಪದ್ಯಗಳ ಸಂಖ್ಯೆ ೬೦.

ಈ ಶಾಸನಕಾವ್ಯವನ್ನು ಕಟ್ಟಿದ ಕವಿ ಮಧುರ, ತನ್ನ ಹೆಸರುದೆಸೆಗಳನ್ನೂ ತನ್ನ ಕವಿತ್ವದ ಉತ್ಕೃಷ್ಟತೆಯನ್ನೂ ಲಕ್ಷ್ಮೀಧರಾಮಾತ್ಯನಿಂದ

1 S. I. I.s., Vol. IV. Gen. No. 267.

ತಾನು ಪಡೆದ ಮನ್ನಣೆಯ ವಿಷಯವನ್ನೂ ಶಾಸನಾಂತ್ಯ ಭಾಗದಲ್ಲಿ ಮೂರು ಪದ್ಯಗಳಲ್ಲಿ ಹೇಳಿದ್ದಾನೆ :

ಪಿಂಗದೆ ಲಕ್ಷ್ಮೀಧರ ಸಚಿ-
ವಂಗಾಚಂದ್ರಾರ್ಕಮೊದವಿದಾಯುಂ ಶ್ರೀಯುಂ
ಸಂಗತಿವಡೆದಿರೆ ಬರೆದಂ
ಮಂಗಳಮಯವಾಗೆ ಮಧುರನೀಶಾಸನಮಂ ||

ಬಗೆಗೊಳ್ವಂತೀವರಂ ಮೆಚ್ಚಿ ಬಿಡ ಸುಕವಿ ಸುಕ್ಷೇತ್ರಹಸ್ತ್ಯಶ್ವಭೂಷಾ-
ದಿಗಳಂ ಮುಂಪೆತ್ತೊಡಂ [ಭೂಭರದೊ]ಳಣೆಯದೀಲೋಕಮೆಂದು ... ದು
....ಗ ಮುಂನೇಳಲ್ಕವೀಂದ್ರಾಭರಣಮಧುರಗಂ ಮಾನ್ಯಸಂಗೂಡಿತನ್ನಿಂ-
ಮಿಗಿಲೆಂಬಂತಳ್ಕರಿಂ.........ನವನಿಯೊಳ್ಮಂತ್ರಿ ಲಕ್ಷ್ಮೀಧರಾಂಕಂ ||

ಗಣಿದಂಗೊಳ್ಳೊಡೆ ಮಿಕ್ಕಿನಕ್ಕರದ ಮಾತಂತಿರ್ಕೆ ತನ್ನಾಣೆ ಘೋ-
ಷಣೆ ಸಲ್ಗುಂ ಸುಕವೀಂದ್ರವೃಂದಸಭೆಯೊಳ್ ತಾನೆಂದೊಡಮ್ಮಮ್ಮ ಧಾ-
ರಿಣಿಯೊಳ್ಕೇಳ್ದರಿಯಾಜ್ಞದಾ ಮಧುರನಂ ನಿರ್ಗೀತಕರ್ಣಾಟ ಲ-
ಕ್ಷ್ಮಣ . ಪಾದಸರೋಜಸಂ ಪ್ರವಿಲಸದ್ಧಾತ್ರೀ ಮುಖಾಂಭೋಜನಂ ||

ಇಲ್ಲಿಯ ಮೊದಲ ಪದ್ಯದಲ್ಲಿ, ಕವಿ ತನ್ನ ಹೆಸರನ್ನು ಸುಮ್ಮನೆ ಹೇಳಿಕೊಳ್ಳದೆ, ಶಾಸನನಾಯಕನಾದ ಲಕ್ಷ್ಮೀಧರನಿಗೆ ಆಯುರಾರೋಗ್ಯ ಭಾಗ್ಯಗಳೊದಗಲೆಂಬ ಹಾರಯಿಕೆಯಿಂದ ಶಾಸನವನ್ನು ಮಂಗಳಮಯವಾಗಿ ಬರೆದೆನೆಂದು ಎನುತ್ತಾನೆ. ಇಲ್ಲಿ ಕವಿಯ ಹಾರ್ದಿಕ ಕೃತಜ್ಞತೆ ವ್ಯಕ್ತವಾಗಿದೆ. ಎರಡನೆಯ ಪದ್ಯದಿಂದ, ಲಕ್ಷ್ಮಣಾಮಾತ್ಯನು ಈ ಮಧುರಕವಿಯನ್ನು—ಈ ಮೊದಲು ಸಾಕಷ್ಟು ಕೊಟ್ಟು ಮನ್ನಿಸಿದ್ದರೂ — ಹೊಲ ಮನೆ, ಆನೆ ಕುದುರೆ, ಒಡವೆ ತೊಡವೆಗಳನ್ನು ಮತ್ತೆಯೂ ಇತ್ತು ತನಗಿಂತಲೂ ಈತನು ಮಿಗಿಲೆನುವಂತೆ ಪ್ರೀತಿಯಿಂದ ಸತ್ಕರಿಸಿದನೆಂದು ತಿಳಿಯುತ್ತದೆ. ಅಲ್ಲದೆ, ರಾಜಮಾನ್ಯತೆಯಲ್ಲಿಯೂ ಗೃಹಸ್ಥಿತಿಯಲ್ಲಿಯೂ ಮಧುರನು ಉಚ್ಚಶ್ರೇಣಿಯವನಾಗಿದ್ದನೆಂಬುದೂ ಕಂಡುಬರುತ್ತದೆ. ತನ್ನ ಮಾತಿಗೆ, ತನ್ನಾಣೆಗೆ ಕವೀಂದ್ರಸಭೆಯಲ್ಲಿ ಅತ್ಯಂತ ಗೌರವವಿದ್ದಿತೆಂದು ಹೇಳಿಕೊಂಡಿದ್ದಾನೆ. ಇವೆ

ಲ್ಲವುಗಳ ಮಥಿತಾರ್ಥದಿಂದ ಶಾಸನಕವಿ ಮಧುರನು ಲಕ್ಷ್ಮೀಧರಾಮಾತ್ಯನ-ಅರ್ಥಾತ್—ರಾಜನ ಆಶ್ರಿತನೆಂದು ಸ್ಪಷ್ಟವಾಗುತ್ತದೆ. ಆದರೆ, ರಾಯನ ಔದಾರ್ಯವನ್ನು ಹೊಗಳದೆ ಅಮಾತ್ಯನನ್ನು ಎತ್ತಿ ಹೊಗಳಿರುವಲ್ಲಿ ಕವಿ ಆತನ ಪ್ರೀತಿಯಿಂದಲೇ ಊರ್ಜಿತನಾದನೆಂಬುದು ವ್ಯಕ್ತವಾಗುತ್ತದೆ. ಮೂರನೆಯ ಪದ್ಯದಲ್ಲಿಯು 'ನಿರ್ಣೀತಕರ್ಣಾಟಲಕ್ಷ್ಮಣ[ಶ್ರೀ]ಪಾದ ಸರೋಜನು' ತಾನೆಂದು ಎಂದುಕೊಂಡಿರುವ ಮಾತಿನಲ್ಲಿ ಈ ಅರ್ಥ ಗರ್ಭಿತವಾದಂತೆ ಎನ್ನಿಸುತ್ತದೆ.

ಈ ಶಾಸನದ ಕೆಲ ಪದ್ಯಗಳು :

ಸಲೆ ನಾನಾಸಸ್ಯಸಂಪತ್ತಿಯನೊದವಿಸಿ ಸಂತುಷ್ಟಿಯಂ ದಾನಧಾರಾ-
ಜಲದಿಂ ಸಂತಾಪಮಂ ತಳ್ಗಿಸಿ ವಿತತಸಿತಚ್ಛತ್ರಸುಚ್ಛಾಯೆಗೊಯ್ದು-
ಜ್ವಲಿಪಾಜ್ಞಾದಾಮದಿಂದಂ ನಿಱುಮಿಸಿ ನಿಜದೋಃಸ್ತಂಭದೊಳ್ಕಟ್ಟಿ
ಗೋಮಂ-
ಡಲಮಂ ಸತ್ಕೀರ್ತಿದುಗ್ಧಂಗಱೆದನಱಿಕೆಯಿಂ ದೇವರಾಜಾವನೀಂದ್ರಂ ||

* * * *

ಕೆಱೆಯಂ ಕಟ್ಟಿಸು ಬಾವಿಯಂ ಸವೆಸು ದೇವಾಗಾರಮಂ ಮಾಡಿಸ-
ಜ್ಜೆಱೆಯೊಳ್ಸಿಲ್ಕಿದನಾಥರಂ ಬಿಡಿಸು ಮಿತ್ರರ್ಗಿಂಬುಕೆಯ್ ನಂಬಿದ-
ರ್ಗೆಱೆವೆಟ್ಟಾಗಿರು ಶಿಷ್ಟರಂ ಪೊರೆಯೆನುತ್ತಂತೆಲ್ಲಮಂ ಪಿಂದೆ ತಾ-
ಯೆಱೆದಳ್ಪಾಲೆಱೆವಂದು ತೊಟ್ಟು ಕಿವಿಯೊಳ್ಲಕ್ಷ್ಮೀಧರಾಮಾತ್ಯನಾ ||

ಗಣನಾಮಾತ್ರಮೆ ದೇವರಾಯನರನಾಥಾಸ್ಥಾನದೊಳ್ಮಾನವಾ-
ಗ್ರಣಿಗಳ್ಸ್ವೃತ್ತೆ ವಿಚಾರಿಪಾಗಳುಪಧಾಸಂಶುದ್ಧಿಯಿಂ ಬುದ್ಧಿಯಿಂ
ಗುಣದಿಂ ಗೌರವದಿಂ ಪ್ರೊಡಳ್ದಿಸೆವ ಮುದ್ರಾಮಾತ್ಯಯೌಗಂಧರಾ-
ಯಣ ಚಾಣುಕ್ಯ ಸುಮಂತ್ರರೊಳ್ದೊರೆಗೆವಂದಂ ಮಂತ್ರಿ ಲಕ್ಷ್ಮೀಧರಂ ||

ತನುವಂ ಮನ್ಮಥಸೌಮ್ಯಭಾವಮೊಳಕೆಯ್ಯಲ್ಮಂದನಶ್ರೀಮುಖಂ
ತನಗಾನಂದಮನೀಯೆ ವಿಕ್ರಮಜಯಂಗಳ್ತೋಳೊಳಿಂಬಾಗೆ ನೆ-
ಟ್ಟನೆ ಸಾಧಾರಣಮಲ್ಲದೀಶ್ವರಪದಾಬ್ಜಂ ಪಾರ್ಥಿವಶ್ರೀಯುಮೀ-
ಯೆ ನಯಂಬೆತ್ತುದು ಕೀರ್ತಿದುಂದುಭಿನಾದಂ ಲಕ್ಷ್ಮಣಾಮಾತ್ಯನ ||

ವ|| ಆ ಮಹಾಪ್ರಧಾನ ಲಕ್ಷ್ಮೀಧರನೊಂದು ರಾತ್ರಿಯೊಳ್ಸುಖ ಸುಪ್ತಿಯಿಂ ನಿದ್ರೆಗೆಯ್ದಿರ್ಪಿನಂ, ಸ್ವಪ್ನದೊಳಪ್ರತಿಮತೇಜನಖಿಳಚರಾಚರ ಜನನಬೀಜಂ, ಬೀಜಾಪೂರಕಮುಖ್ಯಕಾಯುಧವಿಶೇಷವಿಲಸಿತದಶಭುಜಾ ದಂಡಂ, ಖಂಡೇಂದು ಮಂಡಿತಮಣಿಮಕುಟಮಹನೀಯಶಿಖಂಡಂ, ಗಂಡ ಸ್ಥಳಗಳಿತಮದಮದಿರಾಸ್ವಾದಮತ್ತಮಧುಕರಝೇಂಕಾರಮುಖರಿತಸಕಲದಿಗ್ವ ಲಯಂ, ನಖಮಯೂಖಾಂಗುಳೀಯಕಾದಿಭೂಷಣವಿಭೂಷಿತಸರ್ವಾಂಗನಂಗೀಕೃತ ಭುಜಂಗಪರಿವೃಢಪ್ರಾಲಂಬಂ, ಲಂಬೋದರಕಲಿತಕಾಕೋದರಫಣಾ ಮಣಿಮರೀಚಿನಿರಾಕೃತ ನಾಭೀಕುಹರಪಿಹಿತಮಹಾಂಧಕಾರಂ, ಕನಕಕಟಿ-ಸೂತ್ರವಿಚಿತ್ರಿತಜಘನ ಮಂಡಲಂ, ಮಣಿಕನಕನೂಪುರಶೋಭಿತಪದ-ಸರೋಜಸನಾಥಂ, ಯಥೋಚಿತದಿಶಾನಿಷಣ್ಣನಿಜನಿಜಶಕ್ತಿಯುಕ್ತಮುಪರವ-ರಾಹಕುಸುಮನಾಯಕಂ, ಶಿವಜನಮನೋರಥಪ್ರದಾಯಕಂ, ಸಕಲಲೋಕೈಕ ನಾಯಕಂ, ಮಹಾವಿನಾಯಕಂ ಬಂದು "ಎಲೆ ಲಕ್ಷ್ಮೀಧರಾ . . . ಅ ಪಾವನನದೀಪಯಃ ಪಾನಪರಾಗ[ಚಂಚಲ] ತೃಣಾಂಕುರಚೂತಮಾತು ಳುಂಗ ರಂಭಾಜಂಬೀರ ಪೂಗನಾಗಕೇಸರಾದಿಭೂಜಾತಜಾತಿಕೇತಕೀಪ್ರಮುಖ ನಿಖಿಳಕುಸುಮಸುಗಂಧ ಬಂಧುರಗಂಧವಾಹವಾಹಿನೀಸಂಕಲಿತಕಳಹಂಸಶುಕಪಿ ಕಶಿಖಾವಳಕೇತಕೀನಿಳಾಸವಿಚಿತ್ರಂ, ಸಕಲಭುವನಪವಿತ್ರಂ, ದುರಿತಲತಾಲ ವಿತ್ರಂ, ಭವಾಂಬುಧಿಬಹಿತ್ರಂ, ವಾರಾಣಸೀ ಶ್ರೀಪರ್ವತಾದಿ ಸಿದ್ಧಸ್ಥಾನ ಮಣಿಗಣಮಾಲಾಸೂತ್ರಂ, ಕಂಚಾಕ್ಷೇತ್ರಂ ಸೊಗಯಿಪ್ಪುದದರ ಪೂರ್ವ ದಿಗ್ಭಾಗದ ಮಾಲ್ಯವಂತಪರ್ವತದ ತೆಂಕವಕ್ಕದೊಳೊಂದು ಮಹಾಗುಹೆ ಯುಂಟದಕ್ಕೃತ್ರಿಮದಿವ್ಯಾಗಾರಮದರೊಳೆನ್ನಂ ಪ್ರತಿಷ್ಠೆಗೆಯ್ವುದೆಂದು ನಿರೂಪಿಸೆ—

# ೧೪೩. ಲಕ್ಷ್ಮೀಧರ
(೧೪೧೧)

ವಿಜಯನಗರದ ಪ್ರೌಢಪ್ರತಾಪದೇವರಾಯನ ಅಮಾತ್ಯನಾಗಿದ್ದನು ಈ ಲಕ್ಷ್ಮೀಧರ. ಹಂಪೆಯ ಪೂರ್ವದಿಕ್ಕಿನಲ್ಲಿರುವ ಮಾಲ್ಯವಂತಪರ್ವತದ ಓರೆಯಲ್ಲಿದ್ದ ಗುಹೆಯೊಂದರಲ್ಲಿ ಈತನು ಮಹಾಗಣಪತಿಯನ್ನು ಸ್ಥಾಪಿಸಿ, ದತ್ತಿಗಳನ್ನು ಬಿಟ್ಟನು. ಈ ಹಿಂದೆ ಪರಿಚಿತನಾದ ಮಧುರಕವಿಗೆ ಈತನು ಮಹಾ ಆಶ್ರಯದಾತನಾಗಿದ್ದನು. ಮಧುರನು ತಾನು ಬರೆದ ಹಂಪೆಯ ಶಾಸನದಲ್ಲಿ (ಕ್ರಿ. ವ. ೧೪೧೧) ಈತನನ್ನು ವಿಶೇಷವಾಗಿ ವರ್ಣಿಸಿದ್ದಾನೆ. ಅಲ್ಲಿ ಬಂದಿರುವ ಈತನ ಗುಣಕಥನಪದ್ಯಗಳಿಂದ ಈತನು ವಿದ್ಯಾಪಕ್ಷಪಾತಿಯೂ ಅತ್ಯಂತ ಉದಾರಿಯೂ ಆಗಿದ್ದನೆಂದು ತಿಳಿಯುವುದಲ್ಲದೆ, ಶ್ರೇಷ್ಠನಾದ ಕವಿಯೂ ಒಳ್ಳೆಯ ಗಮಕಿಯೂ ಆಗಿದ್ದನೆಂದೂ ಗೊತ್ತಾಗುತ್ತದೆ.

ಸಾರಶ್ರೀನೀತಿವಾಕ್ಯಾಮೃತಪರಿಸರದೊಳ್ಪುಟ್ಟಿ ಮೆಯ್ಗುಂಡದಾನಂ-
ದಾರಾಮಾಸನ್ನರಾಮಾಯಣದೊಳಮದರ್ಶ ತಳ್ತಾವಗಂ ಕೃಷ್ಣಲೀಲಾ-
ಧಾರಂ ತಾನಾಗಿ ನಾನಾಫಲಮನಿಳೆಗೆ ಬೀಱಿತ್ತು ಸಂಸಾರಸೌಖ್ಯಾ-
ಕಾರಂ ಸನ್ಮಂತ್ರಿ ಲಕ್ಷ್ಮೀಧರನುರುಕವಿತಾಕಲ್ಪವಲ್ಲೀವಿತಾನಂ ||

ಮಂತ್ರಿ ಲಕ್ಷ್ಮೀಧರನ ಕಾವ್ಯಕಲ್ಪಲತೆಯ ಹಬ್ಬುಗೆಯನ್ನು ಈ ಪದ್ಯದಲ್ಲಿ ಮಧುರನು ಬಣ್ಣಿಸಿದ್ದಾನೆ. ಅದು "ಸಾರಭರಿತವಾದ 'ನೀತಿವಾಕ್ಯಾಮೃತ'ದ ಪರಿಸರದಲ್ಲಿ ಹುಟ್ಟಿ 'ಆನಂದ (ಆರಾಮಾಸನ್ನ) ರಾಮಾಯಣ'ದ ಆದರ್ಶನ್ನು ಆಧರಿಸಿ ಅಡರಿ, 'ಕೃಷ್ಣಲೀಲಾ' ಮಂಡಪದಲ್ಲಿ ಹಬ್ಬಿ ಸಂಸಾರವನ್ನು ಸೌಖ್ಯಕಾರವನ್ನಾಗಿ ಮಾಡುವ ಫಲಗಳನ್ನು ಬೀರಿತ್ತು" ಎಂಬಲ್ಲಿ, ಆತನ ಆ ಆ ಹೆಸರಿನ ಕೃತಿಗಳನ್ನು ರೂಪಕಾಲಂಕಾರವಿಟ್ಟು ಎತ್ತಿತೋರಿಸಿದ್ದಾನೆ. ಎಂದರೆ, ಲಕ್ಷ್ಮೀಧರಾಮಾತ್ಯನು ಕಾಲಕ್ರಮದಲ್ಲಿ—ಒಂದನೆಯದಾಗಿ 'ನೀತಿವಾಕ್ಯಾಮೃತ', ಎರಡನೆಯದಾಗಿ 'ಆನಂದರಾಮಾಯಣ', ಮೂರನೆಯದಾಗಿ 'ಕೃಷ್ಣಲೀಲೆ' ಎಂಬ-ಮೂರು ಕಾವ್ಯಗಳನ್ನು ಬರೆದಿದ್ದುದು ಇದರಿಂದ ಗೊತ್ತಾಗುತ್ತದೆ. ಇದೇ ಶಾಸನದ ಪದ್ಯಾಂತರಗಳಲ್ಲಿ ಲಕ್ಷ್ಮೀಧರ

ನನ್ನು 'ಕವಿರಾಜ' ಎಂದೂ 'ಕವಿತಾ ಲಕ್ಷ್ಮೀಧರ' ಎಂದೂ ವಿಶೇಷಣಗಳಿಂದ ಮಧುರ ಹೊಗಳಿದ್ದಾನೆ. ಅಲ್ಲದೆ ಈತನು ಕಾವ್ಯಗಳನ್ನು ಸೊಗಸಾಗಿ ಹಾಡಬಲ್ಲವನಾಗಿದ್ದನೆಂಬುದಕ್ಕೆ ಆ ಶಾಸನದಲ್ಲಿ,

ಪದಪಿಂದಂ ಕವಿರಾಜ ಲಕ್ಷ್ಮಣನ ಕಾವ್ಯಾಲಾಪಮಂ ಕೂರ್ತು ಕೇ-
ಳದೆ ಮುಂಪೋದರಿ ಪಾದಪ್ರೊಮ್ಮೆ ಕಿವಿಗೊಟ್ಟೆತ್ತಾನುಮಾರ್ಕ್ವೆದು ಸಂ-
ಮದದಿಂ ಸ್ಥೈರಬೋರು ದೂತಿಯರ ಮಾತಂ ಮೀಱಿ ಕಣ್ಗಾಂಡ ನೋ-
ಡಿದ ಪೆಣ್ಗಳ್ಪದಿದಿರ್ದ ಪ್ರಗಣೆಯ ಪುಣ್ಣಿಂದಣ್ಣಿ ಪುಯ್ಯಲ್ಗರೆ ||

ಎಂಬ ಪದ್ಯ ಸಾಕ್ಷ್ಯ ನುಡಿಯುತ್ತಿದೆ. ಮಗದೊಂದು ಪದ್ಯದಲ್ಲಿ ಕವಿ 'ವಿದ್ವಜ್ಜನಂ ಬಾಪುರೆ ಬಾಪೆಂದೆತ್ತಿ ಕೊಂಡಾಡುವ ವಿವಿಧಕಳಾಪ್ರೌಢಿಗೆ' ನೆಲೆಯಾಗಿದ್ದನೆಂದು ತಿಳಿಸಿದ್ದಾನೆ. ಇಂತಹ ಈ ಕವಿ ಅಮಾತ್ಯ, ಶಾಸನಕವಿ ಮಧುರನನ್ನು ಕೊಟ್ಟುಕೊಟ್ಟೂ ತಣಿಯದೆ ಅವನನ್ನು ತನಗಿಂತ ಮಿಗಿಲೆನಿಸುವಂತೆ ಮತ್ತೂ ಕೊಟ್ಟು ಗೌರವಿಸಿದ ಮಹೋದಾರಿ. ಶ್ರೇಷ್ಠನಾದ ಕವಿ ಬಡತನದಲ್ಲಿರಲಾಗದು, ಅದು ಇದ್ದುಳ್ಳವರಿಗೆ, ರಾಜ್ಯಕ್ಕೆ ಒಂದು ಕಲಂಕ ಎಂದೇ ಅವನು ತಿಳಿದದ್ದಿರಬೇಕು.

ವಿಜಯನಗರ ಸಾಮ್ರಾಜ್ಯದಲ್ಲಿ ಮಹಾಪ್ರಧಾನರಾಗಿದ್ದ ಮಾಧವ-ಸಾಯಣರೆಂಬ ಸೋದರರ ಸೋದರಳಿಯನು-ತಂಗಿಯಾದ ಸಿಂಗಲೆ ಎಂಬವಳ ಮಗನು-ಈ ಲಕ್ಷ್ಮೀಧರಾಮಾತ್ಯ. ರಾಮರಸ ಎಂಬವನು ಈತನ ತಂದೆ. ಈತನಿಗೆ ನಾಲ್ಕು ಜನ ಅಣ್ಣತಮ್ಮಂದಿರಿದ್ದರು; ಚಿನ್ನಮಂತ್ರಿ, ಬುಕ್ಕಣ್ಣ, ಮಾಧವ, ಪೆಗ್ಗಡೆ ಎಂದು. ದೇವಕಿ, ಸೋಮಲೆ ಎಂಬಿಬ್ಬರು ಇವನ ಹೆಂಡರು. ಅವರಲ್ಲಿ ಲಕ್ಷ್ಮೀಧರ ನಾಲ್ವರು ಮಕ್ಕಳನ್ನು ಹಡೆದಿದ್ದನು.

ಲಕ್ಷ್ಮೀಧರನು ಅತ್ಯಂತ ಸ್ವಾಮಿನಿಷ್ಠನೂ ಸ್ವಾಮಿಗಾಗಿ ತನ್ನ ಜೀವದ ಹಂಗುದೊರೆದು ಕಾದುವ ಶೂರ-ಧೀರನೂ ಆಗಿದ್ದನು. ಒಮ್ಮೆ ದೇವರಾಯನ ಅರಮನೆಗೆ ಸ್ವಾಮಿದ್ರೋಹಿಗಳು ಕೆಲವರು ಮುತ್ತಿಗೆಹಾಕಿದ್ದರು. ಅದು ತಿಳಿದೊಡನೆ ಲಕ್ಷ್ಮೀಧರಾಮಾತ್ಯನು ಮತ್ತೊಂದು ಮಾತಿಲ್ಲದೆ, ಕೆಲಬಲವನ್ನು ವಿಚಾರಿಸದೆ, ಬಂದವರು ಬಲವಂತರೆಂದು ಗಣನೆಗೆ ತಾರದೆ

ಹಿಂಜರಿಯದೆ, ಪತಿಕಾರ್ಯವೇ ಕರ್ತವ್ಯವೆನ್ನುತ್ತ ತಾನೊಬ್ಬನೇ ಮುನ್ನುಗ್ಗಿ ಶತ್ರುಗಳನ್ನು ಆವೇಶದಿಂದ ಹೊಡೆಹೊಡೆದಟ್ಟಿ ಸ್ವಾಮಿನಿಷ್ಠೆಯನ್ನು ಮೆರೆದನು.

ಈ ಶಾಸನದಲ್ಲಿ ಹೇಳಿದ ಮಹಾಗಣಪತಿ ಸ್ಥಾಪನೆಯೊಂದಷ್ಟಲ್ಲದೆ, ಅನೇಕ ಮುಖವಾದ ಧರ್ಮಕಾರ್ಯಗಳನ್ನೂ ಮಾಡಿದನು. ಇಂತಹ ಬಹುಮುಖವಾದ ಸೇವೆ ಸಲ್ಲಿಸುವ ಧೀರೋದಾತ್ತಗುಣಾಢ್ಯತೆ ಕವಿರಾಜ ಲಕ್ಷ್ಮೀಧರನಿಗೆ ಹುಟ್ಟಾ ಮೈಗೂಡಿದುದು ಹೇಗೆಂಬುದನ್ನು ಮಧುರ ಅತ್ಯಂತ ಹೃದಯಸ್ಪರ್ಶಿಯಾಗಿ ಒಂದು ಪದ್ಯದಲ್ಲಿ ಹೇಳಿದ್ದಾನೆ :

ಕೆಱೆಯಂ ಕಟ್ಟಿಸು ಬಾವಿಯಂ ಸವಸು ದೇವಾಗಾರಮಂ ಮಾಡಿಸ-
ಜ್ಜೆಱೆಯೊಳ್ಸಿಲ್ಕಿದನಾಥರಂ ಬಿಡಿಸು ಮಿತ್ರರ್ಗಿಂಬುಕೆಯ್ ನಂಬಿದ-
ರ್ಗೆಱೆವೆಟ್ಟಾಗಿರು ಶಿಷ್ಟರಂ ಪೊರೆಯೆನುತ್ತಿಂತೆಲ್ಲಮಂ ಪಿಂದೆ ತಾ-
ಯೆಱೆದಳ್ಪಾಲೆಱೆವಂದು ತೊಟ್ಟು ಕಿವಿಯೊಳ್ ಲಕ್ಷ್ಮೀಧರಾಮಾತ್ಯನ ||

# ೧೪೪. ಧರಣೋಜ

(೧೪೨೪)

ಹರಿಹರದ ಕ್ರಿ. ಶ. ೧೪೨೪ ರ ಶಾಸನವನ್ನು[1] ಮಾಚಿದೇವನ ಮಗನಾದ ಧರಣೋಜನು ರಚಿಸಿದನೆಂದು ತಿಳಿದುಬರುತ್ತದೆ. ಬುಳ್ಳಚಮೂಪನು ಅಣೆಕಟ್ಟು ಕಟ್ಟಿಸಿದ ಸಂಗತಿಯನ್ನು ಈ ಶಾಸನವು ವಿವರಿಸುತ್ತದೆ. ಕೊನೆಯ,

ಹರಿಹರದೇವರ ವರದಿಂ
ವರಗದ್ಯಂ ಪದ್ಯ[ಜಾ ?]ಳವಂ ಶಾಸನದೊಳ್
ಬರೆದಂ ಮನುಕುಳರತ್ನಾ
ಕರಚಂದ್ರಂ ಮಾಚಿದೇವಸುತ ಧರಣೋಜಂ ||

ಎಂಬ ಪದ್ಯದಲ್ಲಿ 'ಹರಿಹರದೇವರ ವರದಿಂ ವರಗದ್ಯಂ ಪದ್ಯ........' ಎಂದಿರುವುದರಿಂದ ಕವಿ ಧರಣೋಜನೇ ಎಂಬಲ್ಲಿ ಸಂದೇಹವಿಲ್ಲ. ಆ ಹರಿಹರದಲ್ಲಿಯೇ ಇರುವ, ಇದಕ್ಕಿಂತ ೫೫ ವರುಷ ಪೂರ್ವದ ಕ್ರಿ. ಶ. ೧೩೬೯ ರ ಶಾಸನದಲ್ಲಿಯೂ[2] ಅದನ್ನು ಬರೆದವನು ಧರಣೋಜನೆಂದಿದೆ. ಬರೆಹದ ಹೇಳಿಕೆಯಲ್ಲಿ ವಿಶೇಷವೇನಿಲ್ಲದಿದ್ದರೂ ಕರ್ತೃತ್ವಾರ್ಥವನ್ನು ಊಹಿಸಿದರೆ ತಪ್ಪಿಲ್ಲ. ಆ ಪದ್ಯವಿದು :

ಹರಿಹರದೇವರಿಗಂ ಭೂ
ಸುರಪತಿಗಂ ಮುದ್ದಮಂತ್ರಿ ಧಾರೆಯನೆಱೆದಾ
ವರದಂಡನಾಥಪುರಕಂ
ಧರಣೋಜಂ ಬರೆದನುಱೆ ಶಿಲಾಶಾಸನಮಂ ||

---

1 Ep. Car. XI, ದಾವಣಗೆರೆ 29.

2 Ep. Car. XI, ದಾವಣಗೆರೆ 34.

ಬುಳ್ಳನ ಧರ್ಮಕಾರ್ಯವನ್ನು ವಿವರಿಸುವ ಶಾಸನದಲ್ಲಿಯ ವರ್ಣನಾ ವೈಖರಿಯನ್ನು ನೋಡಿ :

ಧುರದೊಳ್ಗಂಡರ ಗೂಳಿ ವೈರಿಗಜಸಿಂಹಂ ಕೋಪದಿಂ ತನ್ನ ಬಿ
ಲ್ದಿರುವಿಂ ಶಸ್ತ್ರಮುಡರ್ದು ಸಾರ್ಚಲಿದಿರಾಂತರ್ತಮ್ಮ ಜೀವಂಗಳಂ
ಸುರಕಾಂತಾರತಿಯಲ್ಲಿ ಸಾರ್ಚಿದರಣಂ ಭೀತರ್ನಿಜಾಸ್ಯಾಬ್ಜದೊಳ್
ಬೆರಳಂ ಸಾರ್ಚಿದಡಿದಲ್ಲಿರೆ ಗಿರಿವ್ರಾತಂಗಳೊ[ಳ್ದೇ]ಹಮಂ
ಭರದಿಂ ಸಾರ್ಚಿದರಾಂತು ನಿಲ್ವದಟ[ನಾ]ವಂ
ಚಾಮುಭೂಮೀಶನೊಳ್ ||

ವೀರಭಗೀರಥಂ ಗಗನಗಂಗೆಯನುರ್ವಿಗೆ ತಂದನಂತದೇಂ
ಪೌರುಷಮಲ್ತು ಕೇಳ್ಗಗನದಿಂ ಕೆಳಗಿರ್ದು ಹರಿದ್ರೆಯೆತ್ತಲುಂ
ಬಾರದಿಲ್ಕೆ ಕಟ್ಟಿ ಪಿಡಿದಟ್ಟಿ ಹರೀಶಪುರಕ್ಕೆ ಕೊಂಡು ಬಂ
ದೀ ರಸೆಯೊಳ್ಪಿಸರ್ಪಡೆದ ಬುಳ್ಳಚಮೂಪನಿದೇಂ ಸಭಾಗ್ಯನೋ ||

ನಿಂದಿರೆನಲ್ನಿನ್ನಾಜ್ಞೆಗೆ
ನಿಂದಳ್ನೀಂ ಕರೆಯಲೊಡನೆ ಪರಿಕಾಲಿಂದಂ
ಬಂದಳ್ ಹರಿದ್ರೆಯೆನಲೇ
ನೆಂದುಸುರ್ವೆಂ ಬುಳ್ಳರಾಜ ನಿನ್ನಯ ಸತ್ವಂ ||

# ೧೪೫. ಮಂಗರಾಜ

(೧೪೩೨)

ಮಂಗರಾಜ ಒಬ್ಬ ಸಂಸ್ಕೃತ ಕವಿ. ಶ್ರವಣಬೆಳುಗೊಳದಲ್ಲಿರುವ ಒಂದು ನಿಷಿಧಿಶಾಸನವನ್ನು ಈತನು ರಚಿಸಿದ್ದಾನೆ. ಕ್ರಿ. ವ. ೧೪೩೨ರ ಈ ಶಾಸನವು ೧೬೦ ಸಾಲುಗಳಲ್ಲಿ ಹರಡಿದೆ. ಕವಿ ತನ್ನ ಹೆಸರನ್ನು ಹೀಗೆ ಹೇಳಿಕೊಂಡಿದ್ದಾನೆ.

ಪ್ರಬಂಧಧ್ವನಿಸಂಬಂಧಾತ್ಸದ್ರಾಗೋತ್ಪಾದನಕ್ಷಮಾ
ಮಂಗರಾಜಕವೇರ್ವಾಣೀ ವಾಣೀವೀಣಾಯುತತೇತರಾಂ ||

## ೧೪೬. ದುಗ್ಗಪ

(೧೪೭೪)

ಮೈಸೂರು ಜಿಲ್ಲೆ ಮಳವಳ್ಳಿ ತಾಲೂಕು ಸುಜ್ಜಲೂರು ಗ್ರಾಮದ ತಳವಾರ ತಿಮ್ಮನ ವಶದಲ್ಲಿರುವ ತಾಮ್ರಶಾಸನವನ್ನು ದುಗ್ಗಪನೆಂಬವನು ರಚಿಸಿದ್ದಾನೆ. ವಾಡಿಕೆಯಂತೆ ರಾಜವಂಶಾವಳಿವರ್ಣನೆ ಮತ್ತು ವೃತ್ತಿವಿತರಣೆಯ ವಿವರಣೆ ಸಂಸ್ಕೃತ ಶ್ಲೋಕಗಳಲ್ಲಿದ್ದು ಸೀಮಾವಿವರಣೆ ದೇಶಭಾಷೆಯಲ್ಲಿದೆ. ಕೊನೆಯ,

ಆತ್ರೇಯೋ ಯಾಜುಷೋ ಧೀಮಾನ್ ಮಾಧವಾರಾಧ್ಯನಂದನಃ
ಶಾಸನಗ್ರಂಥಕೃದ್ವಿದ್ವಾನ್ ದುಗ್ಗಪಶ್ಚೈಕವೃತ್ತಿಭಾಕ್ ||

ಎಂಬ ಶ್ಲೋಕದಿಂದ ಈ ಶಾಸನಕವಿ ದುಗ್ಗಪನು ಆತ್ರೇಯಗೋತ್ರದ ಯಜುಶ್ಶಾಖೆಯ ಮಾಧವಾರಾಧ್ಯನ ಮಗನೆಂದೂ ಇವನೂ ದೊರೆಯಿಂದ ಒಂದು ವೃತ್ತಿಯನ್ನು ಪಡೆದನೆಂದೂ ತಿಳಿಯುತ್ತದೆ. ತುಮಕೂರು ಜಿಲ್ಲೆಯ ಪಾವುಗಡ ೬೯ನೆಯ ಶಾಸನದಲ್ಲಿ ವೃತ್ತಿಪಡೆದ ದುಗಯನೂ ಈತನೇ ಇರಬೇಕು.* [೧೫೨೨] ಅಗ್ರಹಾರದ ಬ್ರಾಹ್ಮಣವೃಂದವನ್ನು ಬಿಟ್ಟು, ಶಾಸನದ ಕೊನೆಕೊನೆಯಲ್ಲಿ ಕವಿಗೂ ಲೇಖಕನಿಗೂ ವೃತ್ತಿಯನ್ನಿತ್ತುದನ್ನು ಹೇಳಿದ್ದು, ಈ ಇಬ್ಬರೊಡನೆ ರಾಯಸಸ್ವಾಮಿಯೂ ವೃತ್ತಿಯನ್ನು ಪಡೆದಂತೆ ಹೇಳಿದೆ. ಆದರೆ ಶಾಸನದ ರಚನೆಗೆ, ಬರೆಹಕ್ಕೆ ಇಲ್ಲವೆ ಕಂಡರಣೆಗೆ ಈತನ ಸಂಬಂಧವೇನೆಂದು ಗೊತ್ತಾಗುವುದಿಲ್ಲ.

---

* ಈ ಶ್ಲೋಕವೇ Ec. XII, ಪಾವು 69, ಕ್ರಿ. ಶ. 1522ರ ತಾಮ್ರಶಾಸನದಲ್ಲಿದೆ.

# ೧೪೭. ಶಂಕರಾರ್ಯ

(೧೪೮೪)

ಭಟಕಳ ತಾಲೂಕಿನ ಕೈಕಿಣಿ ಎಂಬಲ್ಲಿಯ ಹಿರೇಬಸದಿಯಲ್ಲಿ ಸಿಕ್ಕ, ಈಗ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಸಂಶೋಧನ ಸಂಸ್ಥೆಯಲ್ಲಿ ಇಡಲಾಗಿದ್ದ ಕಂಚಿನ ಮಾನಸ್ತಂಭದ ಶಾಸನವನ್ನು[1] ಶಂಕರಾರ್ಯನೆಂಬವನು ರಚಿಸಿದ್ದಾನೆ. ಈತನ ತಂದೆ ಗೋಪಣ. ಕವಿ ತನ್ನ ಪರಿಚಯವನ್ನು 'ಉಭಯ ಕವಿ' ಎಂದೂ ತರ್ಕ ಅಲಂಕಾರ ವ್ಯಾಕರಣ ಪರಿಣತನೆಂದೂ ತಿಳಿಸಿಕೊಟ್ಟಿದ್ದಾನೆ. ತಂದೆ ಶುದ್ಧಸಮ್ಯಕ್ತ್ವರತ್ನಾಭರಣನು. ಸಾಳುವೇಂದ್ರನು ಸ್ಥಾಪಿಸಿದ ಮಾನಸ್ತಂಭದ ವಿಷಯವನ್ನೂ ಅದರ ಕಾಲವನ್ನೂ ಒಂದು ಸಂಸ್ಕೃತ ಪದ್ಯದಲ್ಲಿ ವಿವರಿಸಿರುವುದು ಶಂಕರಾರ್ಯನ 'ಉಭಯಕವಿತ್ವ'ಕ್ಕೆ ನಿದರ್ಶನವಾಗಿದೆ.

ಶಾಕಶ್ರೀಕ್ರೋಧಿವರ್ಷೇ ಸಸ್ಯಘಟಿಗಣಿತೇ ಜ್ಯೇಷ್ಠಶುಕ್ಲಾನ್ಯಪಕ್ಷಾ
ಯುಷ್ಟಮ್ಯಾಂಗಾರ್ಕವಾರ ದ್ವಿಪಕರಣಶತಕ್ಷ್ಮೇ ವೃಷಾಯ್ಯೋದ್ಯಲಗ್ನೇ
ಸಂಗೀತಾಖ್ಯೇ ಪುರೇಸ್ಮಿನ್ ವಿಧುಜಿನಭವನೇ ಸೂತನೇ ಕಾಂಸ್ಯಭಾಸ್ವ
ನ್ಮಾನಸ್ತಂಭಪ್ರತಿಷ್ಠಾಂ ಸುರುಚಿರಮಕರೋತ್ಸಾಳುವೇಂದ್ರಃ
ಕ್ಷಿತೀಂದ್ರಃ ||

ಈ ಮಾನಸ್ತಂಭವು ಮೂಲತಃ ಹಾಡುವಳ್ಳಿಯಲ್ಲಿ [ಸಂಗೀತಪುರದಲ್ಲಿ ಸ್ಥಾಪಿತವಾದುದು. ಆರಂಭದ ಭಾಗವು ಕಳೆದುಹೋಗಿದೆ. ಪದ್ಯಮಯವಾದ ಈ ಶಾಸನವು ಇಲ್ಲಿ ಹೀಗೆ ಆರಂಭವಾಗುತ್ತದೆ :

[ಗೀ]ಶನ ಚಾರುಬಿಂಬಮುಂ ಸ
ಜ್ಜನಪತಿ ತದ್ಗರ್ಭಗೇಹದೊಳ್ ಸ್ಥಾಪಿಸಿದಂ ||

ಈ ಮಾನಸ್ತಂಭ ಶಾಸನದಲ್ಲಿ :ಚಂದ್ರನಾಥಜಿನನಿಗೆ ವಿವಿಧ ದಾನಗಳನ್ನು ವಿವರಿಸಲಾಗಿದೆ. ಇದರ ಪದ್ಯಗಳಲ್ಲಿ ಕೆಲವಂಶವನ್ನು ಇಲ್ಲಿ ಕೊಟ್ಟಿದೆ :

---

1 Karnatak Inscriptions, Vol. 1, Ins No. 65.

ಎಂಟುಂ ದೆಸೆಗಳ ನಾದಂ
ವೆಂಟಣಿಸೆ ನಿನಾದವೊಳ್ಪನೆಸೆಗುವ ಮಾಲಾ
ಘಂಟೆಯುಮಂ ಸೊಗಯಿಸುವೈ
ಗಂಟೆಯುಮಂ ಚಂದ್ರನಾಥಗೃಹಕರ್ಪಿಸಿದಂ ||

ಚತುರ್ವಿಧದ ದಾನಮಂ ಕುಡ
ಲತಿಹರ್ಷದೆ ದರ್ಶನಾದ್ಯ ಚಾತುರ್ವರ್ಣ
ಕ್ಕತುಳಮನಂ ಸಾಳೇಂದ್ರ
ಕ್ಷಿತಿಪಂ ಸದ್ವಿತ್ತವೃತ್ತಿಗಳನರ್ಪಿಸಿದಂ ||

ಅಂತು ಭುವನನುತಚರಿತಂ ಜಿನೇಂದ್ರಭಕ್ತಿಭರಿತಂ ಪರಮಗುರು ಪಂಡಿತಾರ್ಯಚರಣಾರವಿಂದಮತ್ತಮಧುಕರಂ ಸಾಳುವೇಂದ್ರನೃಪಚಂದ್ರಂ ಚಂದ್ರಪ್ರಭತೀರ್ಥೇಶ್ವರನಂ ಪ್ರತಿಷ್ಠಾಪಿಸಿ, ತದ್ಬಿಂಬಮಂ ನೆಸದ ನೋಡಿದ ಪೂಜಿಸಿದ ಭವ್ಯಕೃತಾರ್ಥರಪ್ಪಂತೆ ಗೆಯ್ದು, ಪುಣ್ಯಮನು-ಪಾರ್ಜಿಸಿ ಕೀರ್ತಿಯಂ ಪೆರ್ಚಿಸಿ ದುಷ್ಟರಂ ಸಂತರ್ಜಿಸಿ ಶಿಷ್ಟರಂ ಪರಿಪಾಲಿಸಿ ಸಾಮ್ರಾಜ್ಯ ಸಂಪತ್ತಿಯಿಂ ಭೂತಳಮನಾಳುತ್ತಿರ್ದಂ.

ಅತಿಶೋಭಾರಮ್ಯವಾಯ್ತೀ ಜಿನಗೃಹವಿದನಾಂ
ನೋಳ್ಪೆವೆಂದಳ್ತಿಯಿಂ ಪೊ
ಕ್ಕು ತದಂತಸ್ಸ್ಥಾಯಿ ಚಂದ್ರಪ್ರಭಜಿನಪತಿಪಾದಾಬ್ಜಮಂ ನಾಡೆ ಕಂಡು
ನ್ನತಹರ್ಷಂಗೆಯ್ದು ಮರ್ತ್ಯಪ್ರತತಿಯುನಿಳೆಯೊಳ್ಪಾವನಂಗೆಯ್ವ ಲೋಕ
ಸ್ತುತನಂ ಸಾಳ್ವೇಂದ್ರನಂ ಪೋಲ್ಪುದೆ ಚರಿತದೊಳ್ಕಿಕ್ಕ-
ನುರ್ವೀಶವರ್ಗಂ ||

ವರತರ್ಕಾಲಂಕೃತಿವ್ಯಾಕರಣಪರಿಣತಂ ಶುದ್ಧಸಮ್ಯಕ್ತ್ವರತ್ನಾ
ಭರಣಶ್ರೀಗೋಪಣಾತ್ಮೋದ್ಭವನುಭಯಕವೀಶಂ ದ್ವಿಜಂ
ಶಂಕರಾರ್ಯಂ
ಪರಮಾರ್ಹಚ್ಛಾಸನಕ್ಕೊಳ್ಪೆಸೆವ ಕೃತಿಯುನಾಚಂದ್ರತಾರಂಬರಂ ಸು
ಸ್ಥಿರಮಾಗಲ್ಸಾಳುವೇಂದ್ರಾಧಿಪನಭಿಮತದಿಂ ಸಜ್ಜನರ್ಮೆಚ್ಚೆ ಪೇಳ್ದಂ ||

## ೧೪೮. ನರಸಿಂಹಾರ್ಯ

(೧೫೦೫)

ವೀರನರಸಿಂಹೇಂದ್ರ ಮಹಾರಾಜನ ಅಪ್ಪಣೆಯಂತೆ ಈ ನರಸಿಂಹಾರ್ಯನು ಕೋಲಾರ ಜಿಲ್ಲೆಯ ಗೌರಿಬಿದನೂರು ತಾಲೂಕಿನ ನಗರಗೆರೆಯ ತಾಮ್ರಶಾಸನವನ್ನು ರಚಿಸಿದ್ದಾನೆ :

ಶ್ರೀವೀರನರಸಿಂಹೇಂದ್ರಶಾಸನಾಚ್ಛಾಸನಂ ತ್ವಿದಂ
ಬಭಾಣ ನರಸಿಂಹಾರ್ಯೋಽಲಿಖತ್ತಾಮ್ರರುರ್ಜನಾರ್ದನಃ ॥

# ೧೪೪. ಸಭಾಪತಿ ಸ್ವಯಂಭು

( ೧೫೧೩-೧೫೫೧ )

ಈತನೊಬ್ಬ ಸಂಸ್ಕೃತಶಾಸನಕವಿ. ಈತನು ವಿಜಯನಗರ ರಾಜರ ಆಸ್ಥಾನದಲ್ಲಿದ್ದುಕೊಂಡು ರಾಯರು ತಮ್ಮ ವಿಶಾಲರಾಜ್ಯದಲ್ಲಿ ಅಲ್ಲಲ್ಲಿ ಕೊಡುವ ದತ್ತಿದಾನಗಳ ತಾಮ್ರಶಾಸನಗಳನ್ನು ಸಂಸ್ಕೃತದಲ್ಲಿ ರಚಿಸಿ ಕೊಡುತ್ತಿದ್ದನು. ಈ ಸಭಾಪತಿಸ್ವಯಂಭುವಿನ ತಾಮ್ರಶಾಸನಗಳು ಕರ್ನಾಟಕದ ನಾನಾಭಾಗಗಳಲ್ಲಿ ದೊರೆಯುತ್ತಿವೆ. ನಾವೀಗ ನೋಡಿದ ತಾಮ್ರಶಾಸನಗಳಲ್ಲಿ ಕ್ರಿ.ಶ. ೧೫೧೩ [ನಂಜನಗೂಡು]ರಿಂದ ೧೫೫೧ರ [ಕಡ ಲಾಡಿ]ವರೆಗೂ ಈತನ ಕರ್ತೃತ್ವದ ಉಲ್ಲೇಖವನ್ನು ಕಂಡಿದ್ದೇವೆ. ನಂಜನ ಗೂಡು, ಹುರಗಲವಾಡಿ [ಮಂಡ್ಯ], ಬ್ಯಾಲದಕೆರೆ [ಕೃಷ್ಣರಾಜಪೇಟೆ], ಹೊನ್ನೇನಹಳ್ಳಿ [ನಾಗಮಂಗಲ], ಬೇವಿನಹಳ್ಳಿ [ರಾಯಚೂರು], ಗುಂಡ್ಲ ಪೇಟೆ, ಕಡಲಾಡಿ [ಉತ್ತರ ಆರ್ಕಾಟು] ಮೊದಲಾದ ಊರುಗಳಲ್ಲಿ ಇವನ ತಾಮ್ರಪಟಗಳು ದೊರೆತಿವೆ.[1] ಇವೆಲ್ಲವುಗಳ ಕಾಲೋಲ್ಲೇಖಗಳಿಂದ ಸಭಾ ಪತಿಸ್ವಯಂಭುವಿನ ಜೀವಿತಕಾಲ ಕ್ರಿ. ಶ. ೧೫ ನೆಯ ಶತಮಾನದ ಕೊನೆ ಯಿಂದ ೧೬ ನೆಯ ಶತಮಾನದ ಮಧ್ಯವನ್ನು ದಾಟುತ್ತದೆಂದು ಹೇಳ ಬಹುದು. ಕೃಷ್ಣದೇವರಾಯ ಮತ್ತು ಅಚ್ಯುತರಾಯ, ಸದಾಶಿವರಾಯರ ಶಾಸನಗಳನ್ನು ಇವನು ರಚಿಸಿದ್ದಾನೆ. ಈತನ ನಾಮನಿರ್ದೇಶನದ ಶ್ಲೋಕವು ಎಲ್ಲವುಗಳಲ್ಲಿ ಸಾಮಾನ್ಯವಾಗಿರುವುದು ಇದು :

ಕೃಷ್ಣದೇವ ಮಹಾರಾಯಶಾಸನೇನ ಸಭಾಪತಿಃ
ಅಭಾಣೀ ನ್ಮೃದುಸಂದರ್ಭಂ ತದಿದಂ ತಾಮ್ರಶಾಸನಂ ||

—ನಂಜನಗೂಡು, ಗುಂಡ್ಲುಪೇಟೆ

ಅಚ್ಯುತೇಂದ್ರ ಮಹಾರಾಯ.............. [ಮೇಲಿನಂತೆ]

—ಹುರಗಲವಾಡಿ, ಕಡಲಾಡಿ

---

1 Ep. Car. III, ನಂ. ಗೂ 16, ಮಂಡ್ಯ 55, IV ಗುಂಡ್ಲು 30, ಕೃರಾಪೇ 11, ನಾಮಂ 58 ಇತ್ಯಾದಿ.

ಮೃದುಪದಮಿತಿ ತಾಮ್ರಶಾಸನಾರ್ಥಂ ಮಹಿತಸದಾಶಿವರಾಯ
ಶಾಸನೇನ
ಅಭಣದನುಗುಣಂ ವಚೋ ಮಹಿಮ್ನಾ ಸರಸತರೇಣ
ಸಭಾಪತಿಸ್ಸ್ವಯಂಭೂಃ

—ಬೇವಿನಹಳ್ಳಿ, ಹೊನ್ನೇನಹಳ್ಳಿ

## ೧೫೦. ವಿದ್ಯಾನಂದೋಪಾಧ್ಯಾಯ

(೧೫೧೮)

ಮೈಸೂರು ಜಿಲ್ಲೆಯ ಚಾಮರಾಜನಗರ ತಾಲೂಕಿನ ಮಲೆಯೂರು ಗ್ರಾಮದ ಮೇಲಿರುವ ಒಂದು ಶಾಸನವನ್ನು* ಈತನು ಬರೆದಿದ್ದಾನೆ. ಮುನಿ ಚಂದ್ರಾರ್ಯವರ್ಯನೆಂಬ ಜೈನಯತಿ ಶಕೆ ೧೪೪೦ ನೆಯ ಈಶ್ವರ ಸಂವತ್ಸರದ ಶ್ರಾವಣ ಬಹುಳ ದ್ವಾದಶಿಯಂದು ಸಮಾಧಿಹೊಂದಿದ ವಿಷಯವನ್ನು ಒಂದು ಸಂಸ್ಕೃತ ಪದ್ಯದಲ್ಲಿ ತಿಳಿಸಿದ್ದಾನೆ. ಕವಿ ತನ್ನ ಹೆಸರನ್ನೂ ಬರೆಹಗಾರನ ಹೆಸರನ್ನೂ ಸಂಸ್ಕೃತದಲ್ಲಿಯೇ ಹೇಳಿದ್ದಾನೆ. ಆ ಶಾಸನವನ್ನು ಇಡಿಯಾಗಿ ಇಲ್ಲಿ ಕೊಟ್ಟಿದೆ :

ಶ್ರೀ

ಶಾಕೇಽಬ್ದೇ ವ್ಯೋಮ ಪಾಥೋನಿಧಿಗತಿ ಶಶಿಸಂಖ್ಯೇಶ್ವರೇ ಶ್ರಾವಣೇ ತತ್
ಕೃಷ್ಣೇ ಪಕ್ಷೇಽತ್ರತದ್ವಾದಶತಿಥಿಯುತಸತ್ಕಾವ್ಯವಾರೇ ಗುರೌ ಭೇ
ಆದ್ಯಂಘ್ರೌ ಕನ್ಯಕಾಯಾಂ ಯತಿಪತಿ ಮುನಿ-
ಚಂದ್ರಾರ್ಯವರ್ಯಾಗ್ರಶಿಷ್ಯೋ
ಲೇಭೇ ಚೇತ[ಃ]ಕೃತಾರ್ಹತ್ ಪದಯುಗಮುನಿಚಂದ್ರಾರ್ಯವರ್ಯ-
ಸ್ಸಮಾಧಿಂ ||

ತಚ್ಛಿಷ್ಯವೃಷಭದಾಸವರ್ಣಿನಾ ಲಿಖಿತಂ
ಪದ್ಯಮಿದಂ ವಿದ್ಯಾನಂದೋಪಾಧ್ಯಾಯೇನ ಕೃತಂ ||

---

* Ec. IV, ಚಾ. ನಗರ 147.

## ೧೫೧. ಮಲ್ಲಣಾರಾಧ್ಯ

( ೧೫೩೮ )

ಹರಿಹರದ ತಾಮ್ರಶಾಸನವೊಂದನ್ನು* [ಕ್ರಿ. ಶ. ೧೫೩೮] ಈತನು ರಚಿಸಿದ್ದಾನೆ. ಕೊನೆಯಲ್ಲಿ,

> ವಾಧೂಲೋ ಯಾಜುಷೋ ವಿದ್ವಾನ್ ಕೋಟೀಶಾನ್ವಯಸಂಭವಃ |
> ತಿಮ್ಮಣಾರಾಧ್ಯತನುಜೋ ಮಲ್ಲಣಾರಾಧ್ಯನಾಮಕಃ |
> ಕೃತವಾನಿಹ ಪದ್ಯಾನಿ ಶಾಸನೇ ಪ್ರಭುಶಾಸನಾತ್ ||

"ವಾಧೂಲ ಗೋತ್ರದ ಯಜುಃಶಾಖೆಯ ಕೋಟೀಶವಂಶದವನಾದ ತಿಮ್ಮ-ಣಾರಾಧ್ಯನ ಮಗ ಮಲ್ಲಣಾರಾಧ್ಯನೆಂಬ ವಿದ್ವಾಂಸನು ಪ್ರಭುವಾದ ಅಚ್ಯುತ (ಮಲ್ಲಪಣ್ಣ) ದೊರೆಯ ಅಪ್ಪಣೆಯಂತೆ ಈ ಶಾಸನಪದ್ಯಗಳನ್ನು ರಚಿಸಿದನು" ಎಂದು ಕವಿ ತನ್ನ ಹೆಸರುದೆಸೆ ವಿವರಿಸಿದ್ದಾನೆ.

---

* Ec. XI, Dg. 27.

# ೧೫೨. ಬಾಯಣಾಚಾರ್ಯ

(೧೫೫೪)

೯ ಅಡಿ ೬ ಅಂಗುಲ × ೪ ಅಡಿ ಕಲ್ಲನ್ನು ವ್ಯಾಪಿಸಿದ ಹರಿಹರದ ಒಂದು ಶಾಸನದ* ೮೪ ಒಟ್ಟು ಸಾಲುಗಳ ಪೈಕಿ ೬೮ ಸಾಲುಗಳು ತಾಮ್ರಶಾಸನದ ಪ್ರತಿಕೃತಿಯಾಗಿದೆ. ವಿಜಯನಗರ ರಾಯರ ವಂಶಪ್ರಶಸ್ತಿಯು, ವೃತ್ತಿ ವಿತರಣೆಯ ಶ್ಲೋಕಗಳು ಆ ಭಾಗದಲ್ಲಿವೆ; ೬೯ ನೆಯ ಸಾಲಿನ ಆರಂಭದಲ್ಲಿ 'ತಾಮ್ರಶಾಸನದ ಪ್ರತಿಯು ಶಿಲಾಶಾಸನವಿದು' ಎಂದಿದೆ. ಮುಂದೆಯೂ ದೇವರಾಯ ಮಹೀಪತಿ, ನಾಗಪಾಮಾತ್ಯ, ಜಗನ್ನಾಥಪ್ರಭು, ಬುಳ್ಳಪಾ-ಮಾತ್ಯರನ್ನು ಕುರಿತ ಸಂಸ್ಕೃತ ಶ್ಲೋಕಗಳುಂಟು. ದತ್ತಿಯನ್ನಿತ್ತ ವಿವರ ಕನ್ನಡ ಗದ್ಯದಲ್ಲಿ ಬಳಿಕ ಇದೆ. ಇದರಲ್ಲಿ ಹೇಳಿರುವ :

"ಈ ಶಾಸನಕ್ಕೃತಿಯ ಹೇಳಿದದಕೆ ಶ್ರೀಹರಿಹರದೇವರೂ ಕಾಲುವೆಯ ವೃತ್ತಿವಂತ ಮಹಾಜನಂಗಳು ಪರಿಣಮಿಸಿ ದೇವರಿಂದ ನಾಗುಳ ಬ್ರಾಹ್ಮ-ರಿಂದ ನಾಗುಳ ಉಭಯಂ ಯೆಂಟುಕೊಳಗ ಗದ್ದೆಯನೂ ಕಾಶ್ಯಪಗೋತ್ರದ ಯಜುಶ್ಶಾಖೆಯ ಚಲಸಂಪ್ರದಾಯದ, ಮಲ್ಲಿಕಾರ್ಜುನಾಚಾರ್ಯ್ಯರ ಮಕ್ಕಳು ಬಾಯಣಾಚಾರ್ಯ್ಯರಿಗೆ ಧಾರಾಪೂರ್ವ್ವಕವಾಗಿ ಕೊಟ್ಟು...."

ಎಂಬ ಮಾತಿನಿಂದ ಈ ಶಾಸನದ ಕವಿ ಮಲ್ಲಿಕಾರ್ಜುನಾಚಾರ್ಯನ ಮಗ ಬಾಯಣಾಚಾರ್ಯನೆಂದು ತಿಳಿಯುತ್ತದೆ. ತಾಮ್ರಶಾಸನದ ಕರ್ತೃವೂ ಇವನೆಯೋ ಕೇವಲ ನಕಲಿಗನೋ ಶಾಸನದಿಂದ ಸ್ಪಷ್ಟವಾಗುವುದಿಲ್ಲ. ಆದರೂ ೬೯ ನೆಯ ಸಾಲಿನ ತರುವಾಯವೂ ಸಂಸ್ಕೃತ ಶ್ಲೋಕಗಳೂ ಕೊನೆಯಲ್ಲಿ ಎರಡು ಕನ್ನಡ ಕಂದಪದ್ಯಗಳೂ ಇರುವುದರಿಂದ, ಈ ಭಾಗವನ್ನು ನಿರ್ವಿವಾದವಾಗಿ ರಚಿಸಿದವನಾದ ಬಾಯಣಾಚಾರ್ಯನು ಉಭಯಭಾಷಾ ಕವಿಯಾಗಿದ್ದನೆಂಬುದು ಖಂಡಿತ. ತಾಮ್ರಶಾಸನವನ್ನೂ ಹೇಳಿರುವ ಸಂಭವವಿಲ್ಲದಿಲ್ಲ.

---

* Ec. XI, Dg. 23.

ಕೊನೆಯ ಕಂದಪದ್ಯಗಳು :

ಅರಿಗುಹದಾನವಮದಸಂ
ಹರಣಂಗಳ್ ವಿಮಲಕರಣಭಜಕಾನೀಶೋ
ದ್ಧರಣಂಗಳ್ ಹರಿಹರವರ
ಚರಣಂಗಳ್ ಪೊರೆಗೆ ಧರೆಯನಾಚಂದ್ರಾರ್ಕಂ ||

ಇನ್ನೊಂದು ಕಂದಪದ್ಯದಲ್ಲಿ ಬರೆದವನ ನಾಮನಿರ್ದೇಶವಿದ್ದಿತೆಂದು ತೋರುತ್ತದೆ. ಅದು ತ್ರುಟಿತವಾಗಿದೆ; ಆತನು ಸಂಗಾರ್ಯನ ಮಗನೆಂಬುದು ಮಾತ್ರ ಗೊತ್ತಾಗುತ್ತದೆ :

ಹರಿಹರಸೇವಾಪರಿಣತ
ಕರಣಂ ಸಂಗಾಯ[ರ್ಯ]ಪುಣ್ಯಜಠರಾಬ್ಧಿಸು[ಧಾ
ಕಿ]ರಣಂ.......................
............... ಬ[ರೆದನೀ]ಶಿಲಾಶಾಸನಮಂ ||

## ೧೫೩. ಸಾಸಲಯ್ಯ

(೧೬೫೪)

ಮೈಸೂರ ಜಿಲ್ಲೆಯ ಯಳಂದೂರು ಗ್ರಾಮದ ಗೌರೀಶ್ವರದೇವಾಲಯದಲ್ಲಿರುವ ಕಂದ ಮತ್ತು ಸುಂದರ ಗದ್ಯಮಯವಾದ ಒಂದು ಶಾಸನವನ್ನು[1] ಈ ಸಾಸಲಯ್ಯನು ರಚಿಸಿದ್ದಾನೆ. 'ಶ್ರೀಮಚ್ಚಿವಾಯನಮಃ' ಎಂದು ಆರಂಭವಾಗುವ ಈ ಶಾಸನದಲ್ಲಿ ಹನ್ನೆರಡು ಕಂದಪದ್ಯಗಳೂ ನಡುವೆ ಒಂದು ವೃತ್ತವೂ ಇದೆ. ಕೊನೆಯ ಈ ಕಂದಪದ್ಯದಲ್ಲಿ ಕವಿಯು ಮತ್ತು ಬರೆಹಗಾರನ ಹೆಸರುಗಳ ನಿರ್ದೇಶವಿದೆ :

ಬರೆದಂ ಬಮ್ಮಣಪಂಡಿತ
ವರತನಯಂ ರಸಿಕಪಂಡಿತಂ ಪೇಳ್ದನಿದಂ
ಸರಸಕವಿ ಸಾಸಲಯ್ಯಂ
ವರಯಿಸಿದಂ ಮುದ್ದಭೂಪನೆನೆ ಮಚ್ಚದರಾರ್ ||

ಕೊನೆಯಲ್ಲಿರುವ ಒಂದು ಮಂಗಲಪದ್ಯವು ಸಂಸ್ಕೃತಭಾಷೆಯಲ್ಲಿದೆ. ಇದರಿಂದ ಸಾಸಲಯ್ಯನು ಉಭಯಭಾಷಾಕವಿಯಾಗಿದ್ದನೆಂದು ತೋರುತ್ತದೆ. ಶಾಸನದ ಸರಳ ಕಥನಶೈಲಿ ಕವಿ ತನ್ನನ್ನು 'ಸರಸಕವಿ' ಎಂದು ಕೊಂಡುದು ಬರೀ ಪ್ರಾಸಕ್ಕಾಗಿ ಇಲ್ಲವೆ ಹೆಮ್ಮೆಗಾಗಿ ಅಲ್ಲ ಎಂದೆನಿಸುವಂತಿದೆ. ಶಾಸನದ ಗದ್ಯಪದ್ಯಮಾದರಿ :

ಶ್ರೀ ಗೌರೀಕುಚಕುಂಕುಮ
ರಾಗಾಂಕಿತವಕ್ಷನೆಸೆವ ಗೌರೀನಾಥಂ
ಈಗೆ ಸುಖೋದಯದುಂ ಕರು
ಣಾಗಾರಂ ಮುದ್ದಭೂಮಿಸಂಗತಿಮುದದಿಂ ||

---

1 Ec. IV, ಯಳಂದೂರು 1.

ಹಿಮಾಚಲಯಕ್ಕೆ ತೆಂಕಣದೆಸೆಯೊಳ್ನೀಲಗಿರಿಯಿರ್ಪುದಲ್ಲಿ ಕಪಿಲಋಷೀಶ್ವರಂ ತಪಮಂ ಮಾಡುತ್ತಿ ದೇವಗಂಗಾಜಲಮಂ ಕಮಂಡಲದೊಳ್ತುಂಬಿಕೊಂಡಿರ ಲಲ್ಲಿಗೆ ನಂದೀಶ್ವರಂ ಬಂದೆಲೆ ಮುನಿವರ ಈ ಕಮಂಡಲೋದಕಮನುತ್ತರ ಮುಖಮಪ್ಪಂತೆ ಪರೆಯಿಸೊಂಡು ನದಿಯಂ ಮಾಡದು ಪುಣ್ಯನದಿಯಪ್ಪುದು ಸಕಲಜನರ್ಗೆ ಭುಕ್ತಿಮುಕ್ತಿಯಂ ಕುಡುವುದೆಂದು ನಿರೂಪಿಸಲಂತೆ ಗೆಯ್ವೆ ನೆಂದಾ ಕಮಂಡಲವಾರಿಯನುತ್ತರಾಭಿಮುಖವಾಗಿ ಪರಿವಂತೆ ಮಾಡಿ ಸುವರ್ಣಾವತಿಯೆಂಬ ಪೆಸರನಿತ್ತನಾ ನದಿಯ ತೀರದಲ್ಲೊಂದು ಪುರ ಮಿರ್ಪುದದಱ ಮಹಿಮೆಯೆಂತೆನೆ

ನಳಿನಜನಖಿಳಪುರಂಗಳ
ನಳವಡೆ ಸೃಜಿಸಲ್ಕಳಂಕವಾದುವೆನುತ್ತಂ
ಇಳೆಯೊಳ್ಪ್ರಸತೀಪುರಮಂ
ದೆಳೆಯೆಂದೂರೆಂಬ ಪೆಸರನಾಗಳೆ ಕರೆದಂ ||

**ಸಂಸ್ಕೃತ ಪದ್ಯ :**

ಪುತ್ರಾನ್ ಪೌತ್ರಾನ್ ಪ್ರಪೌತ್ರಾನ್ ಗಜರಥತುರಗಾನ್
ಸ್ವರ್ಣಪೂರ್ಣಾನುದೀರ್ಣಾನ್
ಕೋಶಾನ್ ದೇಶಾನ್ ಪ್ರಕಾಶಾನ್ ಶುಭಕರಣಗುಣಾಧಾರ-
ದಾರಾನುದಾರಾನ್

ದತ್ವಾಭಿತ್ವಾಪದೋನ್ಯಾತ್ರಿಪುರಭಿದಮಲಾಂ ಬುದ್ಧಿಮೃದ್ಧಿಂ ಸಮೃದ್ಧಿಂ
ವೈದುಷ್ಯಾಯುಷ್ಯಮುಷ್ಯಾಗದಪದತನುತಾಂ ಮುದ್ದರಾಜಂ
ಕ್ಷಿತೀಂದ್ರಂ ||

## ೧೫೪. ನೃಹರಿ

(೧೬೩೯)

ನಂಜನಗೂಡು ತಾಲೂಕಿನ ಗಜ್ಜಿಗನಹಳ್ಳಿಯ ೩ ಪತ್ರಗಳ ತಾಮ್ರ ಶಾಸನವನ್ನು* [ಕ್ರಿ. ಶ. ೧೬೩೯] ರಚಿಸಿದುದು ನರಸಿಂಹಾರ್ಯನ ಮಗನಾದ ನರಹರಿ ಎಂಬ ಕವಿ; ಬರೆದು ಕಂಡರಿಸಿದವನು ನಲ್ಲಯಾಚಾರ್ಯನ ಮಗನಾದ ಶಿಲ್ಪಕರ್ಮದಲ್ಲಿ ಕುಶಲಿಯಾದ ಕೆಂಪಣಾಚಾರಿಯೆಂಬ ಓಜ. ವೃತ್ತಿ ವಿವರಣೆಯ ಕೊನೆಯಲ್ಲಿ ಬರುವ,

ಪದ್ಯಾನಾಮನವದ್ಯಾನಾಂ ಶಾಸನೇಽತ್ರ ವಿರಾಜಿತಾಂ
ಕರ್ತಾ ಶ್ರೀನರಸಿಂಹಾರ್ಯನಂದನೋ ನೃಹರಿಃ ಕವಿಃ ||

ನಲ್ಲಯಾಚಾರ್ಯತನಯಃ ಕುಶಲೀ ಶಿಲ್ಪಕರ್ಮಸು
ಗುಣವಾನ್ ಕೆಂಪಣಾಚಾರಿಃ ಶಾಸನಸ್ಯಾಸ್ಯ ಲೇಖಕಃ ||

ಎಂಬ ಶ್ಲೋಕಗಳು ಇದನ್ನು ತಿಳಿಸುತ್ತವೆ.

---

* Ec. III, ನಂಜನಗೂಡು 198.

## ೧೫೫. ಕೃಷ್ಣದೀಕ್ಷಿತ

( ೧೭೪೮ )

ಒಟ್ಟು ೧೬ ಹಲಗೆಗಳುಳ್ಳ ನರಸಿಪುರಗ್ರಾಮದ ತಾಮ್ರಶಾಸನದ* ಶ್ಲೋಕಗಳನ್ನು ಕೃಷ್ಣಾರ್ಯನ ಮಗ ಕೃಷ್ಣದೀಕ್ಷಿತನು ರಚಿಸಿದ್ದಾನೆ [೧೭೪೮]. 'ಈ ತಾಮ್ರಶಾಸನಸ್ಥ ಶ್ಲೋಕರಚನೆ ಮಾಡಿ ಬರೆದ ಬಗ್ಗೆ' ಈತನು ದತ್ತಿಯನ್ನೂ ಪಡೆದಿದ್ದಾನೆ. ಅಲ್ಲಿ ಕನ್ನಡ ಗದ್ಯದಲ್ಲಿ 'ಕವಿಯ ಹೆಸರಿನ ಉಲ್ಲೇಖವಿರುವುದಲ್ಲದೆ ಕೊನೆಗೆ ಸಂಸ್ಕೃತ ಶ್ಲೋಕದಲ್ಲಿಯೂ ಇದೆ :

ಕಾಶ್ಯಪಃ ಸಾಮಗೋ ಧೀಮಾನ್ವಿದ್ವಾಂಚ್ಛ್ರೀಕೃಷ್ಣದೀಕ್ಷಿತಃ
ತಾಮ್ರಶಾಸನಗಾನ್ ಶ್ಲೋಕಾನುಕ್ತ್ವಾ ಲಿಖ್ಯ ವಿರಾಜತೇ ||

---

* Ec. III, ಟಿ. ನರಸೀಪುರ 63.

# ಗ್ರಂಥಋಣ


೧. Volumes of Epigraphia India.
೨. Volumes of Epigraphia Carnatica.
೩. Volumes of South Indian Inscriptions.
೪. Volumes of Karnatak Inscriptions.
೫. Bombay branch Royal Asiatic Society Journal Vol. X. No. XXIX
೬. A corpus of Inscriptions in the Kannada Districts of Hydrabad State.
೭. Inscriptions in Northern Karnatak and Kolhapur State (K. G. Kundangar).
೮. Andhra Pradesh Govt. Archaeological series No. 3.
೯. Karnatak University Journal : Humanities Vol. XI, 1967.
೧೦. ಕೊಪ್ಪಳ ಜಿಲ್ಲೆಯ ಶಾಸನಗಳು [ಡಾ. ಪಾಂ. ಭೀ. ದೇಸಾಯಿ].
೧೧. ಶಾಸನ ಸಾಹಿತ್ಯಸಂಚಯ [ಶ್ರೀ ಅಣ್ಣಿಗೇರಿ ಮತ್ತು ಮೇವುಂಡಿ].
೧೨. ಪಟ್ಟದಕಲ್ಲ ಗುಡಿಗಳು [ಶ್ರೀ ಎ. ಎಂ. ಅಣ್ಣಿಗೇರಿ, ಎಂ. ಎ.]
೧೩. ಕನ್ನಡ ಸಾಹಿತ್ಯಪರಿಷತ್ಪತ್ರಿಕೆ, ಸಂ. ೪೩ ಮತ್ತು ೪೫ [ಶ್ರೀ ಶ್ರೀನಿವಾಸರಿತ್ತಿಯವರ ಲೇಖನ: ಶಿಲಾಶಾಸನಗಳ ಕೆಲವು ಕನ್ನಡ ಕವಿಗಳು.]
೧೪. ಭಾರತಿ: ತೆಲುಗು ಪತ್ರಿಕೆ–೧೯೬೭ ಮಾರ್ಚ್ [ಡಾ. ವೆಂಕಟರಮಣಯ್ಯನವರ ಲೇಖನ].
೧೫. ಕರ್ಣಾಟಕ ಕವಿಚರಿತೆ [ಆರ್. ನರಸಿಂಹಾಚಾರ್ಯ].


———

ಬಿಜಾಪುರದಲ್ಲಿ ನಡೆಯಲಿರುವ ೭೯ನೇ ಅಖಿಲ ಭಾರತ ಸಾಹಿತ್ಯ ಸಮ್ಮೇಳನದ ಸಂದರ್ಭದಲ್ಲಿ ಪ್ರಕಟವಾಗುತ್ತಿರುವ ಕೃತಿ ಇದು. ಕನ್ನಡ ಓದುಗರು ಎಂದಿಗೂ ಮರೆಯಬಾರದ ಲೇಖಕರು ಹಾಗೂ ಕೃತಿಗಳನ್ನು ನೆನಪು ಮಾಡಿಕೊಡುವ ಹಾಗೂ ಸಮಕಾಲೀನ ಕನ್ನಡ ಸಾಹಿತ್ಯಕ್ಕೆ ಹಳೆಯ ಬೇರುಗಳ ರಸಸ್ಪರ್ಶ ದೊರೆಯಲೆಂಬ ಉದ್ದೇಶದಿಂದ ಇಂಥ ಇಪ್ಪತ್ತೈದು ಲೇಖಕರ ಕೃತಿಗಳನ್ನು ಆಯ್ದು ಪ್ರಕಟಿಸಲಾಗುತ್ತಿದೆ.

ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಮಹತ್ತ್ವದ ಸ್ಥಾನವನ್ನು ಪಡೆದಿರುವ ಈ ಇಪ್ಪತ್ತೈದು ಕೃತಿಗಳನ್ನು ಓದುಗರು ಹಾಗೂ ಸಾಹಿತ್ಯಾಸಕ್ತರು ವಿಶೇಷ ಪ್ರೀತಿ ಅಭಿಮಾನಗಳಿಂದ ಸ್ವಾಗತಿಸುತ್ತಾರೆಂದು ನಂಬಿದ್ದೇನೆ.

**ಪುಂಡಲೀಕ ಹಾಲಂಬಿ**
ಅಧ್ಯಕ್ಷರು




ಕನ್ನಡ ಸಾಹಿತ್ಯ ಪರಿಷತ್ತು
ಪಂಪ ಮಹಾಕವಿ ರಸ್ತೆ, ಚಾಮರಾಜಪೇಟೆ
ಬೆಂಗಳೂರು ೫೬೦೦೧೮

